# Maha Bharata Sangraha

# ಮಹಾಭಾರತ ಸಂಗ್ರಹ.

## ಸಭಾಪರ್ವ.

(೪)

ಆಸ್ಥಾನ ವಿದ್ವಾನ್ ಮತ್ತು ಕನ್ನಡ ಸ್ಕೂಲ್
ರಿ. ಹೆಡ್‌ಮಾಸ್ಟರ್ ಕುಮಾಂಡೂರು
**ರಾಮಸ್ವಾಮಯ್ಯಂಗಾರ್ಯರಿಂದ ಬರೆಯಲ್ಪಟ್ಟು**

ರಾಜಸಭಾಭೂಷಣ, ರಿಟೈರ್ಡ್ ಚೀಫ್ ಇಂಜನಿಯರ್
**ಕರ್ಪೂರ ಶ್ರೀನಿವಾಸರಾಯರವರಿಂದ**
ಪರಿಶೋಧಿಸಿ ಪ್ರಕಟಿಸಲ್ಪಟ್ಟಿದೆ.

**1921.**

PRINTED BY NAVARATNA & Co., AT THE J. L. N. PRESS,
BANGALORE CITY.



# ಪೀಠಿಕೆ.

ಮಹಾಭಾರತವು ಅನೇಕ ನೀತಿವಿಚಾರಗಳನ್ನು ಒಳಗೊಂಡಿರುವುದರಿಂದ ಸರ್ವಜನಾದರಣೀಯವಾಗಿರುತ್ತದೆ. ಇದರ ಕಥಾಭಾಗವು ಕನ್ನಡ ನಾಡಿನ ಬಾಲಕಬಾಲಕಿಯರಿಗೆ ಸುಲಭವಾಗಿ ಬೋಧೆಯಾಗುವಂತೆ ಭಾರತದ ಆದಿಪಂಚಕದಲ್ಲಿ ಈವರೆಗೆ ವಿರಾಟಪರ್ವ, ಉದ್ಯೋಗಪರ್ವ, ಆದಿಪರ್ವಗಳನ್ನು ಪ್ರತ್ಯೇಕವಾಗಿ ಪ್ರಕಟಿಸಿರುವುದು ಸರಿಯಷ್ಟೆ. ಈಗ ಸಭಾಪರ್ವವನ್ನೂ ಮುಗಿಸಲಾಯಿತು. ಉಳಿದ ವನಪರ್ವವನ್ನು ಕೂಡ ಇಷ್ಟರಲ್ಲಿಯೇ ಪ್ರಕಟೀಕರಿಸುವ ಪ್ರಯತ್ನಮಾಡಿರುತ್ತೇನೆ. ಮಿಕ್ಕ ಪರ್ವಗಳಲ್ಲಿನ ಕಥಾಭಾಗಗಳನ್ನು ಮಾತ್ರ ಸಂಗ್ರಹಿಸಿ ಮೂರುನಾಲ್ಕು ಸಂಪುಟಗಳಲ್ಲಿಯೇ ಮುಗಿಯಿಸಬೇಕೆಂದಿರುತ್ತೇನೆ. ಇದರಿಂದ ನಮ್ಮ ದೇಶೀಯ ಬಾಲಕರಿಗೆ ಕೊಂಚಮಟ್ಟಿಗಾದರೂ ಉಪಯೋಗವಾಗುವುದಾದರೆ ನನ್ನ ಪ್ರಯತ್ನವು ಸಾರ್ಥಕವಾದಂತೆ ಭಾವಿಸುತ್ತೇನೆ.

ಪ್ರಕಾಶಕ.

# ಸಭಾಪರ್ವದ ವಿಷಯಸೂಚಿಕೆ.



# ಸಭಾಪರ್ವದ ಶುದ್ಧಪತ್ರಿಕೆ.



| ಪುಟ. | ಪಂಙ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೧ | ೫ | ಠಾಜ | ರಾಜ |
| ,, | ೨೧ | ಭಾಷಿಗಲ್ಲ | ಭಾಷೆಗಳಲ್ಲಿ |
| ೧೩ | ೧೧ | ತೊಂದರಿ | ತೊಂದರೆ |
| ೧೫ | ೧೦ | ಕೋಟಿಗಳಲ್ಲ | ಕೋಟಿಗಳಲ್ಲಿ |
| ೧೮ | ೯ | ಸಿದ್ದ | ಸಿದ್ಧ |
| ೨೧ | ೧೦ | ದೊರಯೆ | ದೊರೆಯೆ |
| ೨೩ | ೧ | ವಿದಿ | ವಿಧಿ |
| ೨೫ | ೧೯ | ಅಪವು | ಆವವು |
| ೩೧ | ೧೦ | ಸವರ್ಣ | ಸುವರ್ಣ |
| ೩೬ | ೨ | ಠಾಜ | ರಾಜ |
| ,, | ೧೨ | ಜಾಗ್ರತೆಯಲ್ಲ | ಜಾಗ್ರತೆಯಲ್ಲಿ |
| ೩೭ | ೧೩ | ನಾಠದ | ನಾರದ |
| ೪೦ | ೬ | ವಿಠಾ | ವೀರಾ |
| ೪೧ | ೧೧ | ನೆರವೇರುವುದರಲ್ಲ | ನೆರವೇರುವುದರಲ್ಲಿ |
| ೪೩ | ೧೮ | ಹೆಡ್ಡಠು | ಹೆಡ್ಡರು |
| ೪೭ | ೧೪ | ಕಾಯುತ್ತಿದ | ಕಾಯುತ್ತಿದ್ದ |
| ೫೧ | ೭ | ಆಸೆ | ಪ್ರಾಣದಾಸೆ |
| ೫೯ | ೯ | ಅದರ ಅಪ್ಪರ | ಅದರ ಪ್ರಕಾರ |
| ೬೦ | ೪ | ಭಗವಧ್ಯಾನ | ಭಗವಧ್ಯಾನ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೬೧ | ೧೮ | ಸಂತೋಪ | ಸಂತೋಷ |
| ೬೩ | ೧೯ | ಪ್ರಾಗ್ಜ್ಯೋಷ | ಪ್ರಾಗ್ಜ್ಯೋತಿಷ |
| ೬೪ | ೯ | ಯೋಯಿತು | ಹೋಯಿತು |
| ೬೭ | ೧೭ | ಆಪರನೇಕ | ಅವರನೇಕ |
| ೬೯ | ೧೫ | ಸೀಮೆಯಲ್ಲ | ಸೀಮೆಯಲ್ಲಿ |
| ೭೨ | ೧೮ | ಜನರೆಲ್ಲಾ | ಜನರನ್ನು |
| ೭೩ | ೧೮ | ಭಗವತ್ತ | ಭಗದತ್ತ |
| ೭೪ | ೧೮ | ಕೋಡು | ನೋಡು |
| ೮೦ | ೧ | ನಡೆಯುಪಂತೆ | ನಡೆಯುವಂತೆ |
| ೮೯ | ೨೧ | ಮಧ್ಯದಲ್ಲ | ಮಧ್ಯದಲ್ಲಿ |
| ೯೮ | ೧೬ | ಶೂರರ | ಶೂರರು |
| ೧ ,, | ೧೮ | ನುಡಿಗಳನು | ನುಡಿಗಳನ್ನು |
| ೧೦೦ | ೮ | ಎರಡ | ಎರಡು |
| ೧೦೪ | ೧೦ | ಆತನ | ಈತನ |
| ೦೭ | ೨ | ವವ್ಯಹಾರ | ವ್ಯವಹಾರ |
| ೧ ,, | ೧೫ | ಸಂಭವಿಸಿದರಂದು | ಸಂಭವಿಸಿದರೆಂದು |
| ೦೯ | ೧೫ | ಮದ್ಯಮರು | ಮಧ್ಯಮರು |
| ೧ ,, | ೨೨ | ಪುಲುಕಿತ | ಪುಳುಕಿತ |
| ೧೧೦ | ೧೬ | ಗೃಹಿಸಿಯೋ | ಗ್ರಹಿಸಿಯೋ |
| ೧೧೫ | ೧ | ಅದನ್ನು | ಅಥವಾ ಅದನ್ನು |
| ೧೦೬ | ೧೩ | ಗರ್ವವನ್ನು | ಗರ್ವವನ್ನು |
| ೧೨೦ | ೩ | ಸಾನ್ನಿದ್ಧ | ಸಾನ್ನಿಧ್ಯ |
| ೧೨೨ | ೩ | ಠಾಯನೇ | ರಾಯನೇ |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ೧೨೨ | ೨೩ | ಪಾಣಿ | ವಾಣಿ |
| ೧೨೫ | ೧ | ಸುಖಪಾಗಿ | ಸುಖವಾಗಿ |
| ೧೨೮ | ೧೭ | ಪ್ರಯತ್ನಯ | ಪ್ರಯತ್ನ |
| ೧೩೩ | ೨ | ಅವರದಲ್ಲಿ | ಅವರಲ್ಲೆ |
| ೧೪೨ | ೨ | ಸವುಯದಲ್ಲ | ಸಮಯದಲ್ಲಿ |
| ೧೪೭ | ೨೧ | ಅಲ್ಲಿಂದ | ಅಲ್ಲಿಂದ |
| ೧೫೨ | ೧೭ | ಚೃಷ್ಟಿಯೇ | ದೃಷ್ಟಿಯನ್ನೇ |
| ೧೫೭ | ೩ | ತಡೆದಿದ್ದೇನೆ | ತಡೆದಿದ್ದೆನು |
| ೧೫೯ | ೫ | ಪತ್ಯಕ್ಷದಲ್ಲ | ಪ್ರತ್ಯಕ್ಷದಲ್ಲಿ |
| ೧೬೩ | ೧೭ | ಆವರೆಲ್ಲರೂ | ಅವರೆಲ್ಲರೂ |
| ೧೬೫ | ೩ | ಪುಷ್ಪರಾಗ | ಪುಷ್ಯರಾಗ |
| ,, | ೭ | ನಿಲೋತ್ಪಲ | ನೀಲೋತ್ಪಲ |
| ೧೮೨ | ೨ | ಹತ್ತಲಿಲ್ಲರ | ಹತ್ತಲಿಲ್ಲ. |
| ೧೮೩ | ೪ | ನಗ್ಗುತ್ತಿರುವ | ನುಗ್ಗುತ್ತಿರುವ |
| ೧೯೩ | ೧೮ | ಲಷ್ಮಿ | ಲಕ್ಷ್ಮಿ |
| ೧೯೪ | ೧೭ | ಕಾರವ | ಕೌರವ |
| ೧೯೫ | ೪ | ಪ್ರಸಿದ್ಧಿ | ಪ್ರಸಿದ್ಧ |
| ,, | ೭ | ಕಡ್ಡಿ | ಕಡ್ಡಿ |
| ೨೦೧ | ೭ | ಪಾಂಟಾಲಿ | ಪಾಂಚಾಲಿ |
| ೨೦೩ | ೧ | ಅವಾರ | ಆವಾರ್ಯ |
| ೨೧೦ | ೮ | ಬಾಲಾತ್ಕಾರ | ಬಲಾತ್ಕಾರ |
| ೨೨೫ | ೫ | ನಿಸಿಯನ್ನು | ನಿರಿಯನ್ನೂ |
| ೨೩೩ | ೨೦ | ಚಿಂತ್ರ | ಚಿತ್ರ |

| ಪುಟ. | ಪಂಙ್ತಿ | ಅಶುದ್ಧ | ಶುದ್ಧ. |
|---|---|---|---|
| ೨೩೮ | ೭ | ಯಾವುರೂದೋ | ಯಾವುದೋ |
| ೨೪೯ | ೧೯ | ಈಗ ಆದರೂ | ಈಗಲಾದರೂ |
| ೨೬೫ | ೪ | ರಾಷ್ಟ್ರ | ರಾಷ್ಟ್ರ |
| ೨೭೦ | ೧೯ | ಯುಧಿಷ್ಟ್ರರ | ಯುಧಿಷ್ಠಿರ |
| ೨೭೧ | ೩ | ಸಧಿನ್ನಿ | ಸನ್ನಿಧಿ |
| ,, | ೪ | ತೀರವ | ತೀರುವ |
| ೨೭೨ | ೧೧ | ಕೃಷ್ಣಜದಲೂ | ಕೃಷ್ಣನಿಂದಲೂ |
| ೨೭೬ | ೧೮ | ಧನು | ಘನನು |



# ಮಹಾಭಾರತ ಸಂಗ್ರಹ.

## ಸ ಭಾ ಪ ರ್ವ.

### ಮೊದಲನೆಯ ಸಂಧಿ.

ನಾರಾಯಣಂ ನಮಸ್ಕೃತ್ಯ ನರಂಚೈವನರೋತ್ತಮಂ |
ದೇವೀಂಸರಸ್ವತೀಂವ್ಯಾಸಂ ತತೋಜಯಮುದೀರಯೇತ್ ||

ಸೂ || ಮಯನು ಧರ್ಮರಾಯನಿಗೆ ಸಭೆಯನ್ನು ನಿರ್ಮಿಸಿ ಕೊಟ್ಟನು. ಆ ಸಭೆಯಲ್ಲಿ ನಾರದರಿಂದ ಯುಧಿಷ್ಠಿರನಿಗೆ ರಾಜನೀತಿಗಳು ಉಪದೇಶಿಸಲ್ಪಟ್ಟುವು.

ಕೃಷ್ಣಾರ್ಜುನರು ಅಗ್ನಿದೇವನ ಸಹಾಯದಿಂದ ಖಾಂಡವ ವನವನ್ನು ದಹಿಸುವಾಗ ಶರಣಾಗತನಾದ ಮಯನನ್ನು ಕೊಲ್ಲದೆ ಉಳಿಸಿದರಷ್ಟೆ! ಅವನು ಆ ಪೀರರ ಉಪಕಾರವನ್ನು ಸ್ಮರಿಸಿ ಅವರನ್ನು ಕುರಿತು ಇಂತೆಂದನು.

ಮಯ.—ಎಲೈ ಪಾರ್ಥನೇ, ನೀನು ವಿಪತ್ಕಾಲದಲ್ಲಿ ನನ್ನ ಪ್ರಾಣ ಉಳಿಸಿ ಸಂರಕ್ಷಿಸಿದೆ. ಈ ದೇಹವು ನಿನ್ನದಾಗಿದೆ. ಈಗ ನನ್ನ ಕೃತಜ್ಞತೆಯನ್ನು ತೋರಿಸಿ ಕೃತಾರ್ಥನಾಗಬೇಕೆಂದು ಬಹಳ ವಾಗಿ ಆಶಿಸುತ್ತೇನೆ. ನಾನು ದೈತ್ಯರ ವಿಶ್ವಕರ್ಮನಾಗಿ ವಿಚಿತ್ರ ವಾದ ಕಟ್ಟಡಗಳನ್ನು ಕಟ್ಟುವುದರಲ್ಲಿ ನಿಪುಣನೆನಿಸಿಕೊಂಡಿದ್ದೇನೆ. ದಯೆಮಾಡಿ ನನ್ನ ಸೇವೆಯನ್ನು ಪರಿಗ್ರಹಿಸಿ ನನ್ನ ಮನೋರಥವನ್ನು ನೆರವೇರಿಸಬೇಕು.

ಅರ್ಜುನ.—ಎಲೈ ಮಯನೇ, ಸಹಾಯಾಪೇಕ್ಷೆಯಿಂದ ನಾವು ನಿನಗೆ ಉಪಕಾರ ಮಾಡಿದವರಲ್ಲವು. ಶರಣಾಗತರನ್ನು ರಕ್ಷಿಸುವ ಧರ್ಮವನ್ನು ನಾವು ನಡಿಸಿದೆವೇ ಹೊರತು ಹೆಚ್ಚು ಕೆಲಸವೇನೂ ಮಾಡಿಲ್ಲ. ಆದರೂ ನಿನ್ನ ಪ್ರಾರ್ಥನೆಯನ್ನು ನಿರಾಕರಿಸಬಾರದು. ನಮ್ಮ ಸ್ವಾಮಿಯಾದ ಶ್ರೀಕೃಷ್ಣನಿಗೆ ಹೇಗೆ ಇಷ್ಟವೋ ಹಾಗೆ ನಡಿಸಬಹುದು

ಆಗ ಮಯನು ಶ್ರೀಕೃಷ್ಣನ ಮುಖವನ್ನು ನೋಡಿ ಕೈಮುಗಿದು ತನ್ನ ಇಷ್ಟವನ್ನು ತಿಳಿಸಲು ಶ್ರೀಕೃಷ್ಣನಿಂತೆಂದನು.

ಶ್ರೀಕೃ.—ಎಲೈ ಮಯನೇ. ನೀನು ಈ ವೀರನಿಗೆ ಪ್ರತ್ಯುಪಕಾರವನ್ನು ಮಾಡಬೇಕೆಂದು ಅಪೇಕ್ಷಿಸಿದರೆ ನಮ್ಮ ದೊರೆಯಾದ ಯುಧಿಷ್ಠಿರನಿಗೋಸ್ಕರ ನಿನ್ನ ಬುದ್ಧಿಚಾತುರ್ಯವನ್ನೆಲ್ಲಾ ಉಪಯೋಗಿಸಿ ಶ್ರೇಷ್ಠವಾದ ಒಂದು ಸಭಾಮಂದಿರವನ್ನು ನಿರ್ಮಿಸಿಕೊಡು. ಅದು ಲೋಕತ್ರಯದಲ್ಲಿಯೂ ಅಸದೃಶವೆನಿಸುವಂತೆ ಇರಬೇಕು.

ಮಯ.—ತಮ್ಮ ಅಪ್ಪಣೆಯಂತೆ ಸಭೆಯನ್ನು ಕಟ್ಟಿಕೊಡುವೆನು.

ಬಳಿಕ ಕೃಷ್ಣಾರ್ಜುನರು ಆ ಮಯನೊಂದಿಗೆ ಇಂದ್ರಪ್ರಸ್ಥಕ್ಕೆ ಹೋದರು. ಅಲ್ಲಿ ಯುಧಿಷ್ಠಿರನ ಸಮಯವರಿತು, ಆ ಮಯನಿಗೆ ರಾಜಸಂದರ್ಶನ ಮಾಡಿಸಿದರು. ಯುಧಿಷ್ಠಿರನು ಮಯನ ಪ್ರಾರ್ಥನೆಯಂತೆ ಸಭೆಯನ್ನು ಕಟ್ಟಿಕೊಡಬಹುದೆಂದು ಒಪ್ಪಿದನು. ಬಳಿಕ ಶಿಲ್ಪಿಯು ತಾನು ಪೂರ್ವದಲ್ಲಿ ವೃಷಪರ್ವನೆಂಬ ದೈತ್ಯರಾಜನಿಗೆ ಒಂದು ಮಹಾ ಸಭೆಯನ್ನು ಕಟ್ಟಿಕೊಡಬೇಕೆಂದು ಸಂಗ್ರಹಿಸಿದ್ದ ಉಪಕರಣಗಳನ್ನೆಲ್ಲಾ ಬಿಂದುಸರೋವರದಲ್ಲಿ ಇಟ್ಟಿದ್ದುದರಿಂದ ಅವುಗಳನ್ನು

ತಂದು ಸಭೆಯ ಕೆಲಸ ಪ್ರಾರಂಭಿಸುವೆನೆಂದು ಹೇಳಿ ಯುಧಿಷ್ಠಿರನ ಅಪ್ಪಣೆಪಡೆದು ಅಲ್ಲಿಗೆಹೋದನು.

ಶ್ರೀಕೃಷ್ಣನು ತಾನು ದ್ವಾರಕಾಪುರವನ್ನು ಬಿಟ್ಟುಬಂದು ಬಹು ದಿನಗಳಾದುದರಿಂದ ಒಂದುಸಾರಿ ಅಲ್ಲಿಗೆಹೋಗಿ, ವಸುದೇವಾದಿ ಬಾಂಧವರನ್ನೆಲ್ಲಾ ನೋಡಿ ಬರುವೆನೆಂದು ಪಾಂಡವರ ಸಂಗಡ ಹೇಳಿ, ತನ್ನ ರಾಜಧಾನಿಗೆ ಹೊರಟನು.

ಇತ್ತ ಬಿಂದುಸರೋವರಕ್ಕೆ ಹೋಗಿದ್ದ ಮಯನು ತನಗೆ ಬೇಕಾದ ವಜ್ರವೈಡೂರ್ಯಾದಿ ರತ್ನಗಳನ್ನೂ ಇತರ ಉಪಕರಣಗಳನ್ನೂ ತೆಗೆಯಿಸಿಕೊಂಡು ತನ್ನ ಪರಿವಾರವಾದ ಎಂಟುಸಾವಿರ ಮಂದಿ ರಾಕ್ಷಸರೊಂದಿಗೆ ಇಂದ್ರಪ್ರಸ್ಥಕ್ಕೆ ಬಂದನು. ಧರ್ಮರಾಯನ ಆಜ್ಞೆಯಿಂದ ಶುಭಲಗ್ನದಲ್ಲಿ ಹತ್ತುಸಾವಿರ ಕಿಷ್ಕು (400 ಗಜ=ಒಂದು ಕಿಷ್ಕು) ಗಳ ಪ್ರಮಾಣದ ಭೂಮಿಯನ್ನು ಅಳೆಯಿಸಿ, ಸಭಾಭವನಕ್ಕೆ ಅಸ್ತಿವಾರ ಹಾಕಿದನು. ದೇವತಾಪೂಜೆಗಳನ್ನು ಮಾಡಿದಮೇಲೆ ತನ್ನ ಚಾತುರ್ಯವನ್ನೆಲ್ಲಾ ಉಪಯೋಗಿಸಿ ಅದ್ವಿತೀಯವಾದ ಸಭೆಯೊಂದನ್ನು ನಿರ್ಮಿಸಿದನು.

ಆ ಸಭೆಯು ತನ್ನ ಕಾಂತಿವಿಶೇಷದಿಂದ ದೇವೇಂದ್ರನ ಸಭೆಯನ್ನೂ, ಇತರ ದಿಕ್ಪಾಲರ ಸಭೆಗಳನ್ನೂ, ಸೋಮಸೂರ್ಯರ ಸಭೆಗಳನ್ನೂ ತಿರಸ್ಕರಿಸುತ್ತಿದ್ದಿತು. ಅದರಲ್ಲಿ ಸ್ಫಟಿಕಶಿಲೆಯ ನೆಲಗಟ್ಟುಗಳೂ, ಪಚ್ಚೆಯ ಜಗಲಿಗಳೂ, ವಜ್ರದ ಗೋಡೆಗಳೂ, ಗೋಮೇಧಕದ ಬೋದಿಗೆಗಳೂ, ಮುತ್ತುಗಳ ತೋಪೆಗಳೂ, ಪವಳದ ತೋರಣಗಳೂ, ಚಂದ್ರಕಾಂತದ ಸಿಲುವುಗನ್ನಡಿಗಳೂ, ಅಮೃತಶಿಲೆಯ ಸ್ತಂಭಗಳೂ ಕಂಗೊಳಿಸುತ್ತಿದ್ದುವು. ಒಳಕ್ಕೆ ಪ್ರವೇಶಿಸಿ ನೋಡಿದರೆ ಗೋಡೆ ಇಲ್ಲದಕಡೆ ಗೋಡೆ ಇರುವಂತೆಯೂ ಬಾಗಿಲು

ಇರುವಕಡೆ ಬಾಗಿಲಿಲ್ಲದಂತೆಯೂ ಬಾಗಿಲು ಇಲ್ಲದ ಕಡೆ ಇರುವಂತೆಯೂ ಭ್ರಾಂತಿಯುಂಟುಮಾಡುತ್ತಿದ್ದಿತು. ಮತ್ತು ಆ ಸಭಾಂಗಣದಲ್ಲಿ ಸ್ವಾಭಾವಿಕ ಸರೋವರಗಳೂ ಕೃತಕ ಸರೋವರಗಳೂ ನಿರ್ಮಿಸಲ್ಪಟ್ಟಿದ್ದುವು. ನಿಜವಾದ ಕೊಳಗಳ ತುಂಬ ನೀರಿದ್ದರೂ ನೋಡಿದವರಿಗೆ ಭೂಪ್ರದೇಶದಂತೆಯೇ ಕಾಣುತ್ತಿದ್ದಿತು. ಕೃತಕವಾದುವುಗಳಲ್ಲಿ ನೀರಿಲ್ಲದಿದ್ದರೂ ಜಲ ಸಮೃದ್ಧಿಯಾಗಿರುವಂತೆ ಕಾಣುತ್ತಿದ್ದಿತು, ಅವುಗಳಲ್ಲಿಯ ನೀರೂ, ತಾವರೆ ನೈದಿಲೆ ಮುಂತಾದ ಪುಷ್ಪಗಳೂ, ಹಂಸ, ಕಾರಂಡವಾದಿ ಪಕ್ಷಿಗಳೂ, ಎಲ್ಲಾ ಕೃತಕಗಳೇ ಆಗಿದ್ದರೂ ನೋಡಿದವರಿಗೆ ಇದು ಸ್ವಾಭಾವಿಕವೆಂದು ತೋರುತ್ತಿದ್ದಿತೇ ಹೊರತು ಕಲ್ಪಿತವೆಂದು ಗೊತ್ತಾಗುತ್ತಿರಲಿಲ್ಲ. ಇವುಗಳಂತೆಯೇ ಕಲ್ಪಿತ ವೃಕ್ಷಗಳು ಸದಾಕಾಲವೂ ಪುಷ್ಪಫಲಭರಿತಗಳಾಗಿ ನಿಜವಾದ ಮರಗಳಂತೆಯೇ ಬಣ್ಣದಲ್ಲಿಯೂ ಕಾಂತಿಯಲ್ಲಿಯೂ ಸ್ವಲ್ಪವೂ ಭೇದ ತೋರದೆ ಇದ್ದುವು. ಅಲ್ಲಲ್ಲಿ ಕೃತಕಗಿರಿಗಳೂ, ವಿಹಾರ ಮಂಟಪಗಳೂ ರತ್ನದೀಪಗಳೂ, ಸ್ವತಃ ಗಾಳಿಯನ್ನು ಬೀಸುತ್ತಿರುವ ಬೀಸಣಿಗೆಗಳೂ, ಜನರಿಗೆ ಸಕೆ ತೋರದಂತೆ ಪನ್ನೀರು, ಗಂಧ ಪುಷ್ಪಾದಿಗಳನ್ನು ಎರಚುತ್ತಿರುವ ಸೂತ್ರದ ಬೊಂಬೆಗಳೂ ನಿರ್ಮಿತವಾಗಿದ್ದುವು. ಲೋಕೋತ್ತರವಾಗಿಯೂ ಅತ್ಯಾಶ್ಚರ್ಯಕರವಾಗಿಯೂ ಇರುವ ಈ ಸಭಾಮಂಟಪವನ್ನು ಸಾಮಾನ್ಯಜನರು ಪ್ರವೇಶಿಸಿದರೆ ತಿಳಿಯದೆ ಮೋಸಹೋಗಿ ಭ್ರಾಂತಿಯಿಂದ ನೋಟಕರ ಹಾಸ್ಯಕ್ಕೆ ಗುರಿಯಾಗುತ್ತಿದ್ದರು.

ಇಂತಹ ದಿವ್ಯ ಸಭೆಯನ್ನು ಕಟ್ಟಿ ಮುಗಿಸಲು ಮಯನೆಂಬ ಶಿಲ್ಪಿಗೆ ಹದಿನಾಲ್ಕು ತಿಂಗಳು ಹಿಡಿಯಿತು. ಆತನು ಸಭೆಯನ್ನು ಪೂರಯಿಸಿ, ಮಹಾರಾಜನಾದ ಯುಧಿಷ್ಠಿರನಿಗೆ ಅದನ್ನು ವಿನಯದಿಂದ

ಒಪ್ಪಿಸಿದನು. ಭೀಮಸೇನನಿಗೆ ದೊಡ್ಡದಾದ ಒಂದು ಗದೆಯನ್ನೂ, ಅರ್ಜುನನಿಗೆ ದೇವದತ್ತವೆಂಬ ಶಂಖವನ್ನೂ ಕಾಣಿಕೆಯಾಗಿ ಸಮರ್ಪಿಸಿ, ಆ ಪಾಂಡವರಿಂದ ಮನ್ನಣೆಗಳನ್ನು ಪಡೆದು ಹೊರಟುಹೋದನು.

ಆಬಳಿಕ ರಾಜನು ಒಂದು ಶುಭಮುಹೂರ್ತದಲ್ಲಿ ಸಭಾ ಪ್ರವೇಶಮಾಡಲು ಲಗ್ನವನ್ನು ನಿಶ್ಚಯಿಸಿದನು. ಪ್ರಮುಖರಾದ ಮಹರ್ಷಿಗಳಿಗೂ, ಪರಿಚಿತರಾದ ರಾಜರಿಗೂ, ಪ್ರಸಿದ್ಧಪಡೆದ ದೊಡ್ಡಮನುಷ್ಯರಿಗೂ ಆಮಂತ್ರಣಪತ್ರಗಳನ್ನು ಕಳುಹಿದನು. ಈ ವಿಷಯವು ಸಮಸ್ತದೇಶಗಳಲ್ಲಿಯೂ ತಂತಿಯ ವಾರ್ತೆಯಂತೆ ಬಹುಬೇಗ ತಿಳಿದುದರಿಂದ ಜನರು ಗುಂಪುಗುಂಪಾಗಿ ಇಂದ್ರಪ್ರಸ್ಥದಕಡೆಗೆ ಬರುತ್ತಿದ್ದರು. ವೇದವೇದಾಂಗ ಪಾರಂಗತರಾಗಿಯೂ, ಯೋಗಸಿದ್ಧರಾಗಿಯೂ, ಬ್ರಹ್ಮಜ್ಞಾನಿಗಳಾಗಿಯೂ, ಧರ್ಮಜ್ಞರಾಗಿಯೂ, ಜಿತೇಂದ್ರಿಯರಾಗಿಯೂ, ತೇಜಸ್ವಿಗಳಾಗಿಯೂ ಇರುವ ಮಹರ್ಷಿಗಳು ಬಹುಮಂದಿ ಬಂದು ಸೇರಿದರು. ಅವರಲ್ಲಿ ಮುಖ್ಯರಾದ ಕೆಲವರ ಹೆಸರುಗಳನ್ನು ಮಾತ್ರ ಇಲ್ಲಿ ಹೇಳುವೆವು. ವಸಿಷ್ಠ, ವಿಶ್ವಾಮಿತ್ರ, ಗಾಲವ, ವಾಮದೇವ, ಅತ್ರಿ, ಭೃಗು, ಕೌಂಡಿನ್ಯ, ಮಾರ್ಕಂಡೇಯ, ಯಾಜ್ಞವಲ್ಕ್ಯ, ವೇದವ್ಯಾಸ, ಶುಕ, ಬಕ, ದಾಲ್ಭ್ಯ ಮುಂತಾದವರು. ಅವರು ಇಂದ್ರಪ್ರಸ್ಥಕ್ಕೆ ಬಂದು ಯುಧಿಷ್ಠಿರನ ಆತಿಥ್ಯದಿಂದ ಸಂತುಷ್ಟರಾಗಿ ಮಯನ ಸಭೆಯ ನಿರ್ಮಾಣಕೌಶಲ್ಯವನ್ನು ನೋಡಿ ಆಶ್ಚರ್ಯಪಡುತ್ತಿದ್ದರು.

ಮತ್ತು ಅಂಗ, ವಂಗ, ಕಳಿಂಗ, ಕಾಂಭೋಜ, ಆಂಧ್ರ, ಕರ್ಣಾಟಕ, ಚೋಳ, ಪಾಂಡ್ಯ, ಕೇರಳ, ಮಹಾರಾಷ್ಟ್ರ, ಘೂರ್ಜರ, ಯವನ, ಹೂಣ, ಬರ್ಬರ ಮುಂತಾದ ನಾನಾ ದೇಶದ ರಾಜರುಗಳು ಅಥವಾ ಅವರಕಡೆ ಪ್ರತಿನಿಧಿಗಳು ಈ ಉತ್ಸವಕ್ಕೆ

ಬಂದು ಯುಧಿಷ್ಠಿರನಿಂದ ಸತ್ಕಾರವನ್ನು ಪಡೆದರು. ಪಾಂಚಾಲ ಯಾದವವಿರಾಜಬಂಧುಗಳೂ, ಅರ್ಜುನನ ಸ್ನೇಹಿತನಾದ ಚಿತ್ರರಥ ನೆಂಬ ಗಂಧರ್ವನೂ, ಅರ್ಜುನನ ಶಿಷ್ಯರಾದ ನೂರಾರುಮಂದಿ ರಾಜ ಪುತ್ರರೂ ಈ ಮಹೋತ್ಸವಕ್ಕೆ ಬಂದುಸೇರಿದರು. ಬ್ರಾಹ್ಮಣಾದಿ ಚಾತುರ್ವರ್ಣದವರಲ್ಲಿಯೂ ವಿದ್ಯಾವಂತರೂ, ಕವಿಗಳೂ, ಚತು ರರೂ ಆದ ಪ್ರಸಿದ್ಧ ಜನರೆಲ್ಲರೂ ಅಲ್ಲಿಗೆ ಬಂದು ಸೇರಿದರು. ಉತ್ಸ ವಕ್ಕೋಸ್ಕರ ಬಂದ ಜನರಿಗೆ ಆಹಾರಪಾನೀಯಗಳಲ್ಲಿಯೂ ವಸ್ತ್ರ ಭೂಷಣ ಬಹುಮಾನ ದಕ್ಷಿಣಾದಿಗಳಲ್ಲಿಯೂ ಯಾವ ಕೊರತೆಯೂ ಉಂಟಾಗನಂತೆ ರಾಯನು ಬಂದವರನ್ನು ಸತ್ಕರಿಸಲಿಕ್ಕೆ ತಕ್ಕ ಅಧಿ ಕಾರಿಗಳನ್ನು ನಿಯಮಿಸಿದ್ದುದರಿಂದ ನಿರಾಕ್ಷೇಪವಾಗಿ ಎಲ್ಲರಿಗೂ ಆದರಾತಿಥ್ಯಗಳು ಜರುಗಿದುವು. ಗೊತ್ತಾಗಿದ್ದ ಶುಭ ಮುಹೂರ್ತ ದಲ್ಲಿ ಮಹರ್ಷಿಗಳ ಸ್ವಸ್ತಿವಾಚನಗಳೂ, ಮಹಾರಾಜರ ಜಯಧ್ವನಿ ಗಳೂ, ಭೇರಿ ಮೊದಲಾದ ಮಂಗಳವಾದ್ಯಗಳ ಅಬ್ಬರಗಳೂ, ಘೋರ್ಗ ರೆಯುತ್ತಿರಲು ಯುಧಿಷ್ಠಿರನು ಹೊಸ ಸಭಾಮಂಟಪವನ್ನು ಪ್ರವೇಶಿಸಿ ರತ್ನಸಿಂಹಾಸನಾರೋಹಣ ಮಾಡಿದನು. ಸಭೆಗೆ ಬಂದಿದ್ದ ಜನರಿಗೆಲ್ಲಾ ಯಥೋಚಿತವಾದ ಸನ್ಮಾನಗಳು ನಡೆದುವು. ಉತ್ಸವದ ಸಂತ ರ್ಪಣೆಗಳೆಲ್ಲಾ ಮುಗಿದ ಬಳಿಕ ಬಂದಿದ್ದ ಜನರೆಲ್ಲರೂ ಆ ರಾಯನ ಅಪ್ಪಣೆ ಪಡೆದು ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

ಕೆಲವು ದಿನಗಳು ಕಳೆದಬಳಿಕ ಒಂದು ದಿನ ವೇದವೇದಾಂತ ತತ್ವಜ್ಞನಾಗಿಯೂ, ಇತಿಹಾಸ ಪುರಾಣಗಳಲ್ಲಿ ಪಂಡಿತನಾಗಿಯೂ, ನೀತಿಶಾಸ್ತ್ರ ನ್ಯಾಯಶಾಸ್ತ್ರಗಳಲ್ಲಿ ಪ್ರವೀಣನಾಗಿಯೂ, ವಾಗ್ಮಿಯಾ ಗಿಯೂ, ಭೂತಭವಿಷ್ಯದ್ವರ್ತಮಾನಸ್ಥಿತಿಗಳನ್ನು ಬಲ್ಲವನಾಗಿಯೂ, ಸಮಸ್ತರಾಜನೀತಿವಿಶಾರದನಾಗಿಯೂ, ಲೋಕಾನುಗ್ರಹಾರ್ಥ

ವಾಗಿಯೇ ಸದಾಕಾಲವೂ ಸಂಚರಿಸುವ ಸ್ವಭಾವವುಳ್ಳವನಾಗಿಯೂ ಇರುವ ನಾರದ ಮಹರ್ಷಿಯು ತನ್ನ ಸ್ನೇಹಿತರಾದ ಮುನಿಗಳೊಂದೊಡಗೂಡಿ ಆ ನೂತನ ಸಭೆಯನ್ನು ಪವಿತ್ರಮಾಡಿ, ಧರ್ಮರಾಯನಿಗೆ ರಾಜನೀತಿಗಳನ್ನು ಪದೇಶಿಸುವ ಉದ್ದೇಶದಿಂದ ಭಗವನ್ನಾಮ ಸ್ಮರಣೆ ಮಾಡಿಕೊಂಡು, ದಿವ್ಯ ವೀಣಾವಾದನಮಾಡುತ್ತ ಅಲ್ಲಿಗೆ ಬಂದನು. ಕೂಡಲೇ ಯುಧಿಷ್ಠಿರನು ಮುನಿಜನಪರಿವೃತನಾದ ಆ ನಾರದನಿಗೆ ಪ್ರತ್ಯುತ್ಥಾನಾಭಿವಂದನೆಗಳನ್ನು ಮಾಡಿ, ಸ್ವಾಗತಪೂರ್ವಕವಾಗಿ ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ, ಅವರ ಅಪ್ಪಣೆಯಿಂದ ತಮ್ಮಂದಿರೊಂದಿಗೆ ಉಚಿತಾಸನದಲ್ಲಿ ಕುಳಿತುಕೊಂಡನು. ಆಗಲಾ ನಾರದನು ಕುಶಲಪ್ರಶ್ನೆಗಳನ್ನು ಮಾಡುವ ನೆವದಿಂದ ಆ ಯುಧಿಷ್ಠಿರನಿಗೆ ರಾಜನೀತಿಗಳನ್ನೆಲ್ಲಾ ಸಮಗ್ರವಾಗಿ ಉಪದೇಶಿಸಬೇಕೆಂದು ಅಪೇಕ್ಷಿಸಿ, ಆತನನ್ನು ಕುರಿತು ಇಂತೆಂದನು.

ನಾರದ.— ಎಲೈ ರಾಜನೇ, ಧರ್ಮಜ್ಞನಾದ ನಿನಗೆ ಸಹೋದರರೊಡನೆ ಕುಶಲವೆ? ಪ್ರಭುತ್ವ ಮಾಡುತ್ತಲಿರುವವರಿಗೆ ಆಗಾಗ್ಗೆ ಆಪ್ತವಾಕ್ಯಗಳೆಂಬ ಅಂಕುಶದ ಭಯವಿಲ್ಲದಿದ್ದರೆ ಸ್ವೇಚ್ಛಾಪ್ರವರ್ತನದಿಂದಲೂ, ಭ್ರಮಪ್ರಮಾದಾದಿ ದೋಷಗಳಿಂದಲೂ, ಅಧರ್ಮಗಳಿಗೆ ಅವಕಾಶ ಹುಟ್ಟಿ ಅವರು ಅಪಕೀರ್ತಿಗೂ, ದುರ್ಗತಿಗೂ ಗುರಿಯಾಗಬಹುದು. ನೀನು ಧರ್ಮದಿಂದ ರಾಜ್ಯಪರಿಪಾಲನೆ ಮಾಡಿ ಕೀರ್ತಿಪಡೆಯಬೇಕೆಂಬುದೇ ನಮ್ಮ ಅಪೇಕ್ಷೆಯು. ನಿನ್ನ ರಾಜ್ಯಭಾರದ ಆಡಳಿತಗಳು ಹೇಗೆ ನಡೆಯುತ್ತಿವೆ? ಮನಸ್ಸಮಾಧಾನದಿಂದ ಅಪ್ರಮತ್ತನಾಗಿ ರಾಜಕಾರ್ಯಗಳನ್ನು ನಡಿಸುತ್ತಿರುವೆಯಾ?

ಯುಧಿ.— ಮಹಾತ್ಮರೇ, ತಮ್ಮ ಆಜ್ಞೆಯನ್ನು ಶಿರಸಾವಹಿಸಿದೆನು. ತಮ್ಮ ಅನುಗ್ರಹಪ್ರಭಾವದಿಂದ ನಾವೆಲ್ಲರೂ ಕ್ಷೇಮ

ದಿಂದ ಇದ್ದೇವೆ. ನಮ್ಮ ಹಿತಚಿಂತಕರಾಗಿಯೇ ತಾವು ಇಲ್ಲಿಗೆ ದಯ ಮಾಡಿಸಿರುವಿರಿ, ಹಿರಿಯರ ಆಜ್ಞೆಯಂತೆ ರಾಜಕಾರ್ಯಗಳನ್ನು ಯಥಾಮತಿಯಾಗಿ ನಡಿಸುತ್ತಿರುವೆನು. ಮಹಾತ್ಮರಾದ ತಾವು ಹೆಚ್ಚಾದ ನೀತಿಗಳನ್ನು ಉಪದೇಶಮಾಡಿದರೆ ತಿಳಿದುಕೊಂಡು ಕೃತಾರ್ಥನಾಗುವೆನು.

ನಾರ.—ಎಲೈ ಪ್ರಭುವೇ, ನೀನು ಧರ್ಮರಾಯನು, ಅಜಾತಶತ್ರುವು. ಈ ಹೆಸರುಗಳು ಅನ್ವರ್ಥವಾಗುವಂತೆ ಮಾಡಿಕೊಳ್ಳಲಿಕ್ಕೆ ನೀನು ಮನಃಪೂರ್ವಕ ಪ್ರಯತ್ನಿಸಬೇಕು. ಪ್ರಾಜ್ಞನಾದ ನಿನಗೆ ಹೆಚ್ಚಾಗಿ ಹೇಳಬೇಕಾದುದಿಲ್ಲ. ನೀತಿಗಳನ್ನು ಸಂಕ್ಷೇಪವಾಗಿ ತಿಳಿಸುವೆನು ಕೇಳು.

ರಾಯನೇ, ಧರ್ಮಸ್ವರೂಪವು ಬಹುಸೂಕ್ಷ್ಮವಾಗಿರುವುದರಿಂದ ಇದನ್ನು ತಿಳಿದುಕೊಳ್ಳುವುದು ಅಷ್ಟು ಸುಲಭವಲ್ಲ. ಮೊದಲು ಪುರುಷಾರ್ಥಸ್ವರೂಪವನ್ನು ಹೇಳುವೆನು ಕೇಳು. ಅಕೃತ್ರಿಮವಾಗಿಯೂ ನಿತ್ಯವಾಗಿಯೂ ಇರುವ ಆತ್ಮಸುಖಕ್ಕೂ, ತನ್ನಂತೆಯೇ ಭಗವಂತನಿಂದ ಸೃಷ್ಟಿಸಲ್ಪಟ್ಟಿರುವ ಸಮಸ್ತ ಪ್ರಾಣಿಗಳ ಸುಖಕ್ಕೂ ಅನುಕೂಲವಾದ ಕಾರ್ಯಗಳನ್ನೇ ಮಾಡಬೇಕೆಂದು ತಿಳಿದುಕೊಂಡು, ಅದರಂತೆ ಆಚರಣೆಯಲ್ಲಿ ತರುವುದೇ ಉತ್ತಮಧರ್ಮವೆನಿಸುವುದು. ಅರ್ಥವೆಂದರೆ ಕೇವಲ ದ್ರವ್ಯಮಾತ್ರವಲ್ಲ. ಧರ್ಮಾಚರಣೆಗೆಬೇಕಾದ ಸಾಮಗ್ರಿಗಳೆಲ್ಲವೂ ಅರ್ಥದಲ್ಲಿಯೇ ಸೇರಿರುವುವು. ಜ್ಞಾನ, ಶಕ್ತಿ, ಸಂಪತ್ತು, ಬಲ ಮುಂತಾದವುಗಳೆಲ್ಲಾ ಇದರಲ್ಲಿ ಅಡಗಿವೆ. ಇಂತಹ ಅರ್ಥವನ್ನು ಧರ್ಮಕ್ಕೋಸ್ಕರವಾಗಿಯೇ ಉಪಯೋಗಿಸಬೇಕೆಂದು ತಿಳಿದುಕೊಳ್ಳುವ ಉತ್ಕಟೇಚ್ಛೆಯೇ ಪುರುಷಾರ್ಥರೂಪವಾದ ಕಾಮವೆನಿಸುವುದು. ಇವು ಮೂರೂ ಸಿದ್ಧಿಯಾದಲ್ಲಿ ಪಾರ

ಲೌಕಿಕವಾದ ಮೋಕ್ಷಸುಖವುಕೂಡ ಅಂತವನಿಗೆ ಸುಲಭವಾಗಿ ಸಿಕ್ಕುವುದು. ಇವೇ ಪುರುಷಾರ್ಥ ಚತುಷ್ಟಯವೆನಿಸುವುವು. ನೀನು ಇವುಗಳ ಮರ್ಮವನ್ನು ತಿಳಿದುಕೊಂಡು, ಇವುಗಳನ್ನು ಸಂಪಾದಿಸಲು ಪ್ರಯತ್ನಿಸುತ್ತಿರುವೆಯಾ? ವಕ್ತೃತ್ವ, ಪಾಂಡಿತ್ಯ, ಒಳ್ಳೆಯಬುದ್ಧಿ, ಶಾಸ್ತ್ರಜ್ಞಾನ, ವಿನಯ, ಕವಿತ್ವ ಇವುಗಳನ್ನು ನೀನು ಸಂಪಾದಿಸಿಕೊಂಡಿರುವೆಯಾ? ರಾಯನೆ; ಸಾಮ, ದಾನ, ಭೇದ, ದಂಡ, ಮಂತ್ರ, ಔಷಧ, ಇಂದ್ರಜಾಲ ಎಂಬ ಉಪಾಯಗಳನ್ನು ತಿಳಿದು ಸಂದರ್ಭಾನುಸಾರವಾಗಿ ಉಪಯೋಗಿಸಿ, ಕಾರ್ಯಸಾಧನೆ ಮಾಡುತ್ತಿರುವೆಯಾ? ನಾಸ್ತಿಕ್ಯಬುದ್ಧಿ, ಸುಳ್ಳು, ಕ್ರೋಧ, ಪ್ರಮಾದ, ದೀರ್ಘಸೂತ್ರತೆ, ಆಲಸ್ಯ, ಚತುರ, ನೋಡದೆ ಕೆಲಸಮಾಡುವುದು, ಹಿತಚಿಂತಕರ ಸೂಚನೆಗಳಿಗೆ ಲಕ್ಷ್ಯಕೊಡದೆ ಇರುವುದು, ಅರ್ಥಶಾಸ್ತ್ರವರಿಯದವರೊಂದಿಗೆ ಮಂತ್ರಾಲೋಚನೆ ಮಾಡುವುದು, ನಿಶ್ಚಯಿಸಿದುದನ್ನು ಮಾಡದೆಬಿಡುವುದು, ಮಂತ್ರಾಲೋಚನೆಯನ್ನು ಗೋಪ್ಯವಾಗಿಡದೆ ಬಹಿರಂಗಪಡಿಸುವುದು, ಗುರುಹಿರಿಯರನ್ನು ಧಿಕ್ಕರಿಸುವುದು ಈ ರಾಜದೋಷಗಳನ್ನು ನೀನು ವರ್ಜಿಸಿರುವೆಯಾ? ಧರ್ಮ, ಸತ್ಯ, ನಿಷ್ಪಕ್ಷಪಾತ, ಶೌಚ, ಅಹಿಂಸೆ, ಶಾಂತಿ, ದೈವಭಕ್ತಿ, ಆಸ್ತಿಕ್ಯಬುದ್ಧಿ, ಅಕ್ರೋಧ, ಪ್ರಜ್ಞೆ, ಇಂದ್ರಿಯ ನಿಗ್ರಹ, ಶಾಸ್ತ್ರಜ್ಞಾನ, ಆರ್ಜವ, ಕೃತಜ್ಞತೆ, ಯಥಾಶಕ್ತಿದಾನ, ಮಿತಭಾಷೆ, ಸಾಧುಸಂಗ, ಸಂತೋಷ, ಸದ್ವಿಚಾರ ಈ ಸುಗುಣಗಳನ್ನು ಸಂಪಾದಿಸಿರುವೆಯಾ?

ಎಲೈಯುಧಿಷ್ಠಿರಾ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಅರಿಷಡ್ವರ್ಗವನ್ನು ಸಾಮಾನ್ಯವಾಗಿ ಬಿಡಬೇಕಾಗಿದ್ದರೂ, ಈಶ್ವರ ಭಜನೆಯಲ್ಲಿ ಕಾಮವನ್ನೂ, ಇಂದ್ರಿಯ

ದಮನದಲ್ಲಿ ಕ್ರೋಧವನ್ನೂ, ಭಗವದನುಗ್ರಹದಿಂದ ಬಂದ ಪದಾರ್ಥಗಳಲ್ಲಿ ಲೋಭವನ್ನೂ, ಸಜ್ಜನಸಂಗದಲ್ಲಿ ಮೋಹವನ್ನೂ, ದುರ್ಜನತ್ಯಾಗದಲ್ಲಿ ಮದವನ್ನೂ, ಪಾಪರೂಪವಾದ ಸಂಸಾರದಲ್ಲಿ ಮಾತ್ಸರ್ಯವನ್ನೂ ಮಾತ್ರ ಇಟ್ಟುಕೊಂಡಿರುವೆಯಾ? ಮಾಡತಕ್ಕ ಕಾರ್ಯಗಳನ್ನು ಆಯಾ ಕಾಲಗಳಲ್ಲಿಯೇ ತಪ್ಪದೆ ನಡಿಸಬೇಕೆಂಬ ನಿಯಮವನ್ನು ಅನುಸರಿಸುತ್ತಿರುವೆಯಾ? ಜೂಜು, ಮದ್ಯಪಾನ, ಪರಸ್ತ್ರೀವ್ಯಸನ, ಬೇಟೆ, ಮಾಂಸಾಭಿಲಾಷೆ, ಪರದ್ರವ್ಯಾಪಹರಣ, ಕಠಿನವಾಕ್ಯ ಈ ದೋಷಗಳನ್ನು ನೀನು ಯಾವಾಗಲೂ ಬಿಟ್ಟಿರುವೆಯಾ? ನೀನು ವ್ಯರ್ಥವಾದ ವಾಗ್ದಾನವನ್ನು ಮಾಡದೆಯೂ, ಮಾತುಕೊಟ್ಟಮೇಲೆ ಅದನ್ನು ಎಷ್ಟು ಕಷ್ಟಬಂದರೂ ತಪ್ಪದೆಯೂ ವರ್ತಿಸುತ್ತಾ ಲೋಕಾಪವಾದಕ್ಕೆ ಹೆದರಿಕೊಂಡು ನಡೆಯುತ್ತಿರುವೆಯಾ?

ಎಲೈ ಪ್ರಭುವೆ ದೇವರು, ಋಷಿಗಳು, ಜ್ಞಾನಿಗಳು, ವೃದ್ಧರು, ಗುರುಗಳು ಇವರುಗಳಲ್ಲಿ ಭಕ್ತಿಯಿಂದ ನಡೆದುಕೊಳ್ಳುತ್ತಿರುವೆಯಾ? ಪೂರ್ವಿಕರಿಂದ ಅನುಸರಿಸಿ ಬಂದಿರುವ ವೇದೋಕ್ತ ಧರ್ಮಗಳನ್ನು ತಿಳಿದುಕೊಂಡು, ನಿನ್ನ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ತಪ್ಪದೆ ಅನುಷ್ಠಿಸುತ್ತಿರುವೆಯಾ? ನೀನು ರಾತ್ರಿಯ ಪೂರ್ವಾರ್ಧದಲ್ಲಿ ನಿದ್ರಿಸಿ, ಉತ್ತರಾರ್ಧದಲ್ಲಿ ಎಚ್ಚತ್ತು ಏಕಾಂತದಲ್ಲಿ ಆದಿನ ಮಾಡಿದ ಪುಣ್ಯಪಾಪಕೃತ್ಯಗಳನ್ನೂ ಮುಂದೆ ಮಾಡಬೇಕಾದ ಕಾರ್ಯಗಳನ್ನೂ ವಿಚಾರಮಾಡುತ್ತಿರುವೆಯಾ? ಅಗ್ನಿಹೋತ್ರದಿಂದ ವೇದಗಳನ್ನೂ, ದಾನಭೋಗಗಳಿಂದ ದ್ರವ್ಯವನ್ನೂ, ಕ್ರೀಡೆ ಮತ್ತು ಪುತ್ರೋತ್ಪಾದನದಿಂದ ಪತ್ನಿಯರನ್ನೂ, ಸದಾಚಾರದಿಂದ ಶಾಸ್ತ್ರಗಳನ್ನೂ ಸಫಲಗೊಳಿಸುತ್ತಿರುವೆಯಾ? ನಿನ್ನ ಮನೆಯಲ್ಲಿ ಅತಿಥಿಗಳನ್ನೂ, ಅಭ್ಯಾಗತರನ್ನೂ ತಕ್ಕಂತೆ ಸತ್ಕರಿಸುತ್ತಿರುವೆಯಾ?

ಪರರಿಗೆ ನೀನು ಮಾಡಿದ ಉಪಕಾರಗಳನ್ನೂ ದಾನಧರ್ಮಗಳನ್ನೂ ಅನ್ಯರೊಂದಿಗೆ ಹೇಳಿಕೊಳ್ಳದೆ ಗೋಪ್ಯವಾಗಿಟ್ಟಿರುವೆಯಾ? ನಿನಗೆ ಪರರಿಂದ ಆದ ಉಪಕಾರಗಳನ್ನು ಮರೆಯದೆ ಅಂತವರಿಗೆ ಕೃತಜ್ಞತೆಯನ್ನು ತೋರಿಸುತ್ತಿರುವೆಯಾ?

ಎಲೈ ರಾಜನೇ, ಪ್ರಜಾರಂಜನೆಯಿಂದಲೇ ರಾಜನೆಂಬ ಶಬ್ದವು ನಿಷ್ಪನ್ನವಾಗಿರುವುದು. ಆತನು ದುಷ್ಟಶಿಕ್ಷಣೆ, ಶಿಷ್ಟರಕ್ಷಣೆ ಇವು ಗಳಿಗಾಗಿಯೇ ಶ್ರೀ ಮಹಾವಿಷ್ಣುವಿನ ಅಂಶದಿಂದ ಭೂಲೋಕದಲ್ಲಿ ಹುಟ್ಟುತ್ತಿರುವನೆಂದು ಹೇಳುವರು. ಅವನು ಅಪರಾಧಿಗಳಿಗೆ ಯಮನಂತೆ ಭಯಂಕರನಾಗಿ ತೋರುತ್ತಾ, ಸಾಮಾನ್ಯಜನರ ವಿಷಯದಲ್ಲಿ ಸೌಮ್ಯಸ್ವಭಾವದಿಂದ ವರ್ತಿಸುತ್ತಿರಬೇಕೆಂಬುದನ್ನು ತಿಳಿದುಕೊಂಡಿರುವೆಯಾ? ರಾಷ್ಟ್ರವೆಂಬ ದೇಹಕ್ಕೆ ರಾಜನೇ ಜೀವಸ್ವರೂಪನೆಂದು ತಿಳಿದುಕೊಂಡು ಇರುತ್ತೀಯಾ? ಸಣ್ಣ ಜಂತುವಾದ ಒಂದು ಇರುವೆಯು ನಮ್ಮ ಅಂಗದಲ್ಲಿ ಯಾವುದಾದರೂ ಒಂದು ಭಾಗವನ್ನು ಕಚ್ಚಿದರೆ ಎಷ್ಟು ನೋವಾಗುವುದು! ಜೀವಿಯು ತತ್‌ಕ್ಷಣವೇ ಕರಚರಣಾದ್ಯವಯವಗಳಮೂಲಕ ಅದನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸುವಂತೆ ದೇಶದಲ್ಲಿ ಎಲ್ಲಿಯಾದರೂ ಪರರಿಗೆ ಕಷ್ಟಸಂಭವಿಸಿತೆಂದು ಕೇಳಿದರೆ ಕಾಲವಿಳಂಬಮಾಡದೆ ಕೂಡಲೇ ಅದನ್ನು ಪರಿಹಾರಮಾಡಲು ಪ್ರಯತ್ನಿಸುತ್ತಿರುವೆಯಾ? ರಾಜನಿಗೆ ಉತ್ತಮಯಶಸ್ಸು ಬರಬೇಕಾದರೆ ದಕ್ಷನಾದ ಮಂತ್ರಿಯಿಂದಲೇ ಎಂದು ತಿಳಿದು ಶೂರನಾಗಿಯೂ ಧೀರನಾಗಿಯೂ, ಉದಾರನಾಗಿಯೂ, ಧರ್ಮಾಭಿಮಾನಿಯಾಗಿಯೂ, ವಿವಿಧವಿಚಾರಗಳನ್ನು ಬಲ್ಲವನಾಗಿಯೂ, ಹಲವುಭಾಷೆಗಳ್ಲ ಪಂಡಿತನಾಗಿಯೂ, ಸ್ವಾಮಿಭಕ್ತನಾಗಿಯೂ, ಶ್ರದ್ಧಾಳುವಾಗಿಯೂ, ಇರುವವನನ್ನೇ ಆರಿಸಿ ಮಂತ್ರಿಪದವಿಗೆ ನಿಯಮಿಸಿಕೊಂಡಿರುವೆಯಾ?

ಸಾವಿರಮಂದಿ ಸಾಮಾನ್ಯಜನರಿಗೆ ಕೊಡುವ ವೇತನವನ್ನೆಲ್ಲಾ ಒಬ್ಬನಿಗೇನೇ ಕೊಟ್ಟಾದರೂ ಮೇಧಾವಿಯಾಗಿಯೂ ಸ್ವಾರ್ಥತ್ಯಾಗಿಯಾಗಿಯೂ, ನಿಸ್ಪೃಹನಾಗಿಯೂ, ಧೈರ್ಯಶಾಲಿಯಾಗಿಯೂ, ವಿಶ್ವಾಸಿಯಾಗಿಯೂಇರುವ ಮಂತ್ರಿಯೊಬ್ಬನನ್ನು ಸಂಪಾದಿಸಬೇಕು. ಹಾಗೆ ಮಾಡಿ ಆತನ ಉಪದೇಶದಂತೆ ಕಾರ್ಯಗಳನ್ನು ಮಾಡುತ್ತಾ ಬರುವೆಯಾ ? ರಾಜನು, ಮಂತ್ರಿ, ಮಿತ್ರರು, ಭಂಡಾರ, ರಾಷ್ಟ್ರ, ಕೋಟೆಗಳು, ಸೈನ್ಯ ಈ ಸಪ್ತಾಂಗಗಳೂ ನಿನಗೆ ಸಮಗ್ರವಾಗಿರುವುವೆ !

ನೀನು ರಾಜಕಾರ್ಯನಿರ್ವಾಹಕ್ಕೆ ಅನುಕೂಲವಾಗಿ ಬೇರೆ ಬೇರೆ ಶಾಖೆಗಳನ್ನು ವಿಂಗಡಿಸಿ ಪ್ರತಿ ಒಂದು ಶಾಖೆಗೂ ತಕ್ಕ ಅಧಿಕಾರಿಗಳನ್ನು ನಿಯಮಿಸಿ, ಅವರು ಮಾಡುತ್ತಿರುವ ಕೆಲಸಗಳ ಗುಣದೋಷಗಳನ್ನು ಆಗಾಗ್ಗೆ ವಿಮರ್ಶಿಸುತ್ತಲಿರುವೆಯಾ ? ಮಂತ್ರಿ, ಪುರೋಹಿತನು, ಯುವರಾಜನು, ಸೇನಾಪತಿ, ಅರಮನೆಯ ಅಧಿಕಾರಿ, ಅಂತಃಪುರದ ಅಧಿಕಾರಿ, ಸೆರೆಮನೆಯ ಯಜಮಾನ, ಭಂಡಾರಾಧ್ಯಕ್ಷ, ಪುರಾಧ್ಯಕ್ಷ, ಶಿಲ್ಪಕಾರ್ಯಾಧ್ಯಕ್ಷ, ಧರ್ಮಾಧಿಕಾರಿ, ದಂಡಪಾಲ, ದುರ್ಗಪಾಲ, ಸೀಮಾಧ್ಯಕ್ಷ (ಎಲ್ಲೆ), ಅಟವೀಪಾಲ, ಪ್ರದೇಷ್ಟ್ರ (ಮುಜರಾಯಿ), ಸಭಾಧ್ಯಕ್ಷ (ಲಾ), ಹೀಗೆ ಬೇರೆ ಬೇರೆ ಶಾಖೆಗಳಲ್ಲಿ ನಿಯಮಿತರಾದ ಉನ್ನತಾಧಿಕಾರಿಗಳು ತಮ್ಮ ತಮ್ಮ ಕರ್ತವ್ಯವನ್ನು ನಿರ್ವಂಚನೆಯಿಂದ ನಡಿಸುತ್ತಿರುವಂತೆ ಏರ್ಪಡಿಸಿ, ಅವರ ಕಾರ್ಯಗಳ ನ್ಯೂನಾತಿರೇಕಗಳನ್ನು ಚಾರರ ಮುಖಾಂತರವಾಗಲಿ, ಇತರ ಮಾರ್ಗಗಳಿಂದಲಾಗಲಿ ಆಗಾಗ್ಗೆ ತಿಳಿದುಕೊಂಡು, ಅಕ್ರಮಗಳಿಗೆ ಅವಕಾಶವಿಲ್ಲದಂತೆ ಮಾಡಿರುವೆಯಾ! ಯಾವುದಾದರೂ ಒಂದು ಯಂತ್ರದಲ್ಲಿ ಸಣ್ಣ ಸೂಜಿಯೊಂದು ಮುರಿದುಹೋದರೂ ಯಂತ್ರವು ಸರಿಯಾಗಿ ನಡೆಯದೆ ಹೇಗೆ ನಿಂತುಹೋಗುವುದೋ

ಹಾಗೆಯೇ ರಾಜ್ಯಾಂಗಗಳಲ್ಲಿ ಯಾವುದರಲ್ಲಿಯಾದರೂ ಸ್ವಲ್ಪ ಲೋಪವುಂಟಾದರೆ ರಾಜಕಾರ್ಯಗಳೆಲ್ಲವೂ ಕೆಟ್ಟುಹೋಗುವುವು. ಆದುದರಿಂದ ಪ್ರಾಜ್ಞನಾದ ಅರಸನು ತನ್ನ ಅಧಿಕಾರಿಗಳಲ್ಲಿ ಯಾವ ದೋಷವೂ ತಲೆದೋರದಂತೆ ಸರ್ವದಾ ಜಾಗರೂಕನಾಗಿ ನೋಡಿಕೊಳ್ಳುತ್ತಿರಬೇಕು. ನಿನ್ನ ಅಧಿಕಾರಿಗಳೂ, ಅವರ ಕೈಕೆಳಗಿನ ಇತರ ಉದ್ಯೋಗಸ್ಥರೂ ನಿನ್ನ ಆಜ್ಞೆಗೆ ಭಂಗತಾರದೆ, ಪ್ರಜಾಹಿತಚಿಂತಕರಾಗಿ ಪ್ರವರ್ತಿಸುತ್ತಿರುವಂತೆ ಎಚ್ಚರ ತೆಗೆದುಕೊಳ್ಳುತ್ತಿರುವೆಯಾ ? ಆಜ್ಞೆಯನ್ನು ಉಲ್ಲಂಘಿಸಿದವರಿಗೂ, ಅಧಿಕಾರಬಲದಿಂದ ಅಥವಾ ರಾಜಬಂಧುಗಳೆಂಬ ಹೆಮ್ಮೆಯಿಂದ ಪ್ರಜಾಪೀಡನೆ ಮಾಡುವವರಿಗೂ, ಸ್ವಲ್ಪವೂ ದಾಕ್ಷಿಣ್ಯತೋರಿಸದೆ ಕ್ರೂರದಂಡನೆಗಳನ್ನು ವಿಧಿಸುತ್ತಿರುವೆಯಾ ?

ಎಲೈರಾಯನೇ, ತುಂಬಿಯು ಪುಷ್ಪಗಳಿಗೆ ತೊಂದರೆಯಾಗದಂತೆ ಮಕರಂದವನ್ನು ಗ್ರಹಿಸುವತೆರದಿಂದ ಪ್ರಜೆಗಳಿಗೆ ಸ್ವಲ್ಪವೂ ನೋವಾಗದಂತೆ ಅವರಿಂದ ಕಾರ್ಯನಿರ್ವಾಹಕ್ಕೆ ತಕ್ಕಷ್ಟುಮಾತ್ರವೇ ತೆರಿಗೆಗಳನ್ನು ತೆಗೆದುಕೊಳ್ಳುತ್ತಿರುವೆಯಾ ? ಹೀಗೆ ಶೇಖರಿಸಿದ ಭಂಡಾರದ್ರವ್ಯವನ್ನು ಸಾಧಾರಣವಾಗಿ ಅಲ್ಪವ್ಯಯದಿಂದ ಹೆಚ್ಚು ಪ್ರಯೋಜನವಾಗತಕ್ಕ ಕೆಲಸಗಳಿಗೇನೇ ಉಪಯೋಗಿಸುತ್ತಾಬರುವೆಯಾ ? ಸೂರ್ಯನು ಸಮುದ್ರೋದಕವನ್ನು ಮೇಘಗಳಮೂಲಕ ಸಂಗ್ರಹಿಸಿ, ಅದೇ ನೀರನ್ನು ಮಳೆಯಮೂಲಕ ಭೂಮಿಗೆ ಸುರಿಸಿ, ಲೋಕಕ್ಕೆ ಉಪಕಾರ ಮಾಡುತ್ತಿರುವಂತೆ ಪ್ರಜೆಗಳಿಂದ ಸಂಗ್ರಹಿಸಿದ ದ್ರವ್ಯವನ್ನು ಸನ್ಮಂತ್ರಿಗಳ ಸೂಚನೆಗಳನನುಸರಿಸಿ ಪ್ರಜೆಗಳ ಉಪಯೋಗಕ್ಕೋಸ್ಕರವೇ ವೆಚ್ಚಮಾಡುತ್ತಿರುವೆಯಾ ? ರಾಷ್ಟ್ರದಲ್ಲಿ ಉತ್ಪತ್ತಿಯಾದ ದ್ರವ್ಯದಲ್ಲಿ ಮೂರನೆಯ ಅಥವಾ ನಾಲ್ಕನೆಯ ಪಾಲನ್ನು ಆಪದ್ಧನವಾಗಿ ತೆಗೆದಿಟ್ಟು, ಉಳಿದ ಧನವನ್ನು ಮಾತ್ರವೇ

ಉಪಯುಕ್ತವಾದ ಕೆಲಸಗಳಿಗೆ ವೆಚ್ಚಮಾಡಿಸುತ್ತಿರುವೆಯಾ? ಆ ಆಪದ್ಧನವು ಪರರಾಜಭೀತಿ, ಕ್ಷಾಮ, ಸಾಂಕ್ರಾಮಿಕವ್ಯಾಧಿಗಳು, ಭೂಕಂಪ, ಅಗ್ನಿಬಾಧೆ, ಮುಂತಾದ ವಿಶೇಷಸಂದರ್ಭಗಳಿಗೆಮಾತ್ರ ಉಪಯೋಗಿಸುವಂತೆ ಶ್ರದ್ಧೆತೆಗೆದುಕೊಳ್ಳುತ್ತಿರುವೆಯಾ? ಜನರ ಪ್ರಾಣ, ಮಾನ, ಧನಗಳಿಗೆ ಭಯವಿಲ್ಲದಂತೆ ತಕ್ಕ ಶಿಕ್ಷಾಧಿಕಾರಿಗಳನ್ನಿಟ್ಟಿರುವೆಯಾ? ಜನರು ಕಷ್ಟಕಾಲದಲ್ಲಿ ತಮ್ಮ ಧನವನ್ನು ರಾಜಕೀಯ ಭಂಡಾರದಲ್ಲಿ ಸುರಕ್ಷಿತವಾಗಿ ಇಡಲಿಕ್ಕೆ ತಕ್ಕ ಭರವಸೆಕೊಟ್ಟಿರುವೆಯಾ? ನಿನ್ನ ಖಜಾನೆಯ ಉದ್ಯೋಗಸ್ಥರು ನಿನ್ನ ಅಪ್ಪಣೆಯ ಹೊರತು ಒಂದು ಕವಡೆಯನ್ನಾದರೂ ಸ್ವತಂತ್ರಿಸಿ ವೆಚ್ಚಮಾಡದಹಾಗೆಯೂ, ಸ್ವಪ್ರಯೋಜನಕ್ಕೆ ಉಪಯೋಗಿಸಿಕೊಳ್ಳದಹಾಗೆಯೂ, ತಕ್ಕ ಕಟ್ಟಳೆಗಳನ್ನು ಏರ್ಪಡಿಸಿರುವೆಯಾ? ಮತ್ತು ಅವರು ಆದಾಯ ವೆಚ್ಚಗಳಿಗೆ ಸರಿಯಾದ ಲೆಕ್ಕವನ್ನಿಟ್ಟು ದಿನಂಪ್ರತಿ ಪ್ರಾತಃಕಾಲದಲ್ಲಿ ಆಯವ್ಯಯಗಳ ವಿವರಣೆಯನ್ನು ನಿನಗೆ ವರದಿಮಾಡುತ್ತಿರುವರೇ? ರಾಜಮುದ್ರಾಂಕಿತವಾದ ನಾಣ್ಯವು ಅಕೃತ್ರಿಮವಾದುದೆಂಬ ನಂಬಿಕೆಯನ್ನು ಜನರೆಲ್ಲರೂ ತಿಳಿದಿರುವರೇ? ಕೃತ್ರಿಮ ನಾಣ್ಯಗಳನ್ನು ನಿರ್ಮಿಸುವವರಿಗೆ ಹೆಚ್ಚು ಶಿಕ್ಷೆ ವಿಧಿಸುತ್ತಿರುವೆಯಾ? ನಿನ್ನ ಚತುರಂಗ ಸೈನ್ಯವು ಸಮಗ್ರವಾಗಿರುವುದೆ?

ರಾಜನೇ, ಸತ್ಕುಲಪ್ರಸೂತನಾಗಿಯೂ, ದಕ್ಷನಾಗಿಯೂ, ಶುಚಿಯಾಗಿಯೂ, ಧೀರನಾಗಿಯೂ, ಸೈನ್ಯದ ಬಲಾಬಲಗಳನ್ನು ತಿಳಿದು, ಯುದ್ಧಕಾಲದಲ್ಲಿ ಬೇಕಾದಷ್ಟು ಬಲವನ್ನು ಒದಗಿಸತಕ್ಕವನಾಗಿಯೂ, ಧೈರ್ಯದಿಂದ ರಣರಂಗದಲ್ಲಿ ನುಗ್ಗಿ, ಪ್ರಾಣಭಯವಿಲ್ಲದೆ ಕಾದತಕ್ಕವನಾಗಿಯೂ, ಶತ್ರುಗಳ ದುರಾಶೆಗಳಿಗೆ ಒಳಪಡದೆ ಸ್ವಾಮಿಭಕ್ತನಾಗಿಯೂ ಇರುವ ಸೇನಾಧಿಕಾರಿಯನ್ನು ನಿಯಮಿಸಿಕೊಂಡಿರು

ವೆಯಾ? ಅವನಅಧೀನದಲ್ಲಿರುವ ಉದ್ಯೋಗಸ್ಥರೆಲ್ಲರೂ ನಂಬಿಕೆಗೆ ಅರ್ಹರಾಗಿಯೂ ಧೀರರಾಗಿಯೂ, ಇರುವರೆ ! ನಿನ್ನ ಯೋಧರೂ, ರಾವುತರೂ, ರಥಿಕರೂ, ಕಾಲಾಳುಗಳೂ ತಮ್ಮ ತಮ್ಮ ಕಾರ್ಯನಿರ್ವಹಣೆಯಲ್ಲಿ ಸಮರ್ಥರಾಗಿಯೂ, ವಿಶ್ವಾಸಾರ್ಹರಾಗಿಯೂ ಇರುವರೆ? ಪರರಾಜರು ನಿನ್ನ ದೇಶದಮೇಲೆ ನುಗ್ಗಿಬಾರದಂತೆ ಸರಿಹದ್ದುಗಳಲ್ಲೆಲ್ಲಾ ಶಕ್ತರಾದ ಸೈನಿಕರನ್ನು ನಿಯಮಿಸಿರುವೆಯಾ ? ನಿನ್ನ ಒಳದೇಶದ ಕೋಟೆಗಳನ್ನೆಲ್ಲಾ ಕೊತ್ತಳ, ಅಗಳ್ತೆ, ಬಾಗಿಲು, ಬೀಗ ಮುಂತಾದುವುಗಳಿರುವಂತೆ ಬಲವಾಗಿ ಕಟ್ಟಿಸಿ, ಶಿಥಿಲವಾಗುತ್ತಿರುವ ಭಾಗಗಳನ್ನು ತಡೆಮಾಡದೆ ಆಯಾ ಕಾಲಗಳಲ್ಲಿಯೇ ಸರಿಪಡಿಸುತ್ತಿರುವೆಯಾ ? ಮತ್ತು ಆ ಕೋಟೆಗಳಲ್ಲಿ ಯಾವಾಗಲೂ ಧನ, ಧಾನ್ಯ, ಮೇವು, ನೀರು, ಸೌದೆ, ಯಂತ್ರಗಳು, ಶಿಲ್ಪಿಗಳು, ಆಯುಧಗಳು, ತಕ್ಕಷ್ಟು ಸೈನ್ಯ, ಇವುಗಳು ಸಮಗ್ರವಾಗಿರುವಂತೆ ಏರ್ಪಡಿಸಿರುವೆಯಾ ? ನಿನ್ನ ಕಡೆಯ ರಾಯಭಾರಿಗಳನ್ನು ಪರರಾಜ್ಯಗಳಲ್ಲೆಲ್ಲಾ ಇಟ್ಟು ಅವರಮೂಲಕ ಆಯಾ ದೇಶಗಳ ರಾಜಕಾರ್ಯಸ್ಥಿತಿಗಳನ್ನು ಆಗಾಗ್ಗೆ ಬೇಹಿನವರಿಂದ ತರಿಸಿಕೊಳ್ಳುತ್ತಿರುವೆಯಾ ? ನಿನ್ನ ರಾಷ್ಟ್ರದ ಗುಟ್ಟುಗಳನ್ನು ಪರರಾಜರ ಕಡೆಯವರಿಗೆ ತಿಳಿಸದಂತೆ ತಕ್ಕ ಕಟ್ಟಳೆಗಳನ್ನೇರ್ಪಡಿಸಿರುವೆಯಾ ?

ಪ್ರಭುವೇ, ನಿನ್ನ ಸೈನಿಕರಿಗೆಲ್ಲಾ ವೇತನಗಳನ್ನೂ ಭತ್ಯಗಳನ್ನೂ ಕಾಲಕಾಲಗಳಲ್ಲಿ ತಪ್ಪದೆ ಸಲ್ಲಿಸುತ್ತಿರುವೆಯಾ ? ಮತ್ತು ಅವರಿಗೆ ಯುದ್ಧಕಾಲಗಳಲ್ಲಿ ಮುಂಗಡವಾಗಿ ಸಂಬಳಗಳನ್ನು ಕೊಡಿಸಿ, ಅವರ ಕುಟುಂಬದವರಿಗೆ ಅನ್ನವಸ್ತ್ರಾದಿಗಳಿಗೆ ಕೊರತೆಯುಂಟಾಗದಂತೆ ತಕ್ಕ ಸಹಾಯ ಮಾಡಿಸುತ್ತಿರುವೆಯಾ ? ಯುದ್ಧದಲ್ಲಿ ಮಡಿದ ಸೈನಿಕರ ಪತ್ನೀಪುತ್ರರಿಗೆ ಉಪಕಾರವೇತನಗಳನ್ನು ಕೊಡಿಸಿ ಪೋಷಿಸುತ್ತಿರು

ವೆಯಾ? ನಿನ್ನ ಕಡೆಯ ಸೈನಿಕರು ಯುದ್ಧದಲ್ಲಿ ಪ್ರಾಣತ್ಯಾಗಕ್ಕೂ ಹೆದರದೆ ಧೈರ್ಯದಿಂದ ಕಾದಿ ಜಯವನ್ನು ಪಡೆಯುವಂತೆ ಮೊದಲಿನಿಂದಲೂ ಅವರಿಗೆ ಅಸ್ತ್ರಶಿಕ್ಷಣಾಭ್ಯಾಸವನ್ನು ಕೊಡಿಸುತ್ತಿರುವೆಯಾ? ರಣದಲ್ಲಿ ಸತ್ತವರನ್ನು ಅವರವರ ಗೌರವಕ್ಕೆ ತಕ್ಕ ಹಾಗೆ ಸಂಸ್ಕರಿಸುವುದಕ್ಕೂ, ಗಾಯಪಟ್ಟವರನ್ನೂ ಅಂಗಹೀನರಾದವರನ್ನೂ ಉಪಚರಿಸುವುದಕ್ಕೂ ತಕ್ಕ ಏರ್ಪಾಡುಗಳನ್ನು ಮಾಡಿರುವೆಯಾ? ಯುದ್ಧದಲ್ಲಿ ಬಲಹೀನತೆಯಿಂದ ಅಥವಾ ಭಯದಿಂದ ಸೋತ ಮತ್ತು ಶರಣಾಗತರಾಗಿ ಬಂದ ಶತ್ರುಗಳಿಗೆ ಅಭಯವನ್ನು ಕೊಟ್ಟು, ಅವರನ್ನು ನಿನ್ನ ಮಕ್ಕಳಂತೆ ರಕ್ಷಿಸುತ್ತಿರುವೆಯಾ? ಯುದ್ಧದಲ್ಲಿ ಗೆದ್ದು ಬಂದ ನಿನ್ನ ಕಡೆಯ ವೀರರಿಗೆಲ್ಲಾ ಬಹುಮಾನ, ಪ್ರಶಸ್ತಿ, ಅಧಿಕಾರಾಭಿವೃದ್ಧಿ ಮುಂತಾದುವುಗಳನ್ನು ಕೊಡುವುದರ ಮೂಲಕ ಪ್ರೋತ್ಸಾಹಪಡಿಸುತ್ತಿರುವೆಯಾ? ನಿನ್ನಿಂದ ಪರಾಜಿತರಾದ ಶತ್ರುರಾಜರ ಪ್ರಜೆಗಳಿಗೆ ನಿನ್ನ ಸೈನಿಕರಿಂದ ಯಾವ ವಿಧವಾದ ತೊಂದರೆಯೂ ಉಂಟಾಗದಂತೆ ತಕ್ಕ ಕಟ್ಟಳೆಗಳನ್ನು ಏರ್ಪಡಿಸಿರುವೆಯಾ? ಯುದ್ಧಕಾಲಗಳಲ್ಲಿ ಅಸ್ತ್ರಶಸ್ತ್ರಗಳಿಗೆ ವಿಷಪ್ರಯೋಗ ಮಾಡುವುದು, ಯುದ್ಧಧರ್ಮಕ್ಕೆ ವಿರೋಧವಾಗಿ ಮಾಯೆ, ಕಾಪಟ್ಯ, ಮೋಸ ಮುಂತಾದ ಅಕೃತ್ಯಗಳನ್ನು ಮಾಡುವುದು ಇಂತಹ ಅನ್ಯಾಯಗಳು ನಡೆಯದಂತೆ ಎಚ್ಚರ ತೆಗೆದುಕೊಳ್ಳುತ್ತಿರುವೆಯಾ?

ಎಲೈ ಯುಧಿಷ್ಠಿರನೇ, ರಾಜ್ಯೈಶ್ವರ್ಯಕ್ಕೆ ಮುಖ್ಯಾಧಾರವಾದುದು ಕೃಷಿಯೇ. ಅದು ಅಭಿವೃದ್ಧಿಯಾಗಿದ್ದರೆ ದೇಶದಲ್ಲಿ ಎಲ್ಲಿಯೂ ದುರ್ಭಿಕ್ಷವಿಲ್ಲದೆ ಪ್ರಜೆಗಳೆಲ್ಲರೂ ಸುಖದಿಂದ ಇರುವರು. ಕ್ಷೇತ್ರರು ಕಷ್ಟಪಟ್ಟು ಕೃಷಿಮಾಡಿದರೆ ಒಳ್ಳೆಯ ಬೆಳೆಯಾಗುವುದು. ಪ್ರಜೆಗಳು ಸುಖವಾಗಿದ್ದರೆ ರಾಜ್ಯವು ನೆಮ್ಮದಿಯಾಗಿರುವುದು. ಕಳವು,

ಕೊಳೆ, ಸಾಂಕ್ರಾಮಿಕರೋಗಗಳು, ಅಕಾಲಮರಣ ಮುಂತಾದುವುಗಳೆಲ್ಲಾ ಪ್ರಾಯಶಃ ಕ್ಷಾಮಕಾಲಗಳಲ್ಲಿಯೇ ಹೆಚ್ಚಾಗಿ ಸಂಭವಿಸುವುವು. ಆದಕಾರಣ ನೀತಿಜ್ಞನಾದ ಅರಸನು ತನ್ನ ದೇಶದಲ್ಲಿ ಕ್ಷಾಮವು ಕಾಲಿಡದಂತೆ ಸರ್ವಪ್ರಯತ್ನಗಳನ್ನೂ ಮಾಡಬೇಕು. ಧರ್ಮವನ್ನತಿಕ್ರಮಿಸದೆ ಪ್ರಭುತ್ವ ಮಾಡುತ್ತಿದ್ದರೆ ದೈವಾನುಗ್ರಹದಿಂದ ಕಾಲಕಾಲಕ್ಕೆ ತಪ್ಪದೆ ಮಳೆ ಸುರಿದು ಭೂಮಿಯು ತಂಪಾಗುವುದು. ಕಾರಣಾಂತರದಿಂದ ಸಕಾಲದಲ್ಲಿ ಮಳೆ ಸುರಿಯದೆ ದುರ್ಭಿಕ್ಷ ಸೂಚನೆ ತೋರಿದರೆ ಜಪಶಾಂತ್ಯಾದಿಗಳಿಂದ ಭಗವದನುಗ್ರಹವನ್ನು ಪಡೆಯಲು ಯತ್ನಿಸಬೇಕು. ಅಂತಹ ಕಾಲಗಳಲ್ಲಿ ಕೃಷಿಕರಿಗೆ ಧನವನ್ನೂ, ಬೀಜದ ಕಾಳನ್ನೂ, ದನಗಳ ಮೇವನ್ನೂ ರಾಜರು ಒದಗಿಸಿಕೊಡಬೇಕು. ಕ್ಷಾಮವು ತಲೆದೋರದಂತೆ ಅನುಕೂಲವಾದ ಪ್ರದೇಶಗಳಲ್ಲಿ ದೊಡ್ಡದೊಡ್ಡ ಕೆರೆಗಳನ್ನು ಕಟ್ಟಿಸಿ, ಅವುಗಳಲ್ಲಿ ನೀರು ಸಮಗ್ರವಾಗಿ ನಿಲ್ಲುವಂತೆ ಮಾಡಬೇಕು. ಜಲಸಮೃದ್ಧಿಯಿದ್ದರೆ ಬೇಕಾದ ಪೈರುಗಳನ್ನಿಡಲು ಜನರಿಗೆ ಧೈರ್ಯ ಉಂಟಾಗುವುದು. ನದಿಗಳ ನೀರು ವ್ಯರ್ಥವಾಗಿ ಹರಿದುಹೋಗದಂತೆ ಅಲ್ಲಲ್ಲಿ ಅಣೆಗಳನ್ನೂ ಕಟ್ಟೆಗಳನ್ನೂ ಕಟ್ಟಿಸಿ, ನೀರನ್ನು ಕೂಡಿಸುತ್ತಾ, ಹಾಗೆ ಕೂಡಿಸಿಟ್ಟ ನೀರನ್ನು ಕಾಲುವೆಗಳ ಮೂಲಕ ಬೆಳೆಗಳಿಗೆ ಒದಗುವಂತೆ ಅನುಕೂಲಪಡಿಸಬೇಕು. ಧಾನ್ಯಾದಿಗಳನ್ನು ಉತ್ತಮತರವಾದ ಚೆನ್ನಾಗಿ ಬೆಳೆಯಿಸಿದವರಿಗೆ ಪಾರಿತೋಷಿಕ ಮುಂತಾದುವುಗಳಿಂದ ಪ್ರೋತ್ಸಾಹಪಡಿಸಬೇಕು. ದನಕರುಗಳನ್ನು ಚೆನ್ನಾಗಿ ಪೋಷಿಸಿ ಪೂರ್ಣವಾದ ಹಾಲು ಮೊಸರು ಮುಂತಾದುವು ಕೊಡುವಂತೆಯೂ, ಕಷ್ಟ ಕೆಲಸಗಳಿಗೆ ಅನುಕೂಲಿಸುವಂತೆಯೂ ಅಭಿವೃದ್ಧಿಗೊಳಿಸಬೇಕು. ಸ್ವದೇಶದಲ್ಲಿ ಬೆಳೆದ ಪದಾರ್ಥಗಳಲ್ಲಿ ರಾಷ್ಟ್ರದ ಜನರಿಗೆ ಒಂದೆರಡು

ವರ್ಷಗಳಿಗೆ ಬೇಕಾದಷ್ಟನ್ನು ಕಾಪಾಡಿಟ್ಟುಕೊಂಡು, ಉಳಿದುದನ್ನು ಮಾತ್ರ ಪರದೇಶಗಳ ಮಾರಾಟಕ್ಕೆ ಕೊಡಲು ಏರ್ಪಡಿಸಬೇಕು. ಈ ಪ್ರಕಾರವಾಗಿ ಕೃಷಿಯ ವಿಷಯದಲ್ಲಿ ನೀನು ಯಾವಾಗಲೂ ಮುಖ್ಯವಾದ ಗಮನ ಕೊಡುತ್ತಿರುವೆಯಾ ?

ಕೃಷಿಗೆ ಎರಡನೆಯದು ವ್ಯಾಪಾರವು. ದೇಶದಲ್ಲಿ ಬೆಳೆಯುವ ಮತ್ತು ಸಿಕ್ಕುವ ಪದಾರ್ಥಗಳನ್ನು ವರ್ತಕರು ಕೊಂಡುಕೊಂಡು ಒಳದೇಶದಲ್ಲಿಯೂ ಪರರಾಜ್ಯಗಳಲ್ಲಿಯೂ ಮಾರಿ ಧನಸಂಪಾದನೆ ಮಾಡಿಕೊಳ್ಳುವುದಲ್ಲದೆ ಪರದೇಶಗಳಲ್ಲಿ ಉತ್ಪತ್ತಿಯಾದ ಅಥವಾ ಸಿದ್ಧಪಡಿಸಿದ ಪದಾರ್ಥಗಳನ್ನು ಸ್ವದೇಶಕ್ಕೆ ತಂದು ವಿಕ್ರಯಿಸುವುದರ ಮೂಲಕ ತಾವು ಲಾಭಪಡೆಯುವರು. ಇದರಿಂದ ಜನರಿಗೂ ರಾಜನಿಗೂ ದ್ರವ್ಯ ಸಂಪಾದನೆಯಾಗುವುದು. ಇದುದರಿಂದ ವ್ಯಾಪಾರಕ್ಕೆ ಹೆಚ್ಚು ನಿರ್ಬಂಧಗಳನ್ನು ಕಲ್ಪಿಸದೆ, ತಕ್ಕಮಟ್ಟಿಗೆ ಸೌಕರ್ಯಗಳನ್ನು ಒದಗಿಸಿಕೊಡುವುದು ರಾಜನ ಕರ್ತವ್ಯವು. ದೇಶಾಂತರಗಳಲ್ಲಿ ಅನೇಕ ಅಪಾಯಗಳಿಗೆ ಗುರಿಯಾಗಿ ತಮ್ಮ ದೇಹಾಭಿಮಾನವನ್ನು ಕೂಡ ತೊರೆದು ಧೈರ್ಯದಿಂದ ದ್ವೀಪಾಂತರಗಳಿಗೆಹೋಗಿ, ಅಲ್ಲಿ ದೊರಕುವ ಅಪೂರ್ವವಸ್ತುಗಳನ್ನು ಕ್ರಯಕ್ಕೆ ಕೊಂಡು ತಂದಮೇಲೆ ಆ ವಸ್ತುಗಳನ್ನು ಕೊಳ್ಳತಕ್ಕವರೇ ಇಲ್ಲದೆ ಹೋದರೆ ಆ ವರ್ತಕರು ನಷ್ಟಪಟ್ಟು ಕೆಟ್ಟುಹೋಗುವರು. ರಾಜನು ಇದಕ್ಕೆ ಅವಕಾಶವುಂಟಾಗದಹಾಗೆ ಅವರು ತಂದ ಅನರ್ಘ್ಯವಸ್ತುಗಳನ್ನು ತಾನು ಕೊಳ್ಳುವುದರ ಮೂಲಕವೂ, ಇತರರಿಗೆ ಕೊಡಿಸುವುದರ ಮೂಲಕವೂ ಪ್ರೋತ್ಸಾಹ ಕೊಡುವುದು ಅಗತ್ಯವು. ದೇಶದಲ್ಲಿ ವ್ಯಾಪಾರಾಭಿವೃದ್ಧಿಯಾಗಬೇಕಾದರೆ ಭೂಮಾರ್ಗಗಳೂ, ಜಲಮಾರ್ಗಗಳೂ ಸುರಕ್ಷಿತಗಳಾಗಿರಬೇಕು. ಊರಿಂದೂರಿಗೆ ವಿಶಾ

ಲವಾದ ರಾಜಮಾರ್ಗಗಳನ್ನು ಮಾಡಿಸಿ, ಬಿಸಿಲುಗಾಳಿಗಳ ತೊಂದರೆಯಿಲ್ಲದಂತೆ ಮಾರ್ಗದ ಎರಡು ಕಡೆಗಳಲ್ಲಿಯೂ ಸಾಲುಮರಗಳನ್ನು ಬೆಳೆಯಿಸಬೇಕು. ಅಲ್ಲಲ್ಲಿ ಕೊಳಗಳನ್ನೂ, ಪ್ರಯಾಣಿಕರು ಇಳಿದುಕೊಳ್ಳುವುದಕ್ಕೆ ವಸತಿಗೃಹಗಳನ್ನೂ ನಿರ್ಮಾಣಮಾಡಿಸಬೇಕು. ವರ್ತಕರನ್ನೂ ಮಾರ್ಗಸ್ಥರಾದ ಇತರ ಜನರನ್ನೂ ಕಳ್ಳಕಾಕರು ಸುಲಿಗೆ ಮಾಡಿ, ಅವರಲ್ಲಿರುವ ವಸ್ತುಗಳನ್ನು ಅಪಹರಿಸದಹಾಗೆ ಯೋಗ್ಯರಾದ ಉದ್ಯೋಗಸ್ಥರನ್ನು ಕಾವಲಾಗಿ ನಿಯಮಿಸಬೇಕು. ಮಾರ್ಗದಲ್ಲಿ ಅಡ್ಡವಾಗಿ ಸಿಕ್ಕುವ ನದಿಗಳಿಗೆ ಸೇತುವೆಗಳನ್ನು ಕಟ್ಟಿಸಿಕೊಡಬೇಕು. ದೈವವಶದಿಂದ ನಷ್ಟಹೊಂದಿದ ವ್ಯಾಪಾರಿಗಳಿಗೆ ಬಡ್ಡಿಇಲ್ಲದೆ ರಾಜ್ಯದ್ರವ್ಯದಿಂದ ಸಾಲ ಕೊಟ್ಟು, ಸ್ವಲ್ಪಸ್ವಲ್ಪವಾಗಿ ಆ ಧನವನ್ನು ಹಿಂದಕ್ಕೆ ಪಡೆಯುತ್ತಾ ಬರಬೇಕು. ಈ ವಿಚಾರಗಳಿಗೆ ನೀನು ಮುಖ್ಯವಾದ ಗಮನವನ್ನು ಕೊಡುತ್ತಿರುವೆಯಾ !

ರಾಯನೇ, ಕೃಷಿಯಲ್ಲದೆ ಜನರ ಉಪಭೋಗಕ್ಕೋಸ್ಕರ ವಸ್ತ್ರಾಭರಣಮುಂತಾದ ಹಲವುಬಗೆಯ ಪದಾರ್ಥಗಳು ಅಗತ್ಯವಾಗಿರುವುವು. ಇವುಗಳನ್ನು ಮಾಡಿಕೊಡುವ ಕೈಗಾರಿಕೆವೃತ್ತಿಯ ಜನರಿಗೆ ಪ್ರೋತ್ಸಾಹಕೊಟ್ಟು, ನಾಣ್ಯವಾಗಿಯೂ ಅಂದವಾಗಿಯೂ ಇರುವ ಭೋಗ್ಯವಸ್ತುಗಳನ್ನು ಹೆಚ್ಚು ಹೆಚ್ಚಾಗಿ ಸಿದ್ಧಮಾಡಿಸಬೇಕು. ಯಾವ ವೃತ್ತಿಯಾದರೂ ತಕ್ಕ ಆಶ್ರಯದಾತರಿಲ್ಲದಿದ್ದರೆ ಲಾಭಕರವಾಗಿ ಪರಿಣಮಿಸದು. ಉತ್ತಮ ಪದಾರ್ಥಗಳನ್ನು ರಾಜನು ಕೊಳ್ಳುವುದರ ಮೂಲಕ ಪ್ರೋತ್ಸಾಹಗೊಳಿಸಿದರೆ ಅಧಿಕಾರಿಗಳೂ, ಪ್ರಜೆಗಳೂ ಅವುಗಳನ್ನು ಕೊಂಡು ಉಪಯೋಗಿಸುತ್ತಾ ಬರುವರು. ಅವುಗಳನ್ನು ಮಾಡಿಕೊಡುವ ಜನರಿಗೂ ಸುಖವಾದ ಜೀವನ ಜರುಗುವುದಲ್ಲದೆ ಶ್ರೇಷ್ಠತರವಾದ ಪದಾರ್ಥಗಳೂ ಸಿದ್ಧವಾಗುವುವು. ನೀನು

ಇಂತಹ ಪರಿಶ್ರಾಮಿಕವೃತ್ತಿಯ ಜನರಿಗೆ ತಕ್ಕ ಆಶ್ರಯ ಕೊಡುತ್ತ ಲಿರುವೆಯಾ? ಜನರು ಸಾಮಾನ್ಯವಾಗಿ ಸ್ವದೇಶದಲ್ಲಿ ಮಾಡಲ್ಪಟ್ಟ ಪದಾರ್ಥಗಳನ್ನೇ ಉಪಯೋಗಿಸಿ, ಆಯಾ ವೃತ್ತಿಯ ಜನರಿಗೆ ಪ್ರೋತ್ಸಾಹವನ್ನುಂಟುಮಾಡುವಂತೆ ಏರ್ಪಡಿಸುವೆಯಾ? ಪರದೇಶದಿಂದ ಬರುವ ಉತ್ತಮವಸ್ತುಗಳಹಾಗೆ ಸ್ವದೇಶದಲ್ಲಿಯೇ ಅಂತಹ ಪದಾರ್ಥಗಳನ್ನು ಮಾಡಿಸಲು ತಕ್ಕ ಪ್ರಯತ್ನಗಳನ್ನು ಮಾಡುತ್ತಿರುವೆಯಾ?

ಎಲೈ ಯುಧಿಷ್ಠಿರನೇ, ರಾಜನೇ ಕಾಲಕ್ಕೆ ಕಾರಣನೆಂದು ಹೇಳುವರು. "ರಾಜಾರಾಷ್ಟ್ರಕೃತಂಪಾಪಂ" ಎಂದರೆ ಪ್ರಜೆಗಳು ಮಾಡಿದ ಪಾಪಗಳಿಗೆ ಅರಸನೇ ಉತ್ತರವಾದಿಯಾಗುವನು. ಜನರು ಪಾಪಮಾಡದೆ ಸತ್ಕಾರ್ಯನಿರತರಾಗಿರಬೇಕಾದರೆ ಅವರಿಗೆ ಯುಕ್ತಾಯುಕ್ತಪರಿಜ್ಞಾನ ಉಂಟಾಗಬೇಕು. ಅಂತಹ ಜ್ಞಾನಸಾಧಕವಾದ ವಿದ್ಯೆಯನ್ನು ಜನಸಾಮಾನ್ಯಕ್ಕೆಲ್ಲಾ ಕಲಿಸಿಕೊಟ್ಟರೆ ಪ್ರಜೆಗಳು ಜ್ಞಾನವಂತರಾಗಿ ಅಕೃತ್ಯಗಳನ್ನು ಮಾಡದೆ ಸದ್ಮಾರ್ಗಗಳಲ್ಲಿ ಪ್ರವರ್ತಿಸುವರು. ಅಂತವರನ್ನು ಪಾಲಿಸುವುದು ರಾಜನಿಗೂ ಸುಲಭವಾಗಿರುವುದು. ಬ್ರಾಹ್ಮಣಾದಿ ನಾಲ್ಕು ವರ್ಣದ ಜನಗಳಿಗೂ ಅವರವರಿಗೆ ಆವಶ್ಯಕಗಳಾದ ವಿದ್ಯೆಗಳನ್ನು ಕಲಿಸಲು ಎಲ್ಲಾ ಕಡೆಗಳಲ್ಲಿಯೂ ವಿದ್ಯಾಶಾಲೆಗಳನ್ನು ಸ್ಥಾಪಿಸಿ ಪಂಡಿತರಾದ ಪಾಠಕರನ್ನು ನಿಯಮಿಸಿರುವೆಯಾ? ವಿದ್ಯಾವಂತರಾದ ಜನರ ಜೀವನಕ್ಕೆ ಕೊರತೆಯುಂಟಾಗದಂತೆ ಅವರವರಿಗೆ ತಕ್ಕ ಕೆಲಸಗಳನ್ನು ನಿಯಮಿಸಿ, ಕಷ್ಟಕ್ಕೆ ತಕ್ಕಂತೆ ವೇತನಗಳನ್ನು ಕೊಡುತ್ತಿರುವೆಯಾ?

ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಜನಾರೋಗ್ಯವು ಕೆಡದಂತೆಯೂ ನಿರ್ಮಲವಾದ ಗಾಳಿಯೂ ಬೆಳಕೂ ಸಿಕ್ಕುವಂತೆಯೂ

ಇರುವ ಮನೆಗಳನ್ನು ಕಟ್ಟಿಸಿಕೊಳ್ಳಲು ತಕ್ಕ ಅನುಕೂಲ್ಯಗಳನ್ನು ಕಲ್ಪಿಸಿಕೊಟ್ಟಿರುವೆಯಾ? ವ್ಯಾಧಿಗ್ರಸ್ತರಾದವರಿಗೆ ಔಷಧ ಚಿಕಿತ್ಸಾದಿ ಸದುಪಾಯಗಳು ಸುಲಭವಾಗಿ ದೊರೆಯುವಂತೆ ಅಲ್ಲಲ್ಲಿ ವೈದ್ಯಶಾಲೆಗಳನ್ನು ಏರ್ಪಡಿಸಿರುವೆಯಾ? ಸಾಂಕ್ರಾಮಿಕ ವ್ಯಾಧಿಗಳು ಅಕಸ್ಮಾತ್ತಾಗಿ ಬಂದರೆ ಅವು ದೇಶವೆಲ್ಲಾ ಹರಡದಂತೆ ತಕ್ಕ ಪ್ರತಿಕ್ರಿಯೆಗಳನ್ನು ಕಲ್ಪಿಸಿರುವೆಯಾ? ಆಗಾಗ್ಗೆ ಪ್ರಜೆಗಳ ವೃದ್ಧಿಕ್ಷಯಗಳನ್ನು ಪರಿಗಣಿಸಿ, ಜನಸಂಖ್ಯೆ ತಗ್ಗಿರುವ ಕಡೆಗಳಲ್ಲಿ ಕಾರಣಗಳೇನೆಂದು ಕಂಡುಹಿಡಿದು, ಆ ಕೊರತೆಗಳನ್ನು ಪರಿಹರಿಸಲು ತಕ್ಕ ಪ್ರಯತ್ನಗಳನ್ನು ಮಾಡುತ್ತಿರುವೆಯಾ?

ದೊರೆಯೇ, ನಿನ್ನ ರಾಜ್ಯದಲ್ಲಿರುವ ಲೋಹಗಳು, ರತ್ನಗಳು ಮುಂತಾದ ಖನಿಜ ಸಂಪತ್ತಿಯನ್ನು ಜನಸಮುದಾಯಕ್ಕೆ ಉಪಯೋಗಿಸುವಂತೆ ಅರಿಸಿ ತೆಗೆಯಲು ತಕ್ಕ ಜನಗಳನ್ನ ನಿಯಮಿಸಿ, ಅವು ದುರುಪಯೋಗವಾಗದಂತೆ ತಕ್ಕ ಏರ್ಪಾಡುಗಳನ್ನು ಮಾಡುತ್ತಿರುವೆಯಾ? ಮತ್ತು ದೇಶದಲ್ಲಿ ಸಮೃದ್ಧಿಯಾಗಿ ಮಳೆಸುರಿಯಲು ಅನುಕೂಲಿಸುವಂತೆ ಅಲ್ಲಲ್ಲಿ ಕಾಡುಗಳನ್ನು ಬೆಳೆಯಿಸಿ ಅಭಿವೃದ್ಧಿ ಪಡಿಸುತ್ತಿರುವೆಯಾ? ಇದಲ್ಲದೆ ದುಷ್ಟಮೃಗಗಳಿಂದ ಜನರಿಗೂ, ಪೈರುಪಚ್ಚೆಗಳಿಗೂ ತೊಂದರೆಯುಂಟಾಗದಹಾಗೆ ಆಗಾಗ್ಗೆ ಅವುಗಳನ್ನು ಬೇಟೆಯ ಮೂಲಕ ಹಿಡಿಸಲು ತಕ್ಕಪ್ರಯತ್ನಗಳನ್ನು ಮಾಡುತ್ತಿರುವೆಯಾ?

ವಾರಸದಾರರಿಲ್ಲದೆ ಸತ್ತವರ ಆಸ್ತಿಯನ್ನು ನೀನು ಸ್ವಂತಕ್ಕೆ ಉಪಯೋಗಿಸಿಕೊಳ್ಳದೆ ಅವರ ಹೆಸರಿನಿಂದಲೇ ವಿದ್ಯೆ, ವೈದ್ಯ, ಜಲಾಶಯ ಮುಂತಾದ ಧರ್ಮಕಾರ್ಯಗಳಿಗೋಸ್ಕರ ವಿನಿಯೋಗಿಸುತ್ತಿರುವೆಯಷ್ಟೆ?

ನಿನ್ನ ರಾಜಶಾಸನಗಳು ನ್ಯಾಯಬದ್ಧವಾಗಿಯೂ, ಪಕ್ಷಪಾತ

ವಿಲ್ಲದುವುಗಳಾಗಿಯೂ, ನಿರಪೇಕ್ಷೆ ಪಕಗಳಾಗಿಯೂ, ಪ್ರಜಾಸಾಮಾನ್ಯಕ್ಕೆಲ್ಲಾ ತಿಳಿಯತಕ್ಕವುಗಳಾಗಿಯೂ ಬಹಿರಂಗವಾಗಿ ಪ್ರಕಟಿಸಲ್ಪಡುತ್ತಿರುವುವೇ ? ನಿನ್ನ ಅಧಿಕಾರಿಗಳೂ ಪ್ರಜೆಗಳೂ ಅವುಗಳನ್ನು ಗೌರವಿಸುತ್ತಾ, ನ್ಯಾಯವಿರುದ್ಧವಿಲ್ಲದಂತೆ ವರ್ತಿಸುತ್ತಿರುವರೇ ? ನಿನ್ನ ಆಪ್ತರೂ ಬಂಧುಜನರೂ ತಾವು ರಾಜನಕಡೆಯವರೆಂದುಕೊಂಡು ಪ್ರಜಾಪೀಡನೆ ಮಾಡದಂತೆ ಗಮನಿಸುತ್ತಿರುವೆಯಾ ? ನಿನ್ನ ಕಡೆಯ ಅಧಿಕಾರಿಗಳು ಸ್ವಾರ್ಥತ್ಯಾಗಿಗಳಾಗಿ, ಲಂಚದ್ರೋಹಗಳಿಗೆ ಆಶಿಸದೆ, ಸ್ವಾಮಿಕಾರ್ಯಧುರಂಧರರಾಗಿಯೂ, ಪಾಪಭೀತರಾಗಿಯೂ ನಡೆಯುತ್ತಿರುವರೇ ? ಯಾವ ಉದ್ಯೋಗಸ್ಥನಾದರೂ ದುರಾಶೆಗಳಿಗೆ ಒಳಗಾಗಿ ಅನ್ಯಾಯದಿಂದ ಪ್ರಜಾಹಿಂಸೆಮಾಡಿದುದನ್ನು ತಿಳಿದರೆ ತತ್ಕ್ಷಣವೇ ಅಂತವನನ್ನು ಕ್ರೂರವಾಗಿ ಶಿಕ್ಷಿಸಿ, ಇತರರು ಅಂತಹ ಅಕೃತ್ಯ ಮಾಡದಂತೆ ಭಯವನ್ನು ಹುಟ್ಟಿಸುತ್ತಿರಬೇಕಲ್ಲವೆ !

ನೀನೂ ಮತ್ತು ನಿನ್ನ ಕಡೆಯ ಅಧಿಕಾರಿಗಳೂ ನಿಯಮಿತ ಕಾಲಗಳಲ್ಲಿ ಸಿದ್ಧರಾಗಿ ಬಂದು ಪ್ರಜೆಗಳಿಗೆ ಮತ್ತು ಕೈಕೆಳಗಿನ ಉದ್ಯೋಗಸ್ಥರಿಗೆ ದರ್ಶನಕೊಟ್ಟು ಅವರ ಪ್ರಾರ್ಥನೆಗಳನ್ನು ಕೇಳಿ, ಅವರ ಕೊರತೆಗಳನ್ನು ಪರಿಹರಿಸುತ್ತಿರುವಿರಾ ? ನಿನ್ನ ದೇಶದಲ್ಲಿ ಎಲ್ಲಿಯಾದರೂ ಕಳ್ಳರು, ಹಿಂಸಕರು ಮುಂತಾದ ದುಷ್ಟರು ಸೇರಿ ಜನರಿಗೆ ತೊಂದರೆಕೊಡುತ್ತಿರುವರೆಂಬ ಸುದ್ದಿ ತಿಳಿದರೆ ತತ್ಕ್ಷಣದಲ್ಲಿಯೇ ಅಲ್ಲಿಗೆಹೋಗಿ, ಆ ನೀಚರನ್ನು ನಿಗ್ರಹಿಸಿ, ಪ್ರಜಾಸೌಖ್ಯವನ್ನುಂಟುಮಾಡಲು ತಕ್ಕ ಏರ್ಪಾಡು ಮಾಡಿರುವೆಯಾ ? ನಿನ್ನ ನ್ಯಾಯಸ್ಥಾನಗಳಲ್ಲಿ ಅಧಿಕಾರಿಗಳು ದಾಕ್ಷಿಣ್ಯಪಕ್ಷಪಾತಗಳನ್ನು ತೊರೆದು, ಸತ್ಯಕ್ಕೂ ಧರ್ಮಕ್ಕೂ ಬದ್ಧರಾಗಿ ನ್ಯಾಯವನ್ನು ತೀರಿಸಲು ತಕ್ಕಂತೆ ಕಟ್ಟಳೆಗಳನ್ನು ಮಾಡಿರುವೆಯಾ ? ಅಪರಾಧಿಗಳಿಗೆ ತಪ್ಪಿಗೆ ತಕ್ಕಷ್ಟು

ಮಾತ್ರವೇ ಶಿಕ್ಷೆಗಳು ವಿಧಿಸಲ್ಪಡುತ್ತಿವೆಯೇ ? ವಂಚಕರು ನಿರಪರಾಧಿಗಳಮೇಲೆ ದೂರುಹೊರಿಸಿ, ನ್ಯಾಯಸ್ಥಾನಗಳಿಗೆ ಎಳೆದರೆ ಅಂತಹ ಸಂದರ್ಭಗಳಲ್ಲಿ ನಿಜಾಂಶವನ್ನು ಕಂಡುಹಿಡಿದು, ನಿರಪರಾಧಿಗಳನ್ನು ಬಿಟ್ಟುಬಿಟ್ಟು ಸುಳ್ಳುವ್ಯಾಜ್ಯತಂದ ದುಷ್ಟರನ್ನು ಶಿಕ್ಷಿಸುತ್ತಿರುವೆಯಾ ? ಜನರು ಸಾಮಾನ್ಯವಾಗಿ ದುಂದುವೆಚ್ಚದಿಂದಲೂ ಮದ್ಯಪಾನಗಳ ಸೇವನೆಯಿಂದಲೂ, ವಿಷಯ ಸುಖಾಪೇಕ್ಷೆಯಿಂದಲೂ ಸಾಲಮಾಡಿಕೆಡುತ್ತಿರುವರು. ಅಂತವುಗಳಿಗೆ ಅವಕಾಶಕೊಡದೆ ಪ್ರತಿಒಬ್ಬರೂ ತಮ್ಮ ಆದಾಯಕ್ಕೆ ಎಾರದಷ್ಟುಮಾತ್ರವೇ ವೆಚ್ಚಿಸುತ್ತಿರಬೇಕೆಂದು ಜನರಿಗೆ ಆಗಾಗ್ಗೆ ಎಚ್ಚರಕೊಡಿಸುತ್ತಿರುವೆಯಾ ? ಸಾಲಕೊಟ್ಟವರು ವರುಷಕ್ಕೆ ಸೇಕಡಾ ಹಾಗವೆಂದರೆ ಮೂಲದ್ರವ್ಯದ ನಾನೂರನೇ ಒಂದು ಪಾಲನ್ನು ಮಾತ್ರ ಬಡ್ಡಿ ಪಡೆಯಲು ಕಟ್ಟಳೆ ಮಾಡಿರುವೆಯಾ ? ಹೆಚ್ಚು ಬಡ್ಡಿ ತೆತ್ತುತೆತ್ತು ಎಷ್ಟೋಜನರು ಕೆಟ್ಟುಹೋಗುತ್ತಿರುವರು. ಉತ್ತಮನಾದ ಅರಸನು ಇದಕ್ಕೆ ಅವಕಾಶ ಕೊಡಬಾರದು. ಕಳ್ಳರು, ಕೊಲೆಗಾರರು, ಪರಸ್ತ್ರೀಯರನ್ನು ಕೆಡಿಸಿದವರು, ಪರನಿಂದಕರು ಮುಂತಾದ ದುರ್ಮಾರ್ಗರಿಗೆ ಅವರು ತನ್ನ ಕಡೆಯುವರೆಂದು ಪಕ್ಷಪಾತತೋರಿಸದೆ ತಕ್ಕ ಶಿಕ್ಷೆಗಳನ್ನು ಕೊಡಿಸಿ, ಮುಂದೆ ಅವರು ಅಂತಹ ಅಕೃತ್ಯ ನಡಿಸದಂತೆ ಎಚ್ಚರ ತೆಗೆದುಕೊಳ್ಳುತ್ತಿರುವೆಯಾ ?

ರಾಜನೇ, ಜ್ಞಾನಬಲದಿಂದಲೇ ಜೀವಿಸಿಕೊಂಡು, ರಾಜನ ಮತ್ತು ಪ್ರಜೆಗಳ ಕ್ಷೇಮವನ್ನೇ ಸದಾಕಾಲವೂ ಬಯಸಿ, ಅವರನ್ನು ಹರಸುತ್ತಾ ದೈವಭಕ್ತರಾಗಿರುವ ಸದ್ಬ್ರಾಹ್ಮಣರಿಗೆ ಜೀವನಕ್ಕೆ ಕೊರತೆ ಇಲ್ಲದಂತೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿರುವೆಯಾ ? ನಿನ್ನ ಪುರೋಹಿತನು ಶಾಸ್ತ್ರಜ್ಞನಾಗಿಯೂ, ಸದಾಚಾರ ಸಂಪನ್ನ

ನಾಗಿಯೂ, ಲೌಕಿಕವೈದಿಕವ್ಯವಹಾರಜ್ಞಾನವನ್ನು ಪಡೆದವನಾಗಿ ಯೂ, ಅರಿಷಡ್ವರ್ಗಗಳನ್ನು ಜಯಿಸಿದವನಾಗಿಯೂ ಇರುವನೆ? ಆತನು ಮತ್ತು ಇತರ ಪುರೋಹಿತರುಗಳು ನಿತ್ಯವೂ ಕಾಲಕಾಲಗ ಳಲ್ಲಿ ಔಪಾಸನೆಮಾಡುತ್ತಾ ಯಜನಾದಿಷಟ್ಕರ್ಮನಿರತರಾಗಿ, ದುರ್ಭಿಕ್ಷ, ಅನಾವೃಷ್ಟಿ, ಮಾರಿಕೋಪದ್ರವ ಮುಂತಾದ ವಿಪತ್ಕಾ ಲಗಳಲ್ಲಿ ಶಾಂತಿಜಪ ನಿಯಮಾದಿಗಳಿಂದ ಆತೊಂದರೆಗಳನ್ನು ಪರಿಹರಿ ಸಲು ಪ್ರಯತ್ನಿಸುತ್ತಿರುವರೆ? ಮಠಾಧಿಪತಿಗಳೂ, ದೇವಾಲಯಗಳ ಧರ್ಮದರ್ಶಿಗಳೂ ಸದಾಚಾರ ಸಂಪನ್ನರಾಗಿಯೂ, ನಿಷ್ಕಾಮರಾ ಗಿಯೂ, ಪ್ರಜಾಹಿತಚಿಂತಕರಾಗಿಯೂ, ಧರ್ಮಮಾರ್ಗೈಕತತ್ಪರ ರಾಗಿಯೂ ಇರುವರೆ? ಎಲ್ಲರೂ ತಮ್ಮ ತಮ್ಮ ವರ್ಣಾಶ್ರಮ ಧರ್ಮ ಗಳನ್ನು ತಪ್ಪದೆ ಅನುಸರಿಸುತ್ತಿರುವರೆ? ಎಲೈ ಯುಧಿಷ್ಠಿರನೇ, ವರ್ಣ ಸಾಂಕರ್ಯಕ್ಕೆ ದುಷ್ಟಸ್ತ್ರೀಯರೇ ಮೂಲವೆಂದು ಹೇಳುವರು. ಅಂತವರನ್ನು ಕಂಡುಹಿಡಿದು ಶಿಕ್ಷಿಸಿ, ಮುಂದೆ ದುರ್ಮಾರ್ಗದಲ್ಲಿ ಪ್ರವರ್ತಿಸದಂತೆ ಮಾಡುತ್ತಿರುವೆಯಾ? ದೈವಭಕ್ತಿಯುಳ್ಳವರಾ ಗಿಯೂ, ಧರ್ಮಾಭಿಮಾನಿಗಳಾಗಿಯೂ, ಪಾಪಭೀರುಗಳಾಗಿಯೂ ಇರುವಂತೆ ಜನರಿಗೆ ಸನ್ಮಾರ್ಗವನ್ನು ಬೋಧಿಸುವುದಕ್ಕೆ ನಿನ್ನ ರಾಷ್ಟ್ರದ ಪ್ರತಿ ಒಂದು ಗ್ರಾಮದಲ್ಲಿಯೂ ಭಜನೆ, ಹರಿಕಥೆ, ಪುರಾಣಶ್ರವಣ, ಇವು ನಡೆಯುವಿಕೆಗೆ ತಕ್ಕ ಅನುಕೂಲತೆಗಳನ್ನುಂಟು ಮಾಡಿರುವೆಯಾ? ನಿನ್ನ ದೇಶದಲ್ಲಿ ದೇವಾಲಯಗಳೂ, ಮಠಗಳೂ, ಪಾಠಶಾಲೆಗಳೂ, ಸತ್ರ ಮುಂತಾದ ಧರ್ಮಶಾಲೆಗಳೂ, ಪರಿಶುದ್ಧ ಗಳಾಗಿಯೂ, ಪಂಡಿತರಿಂದ ಪೂರ್ಣವಾದುವುಗಳಾಗಿಯೂ ಇರು ವುವೆ? ನೀನು ಮತ್ತು ನಿನ್ನ ಪ್ರಜೆಗಳು ಸತ್ಪಾತ್ರದಲ್ಲಿಯೇ ದಾನ ಮಾಡುತ್ತಾ ಸತ್ಪುರುಷರನ್ನೂ ಪೂಜ್ಯರನ್ನೂ ಗೌರವಿಸುತ್ತಾ ಇರುವಿರಾ?

ಎಲೈ ಧರ್ಮಜ್ಞನೇ, ನಿನ್ನ ರಾಜ್ಯದಲ್ಲಿ ಹಿರಿಯರ ಆಜ್ಞೆಯನ್ನು ಕಿರಿಯರು ಎದುರಿಸದೆ ಗೌರವಿಸುತ್ತಿರುವರೆ? ಜನರು ತಮ್ಮ ತಾಯಿ ತಂದೆಗಳ ವಾಕ್ಯಗಳನ್ನು ನಡಿಸುವರೆ? ನಿನ್ನ ಪ್ರಜೆಗಳಲ್ಲಿ ಅಣ್ಣತಮ್ಮಂದಿರೂ, ಅಕ್ಕತಂಗಿಯರೂ, ಅತ್ತೆಸೊಸೆಯರೂ, ಅತ್ತಿಗೆ ನಾದಿನಿಯರೂ, ಪರಸ್ಪರ ಕಲಹಗಳನ್ನಾಡದೆ ಒಬ್ಬರಿಗೊಬ್ಬರು ಪ್ರೀತಿಸುವರೆ? ಜನರು ಕೈಹಿಡಿದ ಹೆಂಡತಿಯನ್ನು ಅನಾದರಣೆಮಾಡದೆ ಪೋಷಿಸುತ್ತಾ, ಪರಸ್ತ್ರೀಯರನ್ನು ಸಹೋದರಿಯರೆಂದು ಭಾವಿಸಿ ವರ್ತಿಸುವರೆ? ಜನರು ಮುಂದೆ ಹೊರಗೆ ಆಡಂಬರವನ್ನು ತೋರುತ್ತಾ, ಪರಿಶುದ್ಧರಂತೆ ನಟಿಸಿದರೂ ಮನಸ್ಸಿನಲ್ಲಿ ದುರಾಲೋಚನೆಗಳನ್ನು ಮಾಡುತ್ತಾ ಪಾಪಕೃತ್ಯಗಳಿಗೆ ತೊಡಗುವರು. ಅಂತಹ ಬಹಿರಾಡಂಬರಕ್ಕೆ ನೀನು ಮೆಚ್ಚದೆ ಮನಶ್ಶುದ್ಧಿಯುಳ್ಳವರನ್ನೇ ಮನ್ನಿಸುತ್ತಿರುವೆಯಾ? ವೃದ್ಧಾಂಗರು ಕಷ್ಟಪಟ್ಟು ಕೆಲಸಮಾಡಿ ಹೇಗಾದರೂ ಜೀವನೋಪಾಯಗಳನ್ನು ಹುಡುಕಿಕೊಂಡು ಹೊಟ್ಟೆ ಹೊರೆದುಕೊಳ್ಳುವರು: ದುರ್ದೈವದಿಂದ ಅಂಗಹೀನರಾದ ಕುಂಟರು, ಕುರುಡರು, ಮೂಗರು ಮುಂತಾದವರಿಗೆ ಅನ್ನವಸ್ತ್ರಗಳಿಗೆ ತೊಂದರೆ ಇಲ್ಲದಂತೆ ಅನುಕೂಲತೆಗಳನ್ನು ಕಲ್ಪಿಸಿ, ಅಂತವರನ್ನು ಮಕ್ಕಳಂತೆ ತಿಳಿದು ಪೋಷಿಸುತ್ತಿರುವೆಯಾ?

ಎಲೈ ಯುಧಿಷ್ಠಿರನೇ, ಸಣ್ಣ ಇರುವೆಯು ಮೊದಲುಗೊಂಡು ಬ್ರಹ್ಮಪರ್ಯಂತವಿರುವ ಸಮಸ್ತ ಪ್ರಾಣಿಗಳನ್ನೂ ಸೃಷ್ಟಿಸಿ, ಅವುಗಳಿಗೆ ಬೇಕಾದ ಆಹಾರಪಾನೀಯಗಳನ್ನು ಕಲ್ಪಿಸಿ ರಕ್ಷಿಸುತ್ತಿರುವ ಪರಮಾತ್ಮನೇ ಸಕಲ ಜಗತ್ಕಾರಣನೆಂದು ತಿಳಿದು ಆತನಲ್ಲಿ ನಿಶ್ಚಲವಾದ ಭಕ್ತಿಯನ್ನಿಟ್ಟುಕೊಂಡು ನಿಯಮದಿಂದ ಆರಾಧಿಸುತ್ತಾ, ನೀನು ಮಾಡುವ ಸಮಸ್ತ ಕರ್ಮಗಳನ್ನೂ ನಿಷ್ಕಾಮ್ಯಬುದ್ಧಿಯಿಂದ ಆಚರಿಸಿ

ಆ ಭಗವಂತನಿಗೆ ಅರ್ಪಿಸುತ್ತಾ ಇದ್ದರೆ ನಿನ್ನಲ್ಲಿ ಆ ಪರಮಾತ್ಮನ ಅನುಗ್ರಹವುಂಟಾಗಿ ನಿನಗೆ ನಿತ್ಯಾನಂದಪದವಿಯು ಲಭಿಸುವುದು.

ರಾಯನೇ, ಹೇಳಿಕೊಟ್ಟಬುದ್ಧಿಯೂ, ಕಟ್ಟಿಕೊಟ್ಟಬುತ್ತಿಯೂ, ಎಷ್ಟುದೂರಬರುವುದು ? ಹಲವು ಶಾಸ್ತ್ರಗಳನ್ನೋದಿದರೂ ತಿಳಿಯುಬರುವ ಮುಖ್ಯತತ್ವವು ಒಂದೇ. ಜಾತಿಮತಗಳು ಭಿನ್ನವಾಗಿದ್ದರೂ ಆಚಾರಗಳು ಬೇರೆಬೇರೆಯಾಗಿದ್ದರೂ, ವ್ಯವಹಾರಗಳು ಭೇದಿಸಿದ್ದರೂ ಅವುಗಳಿಂದ ಪಾಪಪುಣ್ಯಗಳು ಬರುವುದಿಲ್ಲ. ಎಲ್ಲಿ ನೋಡಿದರೂ ಪರರಿಗೆ ಹಿಂಸೆಮಾಡುವುದೇ ಪಾಪವು. ಪರರಿಗೆ ಉಪಕಾರಮಾಡುವುದೇ ಪುಣ್ಯವು. ಇದೇ ಸರ್ವಧರ್ಮಗಳ ರಹಸ್ಯವು. ಸಕಲ ವೇದಸಾರವು. ನಿಶ್ಚಿತವಾದ ಮಂತ್ರವು.

ಈ ಪ್ರಕಾರವಾಗಿ ಕಚ್ಚಿತ್ಪ್ರಶ್ನೆಗಳನ್ನು ಕೇಳುವುದರಮೂಲಕ ಸಮಸ್ತ ರಾಜನೀತಿಗಳನ್ನೂ ಉಪದೇಶಿಸಿದ ನಾರದಮಹರ್ಷಿಯ ವಾಕ್ಯಗಳನ್ನು ಕೇಳಿ, ಯುಧಿಷ್ಠಿರನು ಪರಮಾನಂದಭರಿತನಾಗಿ ಆ ಮುನೀಂದ್ರನಿಗೆ ಕೈಮುಗಿದು ನಿಂತುಕೊಂಡು ವಿನಯದಿಂದ ಇಂತೆಂದನು.

ಎಲೈ ಮಹಾತ್ಮರೇ, ನಿಮ್ಮ ಉಪದೇಶವಾಕ್ಯಗಳೆಂಬ ಸೂರ್ಯಕಿರಣಗಳಿಂದ ನನ್ನ ಅಜ್ಞಾನಾಂಧಕಾರವು ತೊಲಗಿ, ಅಂತಃಕರಣವು ನಿರ್ಮಲವಾಯಿತು. ನೀವು ಅಪ್ಪಣೆಕೊಡಿಸಿದ ಸಮಸ್ತವಿಷಯಗಳನ್ನೂ ಏಕಕಾಲದಲ್ಲಿ ಆಚರಣೆಗೆ ತರುವುದು ಸಾಧ್ಯವಲ್ಲವು. ಆದರೂ ನನ್ನ ತಿಳುವಳಿಕೆಗೆ ತಕ್ಕಂತೆ ಇವುಗಳನ್ನು ಬಹುಮಟ್ಟಿಗೆ ಬಳಕೆಯಲ್ಲಿಟ್ಟುಕೊಂಡಿದ್ದೇನೆ. ಇನ್ನೂ ಕೆಲವು ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಅವಕಾಶವಾದಹಾಗೆಲ್ಲಾ ಅವುಗಳನ್ನು ತಪ್ಪದೆ ಆಚರಣೆಯಲ್ಲಿ ತರುತ್ತೇನೆ. ಕ್ಷಮಿಸಬೇಕು.

ತಮ್ಮಂತಹ ಪ್ರಾಜ್ಞರು ಲೋಕಾನುಗ್ರಹಾರ್ಥವಾಗಿಯೇ ಎಲ್ಲಾ ಕಡೆಗಳಲ್ಲಿಯೂ ಸಂಚಾರಮಾಡುತ್ತಾ, ಅಕಿಂಚನರಾದ ನನ್ನಂತಹ ಪಾಮರರ ಕಿವಿಗಳಿಗೆ ತಮ್ಮ ಸದುಪದೇಶವೆಂಬ ಅಮೃತವನ್ನು ಕುಡಿಸುತ್ತಾ ಬಂದರೆ, ಅಪ್ರಮತ್ತರಾಗಿ, ಭ್ರಮಪ್ರಮಾದಾದಿದೋಷಗಳಿಗೆ ಎದೆಗೊಡದೆ, ಕರ್ತವ್ಯ ಕರ್ಮಗಳನ್ನು ಮಾಡಿ ನಿರ್ದುಷ್ಟರೆನಿಸಿಕೊಂಡು, ಪ್ರಜೆಗಳಿಗೆ ಸುಖವನ್ನುಂಟುಮಾಡುವುದರ ಮೂಲಕ ಕೃತಕೃತರಾಗುವೆವು. ನನ್ನ ಮೇಲಣ ಅನುಗ್ರಹದಿಂದ ಇಲ್ಲಿಗೆ ದಯಮಾಡಿಸಿ, ರಾಜನೀತಿಗಳನ್ನು ಸಮಗ್ರವಾಗಿ ಉಪದೇಶಿಸಿದುದಕ್ಕೋಸ್ಕರ ಅತ್ಯಂತಕೃತಜ್ಞನಾಗಿ ಇರುವೆನು. ತಮ್ಮ ಉಪದೇಶವಾಕ್ಯಗಳಂತೆಯೇ ನನ್ನ ಕಾರ್ಯಗಳನ್ನು ನಡಿಸುತ್ತಾ ಬರಬೇಕೆಂದು ಮನಃಪೂರ್ವಕ ಪ್ರಯತ್ನಿಸುತ್ತಿರುವೆನು. ನನ್ನ ಪ್ರಯತ್ನಗಳಿಗೆ ಪರಮಾತ್ಮನ ಅನುಗ್ರಹ ವುಂಟಾಗಬೇಕೆಂದು ಪ್ರಾರ್ಥಿಸುತ್ತೇನೆ.



ಮುಂತಾದ ಯಾವಕಷ್ಟವೂ ಇಲ್ಲದೆ ದೇವಮಾನುಷಗಳಾದ ಸಕಲಾರ್ಥಗಳೂ ಸಿದ್ಧವಾಗಿರುವುವು. ಸದಾಕಾಲದಲ್ಲಿಯೂ ಫಲಭರಿತಗಳಾದ ವೃಕ್ಷಗಳೂ, ಪುಷ್ಪಭರಿತಗಳಾದ ಗುಲ್ಮಲತಾದಿಗಳೂ, ರಸವಂತವಾದ ಉದಕವೂ ಭಕ್ಷ್ಯಭೋಜ್ಯಾದಿ ಆಹಾರವಸ್ತುಗಳೂ ಸಿದ್ಧವಾಗಿರುವುವು. ಅಲ್ಲಿ ಯಯಾತಿ, ನಹುಷ, ಪೂರು, ಕಾರ್ತವೀರ್ಯ ಭರತ, ಶಶಬಿಂದು, ಸಗರ, ರಂತಿದೇವ, ಇಂದ್ರದ್ಯುಮ್ನ, ಶಂತನು ಮುಂತಾದ ರಾಜರ್ಷಿಗಳು ಲಕ್ಷಾಂತರಸುಂದಿ ವಾಸಮಾಡಿಕೊಂಡು ಆ ಯಮಧರ್ಮರಾಯನನ್ನು ಓಲಯಿಸುತ್ತಿರುವರು. ನಿಮ್ಮ ತಂದೆಯಾದ ಪಾಂಡುರಾಯನೂ ಅಲ್ಲಿಯೇ ಇರುವನು.

ಎಲೈರಾಯನೇ, ವರುಣಸಭೆಯ ವಿವರವನ್ನು ಕೇಳು. ಅದು ವಿಸ್ತಾರದಲ್ಲಿ ಯಮನಸಭೆಯಷ್ಟೇ ಇರುವುದು. ವಿಶ್ವಕರ್ಮನು ತನ್ನ ಚಾತುರ್ಯದಿಂದ ಜಲಮಧ್ಯದಲ್ಲಿಯೇ ಅಂತಹ ದಿವ್ಯಸಭೆಯನ್ನು ನಿರ್ಮಾಣಮಾಡಿಕೊಟ್ಟಿರುವನು. ಆ ಸಭೆಯಲ್ಲಿ ಶ್ರೇಷ್ಠರತ್ನಮಯಗಳಾದ ವೃಕ್ಷಗಳು, ಸದಾಕಾಲವೂ ಫಲಪುಷ್ಪಭರಿತಗಳಾಗಿರುವುವು. ಅಲ್ಲಿಯ ಪಕ್ಷಿಗಳು ಅತಿ ಮಧುರವಾಗಿ ಗಾನಮಾಡುತ್ತಿರುವುವು. ಸೆಕೆಯೂ ಚಳಿಯೂ ಇಲ್ಲದೆ ಸುಖಸಂಸ್ಪೃಶ್ಯವಾದ ಮಂದಮಾರುತವು ಸದಾಕಾಲವೂ ಬೀಸುತ್ತಿರುವುದು. ಅಲ್ಲಿ ವರುಣನು ದಿವ್ಯಾಂಬರಧರನಾಗಿಯೂ, ರತ್ನಾಭರಣಭೂಷಿತನಾಗಿಯೂ, ಗಂಧಪುಷ್ಪಾದಿಗಳನ್ನು ಧರಿಸಿದವನಾಗಿಯೂ, ಇದ್ದುಕೊಂಡು ಆಧಿಪತ್ಯವನ್ನು ನಡಿಸುತ್ತಿರುವನು. ಆ ಮಹಾಸಭೆಯಲ್ಲಿ ವಾಸುಕಿ, ತಕ್ಷಕ, ಕಂಬಳ, ಅಶ್ವತರ, ಕರ್ಕೋಟಕ, ಧನಂಜಯ ಮೊದಲಾದ ಸರ್ಪದೇವತೆಗಳೆಲ್ಲರೂ ಆ ವರುಣನ ಸೇವೆಮಾಡಿಕೊಂಡಿರುವರು. ಮತ್ತು ಬಲಿ, ನರಕ, ರಾವಣ, ವಾಲಿ, ಮೊದಲಾದ ದೈತ್ಯದಾನವರೂ ಅಲ್ಲಿಯೇ

ದಿವ್ಯಗಂಧ ಪುಷ್ಪ ವಸ್ತ್ರಾಭರಣಗಳಿಂದ ಅಲಂಕೃತರಾಗಿ ಸುಖವನ್ನನುಭವಿಸುತ್ತಿರುವರು.

ಇನ್ನು ಕುಬೇರನ ಸಭೆಯ ವಿವರವನ್ನು ಕೇಳು, ಅದು ನೂರು ಯೋಜನ ಉದ್ದವಾಗಿಯೂ ಎಪ್ಪತ್ತುಯೋಜನ ಅಗಲವಾಗಿಯೂ ಇರುವುದು. ಕುಬೇರನು ಬಹುಕಾಲ ತಪಸ್ಸುಮಾಡಿ ಅಂತಹ ದಿವ್ಯ ಸಭೆಯನ್ನು ಪಡೆದನು. ಧನಾಧ್ಯಕ್ಷನಾದ ಆ ಕುಬೇರನ ಪದವಿಗೆ ತಕ್ಕಹಾಗೆ ಆ ಸಭೆಯು ಕೈಲಾಸ ಶಿಖರಕ್ಕೆ ಸಮಾನವಾಗಿ ಚಂದ್ರ ಕಾಂತಿಯಿಂದ ಹೊಳೆಯುತ್ತಿರುವುದು. ಅಲ್ಲಿಯ ಪ್ರಾಸಾದಗಳು ಅತ್ಯುನ್ನತಗಳಾಗಿ ಸವರ್ಣಮಯವಾಗಿರುವುವು, ಅಲ್ಲಿ ರತ್ನಗಳಿಗಾಗಲಿ, ಸವರ್ಣನೊದಲಾದ ಲೋಹಗಳಿಗಾಗಲಿ, ಯಾವ ಕೊರತೆಯೂ ಇಲ್ಲ. ಅಂತಹ ಮಹಾಸಭೆಯಲ್ಲಿ ಗಂಧರ್ವಯಕ್ಷಕಿನ್ನರರು ಸದಾಕಾಲವೂ ದಿವ್ಯಮಂಗಳಗಾನಮಾಡುತ್ತಾ, ಸಭಾಸದರಿಗೆ ಕರ್ಣಾನಂದವನ್ನುಂಟುಮಾಡುತ್ತಿರುವರು. ಊರ್ವಶಿ, ಮೇನಕೆ, ಘೃತಾಚಿ ಮುಂತಾದ ಸಾವಿರಾರುಮಂದಿ ನೃತ್ಯಗೀತ ವಿಶಾರದೆಯರಾದ ಅಪ್ಸರಸ ಸ್ತ್ರೀಯರು ದಿವ್ಯವಾದ್ಯಗಳಿಂದ ಮನೋವಿನೋದವನ್ನುಂಟುಮಾಡುತ್ತಿರುವರು. ಅಲ್ಲಿ ಮಣಿಭದ್ರ, ಗುಹ್ಯಕ, ಗಜಕರ್ಣ, ಹಂಸಚೂಡ, ನಲಕೂಬರ ಮುಂತಾದವರು ಕುಬೇರನ ಸೇವೆಮಾಡಿಕೊಂಡಿರುವರು. ಶೂಲಪಾಣಿಯಾದ ಪರಮೇಶ್ವರನು ಆ ಮಹಾ ಸಭೆಯನ್ನಲಂಕರಿಸುತ್ತಿರುವನು.

ಎಲೈ ರಾಜನೇ, ಇನ್ನು ಬ್ರಹ್ಮಸಭಾ ವಿವರವನ್ನು ಹೇಳುವೆನು ಕೇಳು, ಆ ಸಭೆಯು ಹೀಗೆಯೇ ಇರುವುದೆಂದು ವರ್ಣಿಸಲು ನನ್ನಿಂದ ಸಾಧ್ಯವಲ್ಲ. ಆದರೂ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು, ಬಹುಕಾಲತಪಸ್ಸುಮಾಡಿ ಪಾಪರಹಿತರಾದವರು ಹೊರತು ಇತರರು ಆ ಸಭೆ

ಯನ್ನು ಪ್ರವೇಶಿಸಲಿಕ್ಕೆ ಅರ್ಹರಲ್ಲ. ಅಲ್ಲಿ ವಾಸಮಾಡುವವರಿಗೆ ಶೀತೋಷ್ಣಬಾಧೆಯಾಗಲಿ, ಹಸಿವು, ನೀರಡಿಕೆಗಳ ಭಯವಾಗಲಿ, ಶೋಕಮೋಹಾದಿ ಚಿಂತೆಗಳಾಗಲಿ ಒಂದೂ ಇಲ್ಲ. ಅಲ್ಲಿ ದಕ್ಷ, ಪ್ರಚೇತಸ, ಪುಲಹ, ಮರೀಚಿ, ಕಶ್ಯಪ, ಭೃಗು, ಅತ್ರಿ, ವಸಿಷ್ಠ, ಗೌತಮ, ಸನತ್ಕುಮಾರ, ಅಂಗಿರಸ್ಸು, ಪುಲಸ್ತ್ಯ, ವಾಲಖಿಲ್ಯ, ಮುಂತಾದ ಪ್ರಜೇಶ್ವರರೂ, ಮಹರ್ಷಿಗಳೂ, ಸೃಷ್ಟಿಕರ್ತನಾಗಿಯೂ; ಚತುರ್ಮುಖನಾಗಿಯೂ ಇರುವ ಬ್ರಹ್ಮದೇವನನ್ನು ಓಲೈಸುತ್ತಿರುವರು. ಸಕಲ ದೇವತೆಗಳೂ ಅಲ್ಲಿ ಬಂದು ಸೇರುವರು. ಆ ಸಭೆಯು ಸುಖಪ್ರದವಾಗಿಯೂ, ಸರ್ವತೇಜೋಮಯವಾಗಿಯೂ, ಬ್ರಹ್ಮರ್ಷಿಗಳಿಂದ ಕೂಡಿದುದಾಗಿಯೂ ಇರುವುದು. ಅದಕ್ಕೆ ಸಮಾನವಾದ ಸಭೆಯು ಯಾವಲೋಕದಲ್ಲಿಯೂ ಇಲ್ಲವು.

ಎಲೈ ರಾಜನೇ, ಲೋಕಾಂತರಗಳಲ್ಲಿರುವ ಆ ಸಭೆಗಳನ್ನು ಸಾಮಾನ್ಯಜನರು ನೋಡಲಿಕ್ಕೆ ಸಾಧ್ಯವಲ್ಲ. ಈ ಭೂಮಂಡಲದಲ್ಲಿ ನಿನ್ನ ಸಭೆಯು ಅಸದೃಶವಾಗಿದೆ. ಇಂತಹ ಸಭೆಯನ್ನು ಈ ಲೋಕದಲ್ಲಿ ಇನ್ನೆಲ್ಲಿಯೂ ನೋಡಿಲ್ಲ.

ಯುಧಿ:—ಮಹರ್ಷಿಯೇ, ದೇವೇಂದ್ರನ ಸಭೆಯಲ್ಲಿ ದೇವತೆಗಳೂ, ಯಮನ ಸಭೆಯಲ್ಲಿ ಮಹಾರಾಜರುಗಳೂ, ವರುಣನ ಸಭೆಯಲ್ಲಿ ನಾಗರೂ, ದೈತ್ಯರಾಜರೂ, ಕುಬೇರನ ಸಭೆಯಲ್ಲಿ ಯಕ್ಷರಾಕ್ಷಸರೂ, ಬ್ರಹ್ಮಸಭೆಯಲ್ಲಿ ಬ್ರಹ್ಮರ್ಷಿಗಳೂ, ಇರುವರೆಂದು ಹೇಳಿದಿರಿ. ಹರಿಶ್ಚಂದ್ರರಾಜನೊಬ್ಬನುಮಾತ್ರ ಇಂದ್ರನ ಸಭೆಯಲ್ಲಿ ಸಾಕ್ಷಾದಿಂದ್ರನಿಗೆ ಸಮಾನನಾಗಿ ಕುಳಿತಿರುವನೆಂಬುದನ್ನು ಕೇಳಿ ಆಶ್ಚರ್ಯಪಡುತ್ತೇನೆ. ಆತನು ಯಾವಪುಣ್ಯಕರ್ಮವನ್ನಾಚರಿಸಿದುದರಿಂದ ಅಂತಹ ಪದವಿಯನ್ನು ಪಡೆದನು?

ನಾರದ.— ಎಲೈ ರಾಜೇಂದ್ರನೇ, ಸತ್ಯಪ್ರತಿಜ್ಞನಾದ ಆ ಹರಿಶ್ಚಂದ್ರನು ಅನೇಕ ಧರ್ಮಗಳನ್ನಾಚರಿಸಿ, ರಾಜಸೂಯವೆಂಬ ಮಹಾಯಜ್ಞವನ್ನು ಮಾಡಿದನು. ಆದರ ಫಲದಿಂದ ಅಂತಹ ಪದವಿಯು ಅವನಿಗೆ ಲಭ್ಯವಾಯಿತು. ನಿಮ್ಮ ತಂದೆಯಾದ ಪಾಂಡುರಾಜನು ಯಮಲೋಕದಲ್ಲಿ ಇತರ ರಾಜರೊಂದಿಗೆ ಸುಖವಾಗಿದ್ದರೂ ಹರಿಶ್ಚಂದ್ರನಂತೆ ತಾನೂ ಇಂದ್ರಲೋಕದಲ್ಲಿ ಸುಖಿಸುವ ಭಾಗ್ಯವನ್ನು ಪಡೆದಿಲ್ಲವೆಂಬ ಕೊರತೆಯಿಂದ ಇದ್ದಾನೆ. ನಾನು ಅಲ್ಲಿಗೆ ಹೋಗಿದ್ದಾಗ ನಿನಗೆ ತಿಳಿಸಬೇಕೆಂದು ಒಂದು ಸಂದೇಶವನ್ನು ಹೇಳಿ ಕಳುಹಿರುವನು.

ಯುಧಿ.—(ಆತ್ಯಾತುರದಿಂದ) ಸ್ವಾಮಿಾ, ನಮ್ಮ ತಂದೆಯು ಹೇಳಿಕಳುಹಿರುವ ಸಂದೇಶವನ್ನು ದಯಮಾಡಿ ಅಪ್ಪಣೆಕೊಡಿಸಬೇಕು.

ನಾರದ.—ಎಲೈ ಧರ್ಮರಾಯನೇ, ನಿನ್ನ ತಂದೆಯಾದ ಪಾಂಡುರಾಯನು ತಾನೂ ಹರಿಶ್ಚಂದ್ರನಂತೆ ಇಂದ್ರಲೋಕದಲ್ಲಿ ಉತ್ತಮ ಪದವಿಯನ್ನು ಪಡೆಯಬೇಕಂತೆ! ಇತರರಿಂದ ಮಾಡಲಸಾಧ್ಯವಾದ ರಾಜಸೂಯ ಯಾಗವನ್ನು ನೀನು ಮಾಡಬೇಕಂತೆ! ಆ ಪುಣ್ಯಫಲದಿಂದ ನಿಮ್ಮ ತಂದೆಗೆ ಅಂತಹ ಪದವಿಯು ಲಭಿಸುವುದಂತೆ! ನೀನು ಹೇಗಾದರೂಮಾಡಿ ಆ ಮಹಾಯಾಗವನ್ನು ನೆರವೇರಿಸಿ, ಆತನ ಕೊರತೆಯನ್ನು ಪರಿಹರಿಸಬೇಕಂತೆ! ನಿನಗೆ ಈ ವಿಷಯವನ್ನು ತಿಳಿಸಿ, ಈ ಮಹಾಕ್ರತುವನ್ನು ನಡಿಸಬೇಕೆಂದು ಹೇಳಿಕಳುಹಿರುವನು.

ಈ ಮಾತನ್ನು ಕೇಳಿದ ಕೂಡಲೇ ಯುಧಿಷ್ಠಿರನ ಮನಸ್ಸಿನಲ್ಲಿ ತನ್ನ ತಂದೆಯ ಸ್ಥಿತಿಯ ವಿಷಯದಲ್ಲಿ ವಿಚಾರವುಂಟಾಯಿತು. ಮತ್ತು ಆತನ ಉದ್ದೇಶವನ್ನು ನೆರವೇರಿಸಿ ಕೃತಾರ್ಥನಾಗಬೇಕೆಂದು

ನಿಶ್ಚಯಿಸಿದನು ಆಗ ಆತನು ನಾರದನನ್ನು ನೋಡಿ, "ಮಹರ್ಷಿಗಳೇ, ತಮ್ಮ ಉಪದೇಶದಂತೆ ನನ್ನ ಕೈಯಲ್ಲಾದಮಟ್ಟಿಗೆ ಪ್ರಯತ್ನಿಸಿ ಶ್ರೀಕೃಷ್ಣಾನುಗ್ರಹದಿಂದ ರಾಜಸೂಯ ಯಾಗವನ್ನು ಮಾಡುವೆನು. ತೀರ್ಥರೂಪರಿಗೆ ಈ ವಿಷಯವನ್ನು ಅರಿತಪಡಿಸಬಹುದು." ಎಂದು ಅಂಕಿತಮಾಡಿದನು. ಆ ನಾರದ ಮಹರ್ಷಿಯು ನಿನ್ನ ಇಷ್ಟಸಿದ್ಧಿಯಾಗಲೆಂದು ಹರಸಿ, ಹೊರಟುಹೋದನು.

ಆಬಳಿಕ ಯುಧಿಷ್ಠಿರನು ಒಂದು ಮಂತ್ರಾಲೋಚನಾ ಸಭೆಯನ್ನು ಕೂಡಿಸಿದನು. ಆದರಲ್ಲಿ ಆತನ ತಮ್ಮಂದಿರೂ, ಪುರೋಹಿತನಾದ ಧೌಮ್ಯನೂ, ದ್ರುಪದ ಧೃಷ್ಟದ್ಯುಮ್ನಾದಿ ಬಂಧುಜನರೂ, ಅಭಿಮನ್ಯು ಮೊದಲಾದ ಪುತ್ರರೂ ಬಂದು ಸೇರಿದ್ದರು. ಆಗ ಯುಧಿಷ್ಠಿರನಿಂತೆಂದನು.

ಯುಧಿ.—ಸಭಿಕರಿರಾ, ಇಂದ್ರಪ್ರಸ್ಥದಲ್ಲಿ ಆಳುತ್ತಿರುವ ಈ ನಮ್ಮ ರಾಜ್ಯವು ನಿಮ್ಮಗಳ ಸಹಾಯದಿಂದ ಧನಧಾನ್ಯ ಸಮೃದ್ಧವಾಗಿದೆ. ಪ್ರಜೆಗಳೆಲ್ಲರೂ ಸುಖದಿಂದ ಇದ್ದಾರೆ. ಪೂರ್ವದಲ್ಲಿ ಆಳಿದ ಭರತ, ನಳ, ನಹುಷಾದಿರಾಯರ ಪ್ರಭುತ್ವಗಳಲ್ಲಿ ಜನರು ಅನುಭವಿಸುತ್ತಿದ್ದಂತೆಯೇ ಈಗಲೂ ನೆಮ್ಮದಿಯಿಂದ ಇದ್ದಾರೆ. ನಮ್ಮ ಈ ಸಭೆಯು ಇಂದ್ರಾದಿ ದಿಕ್ಪಾಲಕರ ಸಭೆಗಳಿಗೆ ಸಮಾನವಾಗಿ ಒಪ್ಪುತ್ತಿದೆ. ಇಷ್ಟು ಐಶ್ವರ್ಯಸಮೃದ್ಧಿಯಿದ್ದರೂ ನನ್ನ ಮನಸ್ಸಿಗೆ ಸಮಾಧಾನವಿಲ್ಲದೆ ಒಂದು ಕೊರತೆಯು ಬಾಧಿಸುತ್ತಿದೆ.

ಭೀಮ. —ಅಣ್ಣಯ್ಯಾ, ಅಂತಹ ಕೊರತೆಯಾವುದು? ನಮ್ಮಂತಹ ವೀರರಾದ ಸಹೋದರರೂ, ಧೀರರಾದ ಸೇನಾಪತಿಗಳೂ, ಪ್ರಾಜ್ಞರಾದ ಮಂತ್ರಿಗಳೂ, ಇರುವಲ್ಲಿ ಯಾವಕೊರತೆ ಇದ್ದರೂ ಸುಲಭವಾಗಿ ಪರಿಹರಿಸಲಾರವೆ? ನಿಮ್ಮ ಮನೋವ್ಯಥೆಯ ಕಾರಣವನ್ನು ದಯಮಾಡಿ ತಿಳಿಸಬೇಕೆಂದು ಬೇಡುತ್ತೇನೆ.

ಯುಧಿ.—ತಮ್ಮಾ ಕೇಳು, ಸಭಿಕರೂ ಕೇಳಿರಿ, ದೇವರ್ಷಿಯಾದ ನಾರದರು ಇಲ್ಲಿಗೆ ದಯಮಾಡಿಸಿದ್ದು ನಿಮ್ಮೆಲ್ಲರಿಗೂ ತಿಳಿಯುವುದಷ್ಟೆ? ಆತನು ಲೋಕಪಾಲಕರ ಸಭೆಗಳನ್ನೆಲ್ಲಾ ವರ್ಣಿಸಿದನು. ಮತ್ತು ಯಮನ ಸಭೆಯಲ್ಲಿನ್ದ ನಮ್ಮ ತಂದೆ ಪಾಂಡುರಾಯನು ಹೇಳಿ ಕಳುಹಿದ ಒಂದು ಮಾತನ್ನು ನನಗೆ ತಿಳಿಸಿದನು. ಅಂದಿನಿಂದ ನನ್ನ ಮನಸ್ಸು ಕಳವಳಗೊಂಡಿದೆ.

ಭೀಮ.—ಆರ್ಯನೇ, ಅಪ್ಪಾಜಿಯವರು ಏನು ಹೇಳಿ ಕಳುಹಿರುವರು?

ಯುಧಿ.—ತಮ್ಮಾ, ಕೇಳು, ನಮ್ಮ ಪೂರ್ವಿಕರಾದ ಶಂತನುವೇ ಮೊದಲಾದ ಸಮಸ್ತ ರಾಜರೂ ಯಮನ ಸಭೆಯಲ್ಲಿಯೇ ಇರುವರಂತೆ! ರಾಜರ್ಷಿಯಾದ ಹರಿಶ್ಚಂದ್ರನೊಬ್ಬನು ಮಾತ್ರ ಇಂದ್ರಸಭೆಯಲ್ಲಿ ಆತನಿಗೆ ಸಮಾನವಾದ ಪೀಠದಲ್ಲಿ ಕುಳಿತಿರುವನಂತೆ! ನಮ್ಮ ತಂದೆಯೂ ಆ ಹರಿಶ್ಚಂದ್ರನಂತೆ ಇಂದ್ರಲೋಕವನ್ನು ಸೇರಬೇಕೆಂಬ ಅಪೇಕ್ಷೆ ಇರುವುದೆಂತಲೂ, ಮಕ್ಕಳಾದ ನಾವು ರಾಜಸೂಯ ಯಾಗವನ್ನು ಮಾಡಿದರೆ ಆತನಿಗೆ ಇಂದ್ರಲೋಕದ ಪದವಿ ಲಭಿಸುವುದೆಂತಲೂ ಹೇಳಿ ಕಳುಹಿರುವನು.

ಭೀಮ.—(ಔತ್ಸುಕ್ಯದಿಂದ) ಇಷ್ಟೇತಾನೆ? ಇದಕ್ಕೆ ಏಕೆ ಚಿಂತಿಸಬೇಕು? ನಮ್ಮ ತಂದೆಯು ಇತರರಾಜರಂತೆ ಯಮನ ಸಭೆಯಲ್ಲಿದ್ದರೂ ಹರಿಶ್ಚಂದ್ರನೊಬ್ಬನು ಮಾತ್ರ ಇಂದ್ರಸಭೆಯನ್ನು ಪಡೆದುದು ರಾಜಸೂಯಯಾಗದ ಫಲದಿಂದಲೇ ಆಗಿದ್ದರೆ ಈ ಭೂಲೋಕದ ಸಮಸ್ತ ರಾಜರನ್ನೂ ಗೆದ್ದು ಆ ಯಾಗವಮಾಡಲಿಕ್ಕೆ ತಕ್ಕ ಸಂದರ್ಭ ಸಿಕ್ಕಿದುದು ನನಗೆ ಬಹು ಸಂತೋಷಕರವಾಗಿದೆ. ಈ ಮೂಲಕವಾದರೂ ತಂದೆಯವರ ಇಷ್ಟಾರ್ಥವನ್ನು ನೆರವೇರಿಸದಿದ್ದರೆ ನಮ್ಮಂ

ತಹ ಮಕ್ಕಳಿದ್ದೇನುಫಲ? ಅಗತ್ಯವಾಗಿ ಮಾಡೋಣ. ನೀನು ಸಂಶಯಗೊಳ್ಳದೆ ಅಪ್ಪಣೆಕೊಡು. ರಾಜರನ್ನುಗೆದ್ದು ಬೇಕಾದಷ್ಟು ದ್ರವ್ಯವನ್ನು ತಂದು ಕೊಡುವೆವು.

ಯುಧಿ.—ತಮ್ಮಾ, ನಿಮ್ಮಂತವರ ಸಹಾಯವಿರುವಾಗ ನನಗೆ ಅಸಾಧ್ಯವಾದ ಕಾರ್ಯವು ಯಾವುದೂ ಇಲ್ಲವೆಂದು ಬಲ್ಲೆನು. ಆದರೂ ನಮ್ಮ ಪ್ರಾಣಬಂಧುವಾದ ಶ್ರೀಕೃಷ್ಣನ ಮತದಲ್ಲಿ ಇದರ ತೂಕವನ್ನು ತೂಗಿ ನೋಡಿದಹೊರತು ನಾನು ಯಾವುದಕ್ಕೂ ಪ್ರಯತ್ನಿಸಲಾರೆನು. ಆತನನ್ನು ಕರೆಯಿಸಿಕೊಂಡು ಯೋಚಿಸೋಣ.

ಇದು ಆಗಬಹುದೆಂದು ಸಭೆಯವರೆಲ್ಲರೂ ಒಪ್ಪಿದರು. ಕೂಡಲೇ ರಾಜನು ಶ್ರೀಕೃಷ್ಣನನ್ನು ಕರೆತರಲು ತನ್ನ ರಥವನ್ನು ಕೊಟ್ಟು ಇಂದ್ರಸೇನನೆಂಬ ಆಪ್ತಸಾರಥಿಯನ್ನು ದ್ವಾರಕೆಗೆ ಕಳುಹಿದನು. ಅವನು ಜಾಗ್ರತೆಯಲ್ಲಿ ಆ ಪಟ್ಟಣಕ್ಕೆ ಹೋಗಿ ಸೇರಿ, ಶ್ರೀಕೃಷ್ಣನಿಗೆ ಯುಧಿಷ್ಠಿರನ ಪ್ರಾರ್ಥನೆಯನ್ನು ತಿಳಿಸಿದನು. ಆ ಸ್ವಾಮಿಯು ಅಕ್ರೂರ ಮೊದಲಾದ ತನ್ನ ಮಂತ್ರಿಗಳನ್ನು ಕರೆಯಿಸಿ "ನಮ್ಮ ಭಾವನವರು ರಾಜಸೂಯ ಯಾಗವನ್ನು ಮಾಡಲು ಉದ್ದೇಶಿಸಿರುವರು. ಶಿಶುಪಾಲ, ಜರಾಸಂಧಾದಿ ದುಷ್ಟರಾಜರನ್ನು ನಿಗ್ರಹಿಸಲಿಕ್ಕೆ ಈಗ ಒಳ್ಳೆಯ ಅವಕಾಶ ದೊರೆತಿದೆ. ಇದರಿಂದ ನಮ್ಮ ಮನೋರಥ ಸಿದ್ಧಿಯಾಗುವುದು. ನಾನು ಅಲ್ಲಿಗೆ ಹೋಗಿ ನೋಡಿಕೊಂಡು ಬರುವೆನು" ಎಂದು ಹೇಳಿ, ನಗರ ರಕ್ಷಣೆಗೆ ತಕ್ಕ ಏರ್ಪಾಡುಗಳನ್ನು ಮಾಡಿ, ಆ ಸಾರಥಿಯು ತಂದ ರಥದಲ್ಲಿಯೇ ಕುಳಿತು ಇಂದ್ರಪ್ರಸ್ಥಕ್ಕೆ ಬಂದು ಸೇರಿದನು. ಪಾಂಡವರು ಶ್ರೀಕೃಷ್ಣನನ್ನು ಅತ್ಯಾದರದಿಂದ ಅರಮನೆಗೆ ಕರೆದುಕೊಂಡುಹೋಗಿ ಸತ್ಕರಿಸಿದರು. ಊಟ ಉಪಚಾರಗಳಾದಬಳಿಕ ಶ್ರೀಕೃಷ್ಣನು ಮಂತ್ರಾಲೋಚ

ನೆಯ ಮನೆಯಲ್ಲಿ ತಮ್ಮಂದಿರಸಂಗಡ ಕುಳಿತಿದ್ದ ಯುಧಿಷ್ಠಿರನೊಂದಿಗೆ ಏಕಾಂತದಲ್ಲಿ ಇಂತೆಂದನು.

ಶ್ರೀಕೃಷ್ಣ,— ಎಲೈರಾಯನೇ, ನೀನು ಯಾವ ಕಾರ್ಯಾರ್ಥವಾಗಿ ನನ್ನನ್ನು ಕರೆಯಿಸಿದೆ? ಸಹೋದರರಾದ ನಿಮ್ಮಲ್ಲಿ ಭೇದಬುದ್ಧಿ ಯಾವುದೂ ಇಲ್ಲವಷ್ಟೆ? ನಿನಗೆ ಅಸಾಧ್ಯವಾದ ಕೆಲಸವೇನಾದರೂ ಉಂಟೆ? ರಾಕ್ಷಸರು ಯಾರಾದರೂ ಕಲಹಕ್ಕೆ ಬಂದಿರುವರೇ? ಕೌರವರು ಕಪಟತಂತ್ರಗಳನ್ನೇನಾದರೂ ಮಾಡುತ್ತಿರುವರೆ? ಮತ್ತೇನಾದರೂ ವಿಶೇಷವಿದ್ದರೆ ಹೇಳು.

ಯುಧಿ.—ಸ್ವಾಮಿಯೆ, ತಮ್ಮ ಪಾದಕಮಲಗಳೇ ನನ್ನ ತಲೆಗೆ ಶಿರಸ್ತ್ರಾಣವಾಗಿರುವುದರಿಂದ ನನಗೆ ಯಾರಭಯವೂ ಇರುವುದಿಲ್ಲ. ನನ್ನ ತಮ್ಮಂದಿರು ನನ್ನಲ್ಲಿ ವಿಧೇಯರಾಗಿಯೇ ಇರುವರು. ರಾಕ್ಷಸರ ಕಲಹವಾಗಲಿ, ಕೌರವರ ಭಯವಾಗಲಿ ನನಗೆ ಇಲ್ಲ. ಈಚೆಗೆ ಒಂದುವಿಶೇಷವಾದ ಸುದ್ದಿ ತಿಳಿಯಿತು. ಮೊನ್ನೆ ನಾರದಮಹರ್ಷಿಗಳು ಇಲ್ಲಿಗೆ ದಯಮಾಡಿಸಿದ್ದರು. ಅವರು ನಮ್ಮ ತಂದೆಯಾದ ಪಾಂಡುರಾಯನಿಗೆ ಸ್ವರ್ಗದಲ್ಲಿ ಇಂದ್ರನಿಗೆ ಸಮಾನವಾದ ಸ್ಥಳವು ಸಿಕ್ಕಲಿಲ್ಲವೆಂತಲೂ, ಹರಿಶ್ಚಂದ್ರರಾಜನು ರಾಜಸೂಯ ಯಾಗಮಾಡಿದುದರಿಂದ ಅಂತಹ ಪದವಿಯನ್ನು ಪಡೆದಿರುವನೆಂತಲೂ ಹೇಳಿದುದಲ್ಲದೆ, ನಾನು ಈ ಮಹಾ ಯಾಗವನ್ನುಮಾಡಿ, ನಮ್ಮ ತಂದೆಯ ಕೋರಿಕೆಯನ್ನು ನೆರವೇರಿಸಬೇಕೆಂದು ಆ ಪಾಂಡುರಾಯನೇ ಹೇಳಿಕಳುಹಿದನೆಂದು ತಿಳಿಸಿದರು. ನಾನು ನಮ್ಮ ತಂದೆಯ ಹೀನಸ್ಥಿತಿಯನ್ನು ಪರಿಹರಿಸಿ ಆತನ ಕೋರಿಕೆಯನ್ನು ನೆರವೇರಿಸಬೇಕೆಂಬ ಉತ್ಸುಕತೆಯಿಂದ ಲೋಕೇಶ್ವರನಾದ ನಿನ್ನ ಅನುಮತಿ ಪಡೆಯದೆಯೇ ಈ ಯಾಗ ಮಾಡುವೆನೆಂದು ಒಪ್ಪಿಕೊಂಡೆನು. ಇದು ನನ್ನ

ತಪ್ಪು. ನಾನು ಮಾಡಿರುವ ಈ ಪ್ರತಿಜ್ಞೆಯನ್ನು ನೆರವೇರಿಸದೆ ಬಿಟ್ಟರೆ ಸಂಕಲ್ಪಹಾನಿಯ ದೋಷ ಬರುವುದು. ಲೋಕದಲ್ಲೆಲ್ಲಾ ಹಾಸ್ಯಕ್ಕೆ ಗುರಿಯಾಗುವೆನು. ಮಹಾ ಕ್ರತುವನ್ನು ಮಾಡಬೇಕಾದರೆ ಈ ಲೋಕದ ಸಮಸ್ತರಾಜರನ್ನೂ ಗೆದ್ದು ಅವರಿಂದ ಕಾಣಿಕೆಗಳನ್ನು ಪಡೆಯಬೇಕು. ಏನು ಮಾಡಲಿಕ್ಕೂ ನನಗೆ ತೋರದೆ ಇದೆ. ಈ ಚಿಂತಾಸಮುದ್ರದಿಂದ ನನ್ನನ್ನು ದಾಟಿಸು. ಸಂಸಾರಸಾಗರವನ್ನೇ ದಾಟಿಸುವೆನೆಂದು ಬಿರುದುಪಡೆದ ನಿನಗೆ ಇದೊಂದು ಮಹಾತ್ಕಾರ್ಯವೆ?

ಶ್ರೀ ಕೃ.—(ಪರಿಹಾಸ್ಯದಿಂದ ನಕ್ಕು) ಅಯ್ಯಾ ರಾಜನೇ, ನಾರದನು ಒಳ್ಳೆ ಬಲೆಯಲ್ಲಿ ನಿನ್ನನ್ನು ಸಿಕ್ಕಿಸಿಬಿಟ್ಟಂತೆ ಕಾಣುತ್ತದೆ. ಈ ಪ್ರಪಂಚದಲ್ಲಿ ಎಂತೆಂತಹ ರಾಜರು ಇರುವರೆಂದು ಬಲ್ಲೆಯಾ? ಈಯಾಗವೆಂಬುದು ಮಕ್ಕಳಾಟದ ಕೆಲಸವಲ್ಲ. ಸಪ್ತದ್ವೀಪಗಳಲ್ಲಿಯ ದೊರೆಗಳನ್ನೆಲ್ಲ ಜಯಿಸಿ, ಈ ಕಾಲದಲ್ಲಿ ಆ ಮಹಾ ಯಜ್ಞವನ್ನುಮಾಡತಕ್ಕವರು ಯಾರು? ಮೊದಲೇ ಕೌರವರು ನಿಮ್ಮ ಶ್ರೇಯಸ್ಸನ್ನು ಸೈರಿಸದೆ ಹೊಟ್ಟೇಕಿಚ್ಚು ಪಡುತ್ತಿರುವರು. ಅವರಲ್ಲಿ ಕರ್ಣ, ಶಕುನಿ, ಸೈಂಧವ ಇವರು ಸಾಮಾನ್ಯರೇ? ಇದಲ್ಲದೆ ದುರುಳನಾಗಿದ್ದ ಕಂಸನ ಪರಿವಾರದ ದುಷ್ಟರು ಎಷ್ಟೋಮಂದಿ ಯುದ್ಧಕ್ಕೆ ಕಾಲುಕೆರೆಯುತ್ತಿರುವರು. ಮತ್ತು ಮಗಧ ದೇಶದ ರಾಜನಾದ ಜರಾಸಂಧನು ಅಸಮಾನಬಲನು. ಕಾಲಯವನ, ದಂತವಕ್ರ, ಶಿಶುಪಾಲ, ಪೌಂಡ್ರಕ ಮುರಾಸುರ, ನರಕಾಸುರ, ಮೊದಲಾದವರ ಸಾಹಸವನ್ನು ನೀನು ಕೇಳಿಲ್ಲವೆ? ಈ ದುಷ್ಟರಲ್ಲಿ ಕೆಲವರನ್ನು ನಾನು ಮೊದಲೇ ಕೊಂದು ಹಾಕಿದೆನು. ಜರಾಸಂಧನು ಬಹು ಬಲಶಾಲಿ, ಅವನ ಅಳಿಯನಾದ ಕಂಸನನ್ನು ನಾನು ಸಂಹರಿಸಿದಮೇಲೆ ಆ ಕಂಸನ ಹೆಂಡತಿಯರು ಹೋಗಿ ತಮ್ಮ ತಂದೆಯಾದ ಆ ಮಾಗಧನಲ್ಲಿ ದೂರು ಹೇಳಿ

ದರು. ಆವನು ನಮ್ಮ ಮಥುರಾಪುರಿಯ ಮೇಲೆ ದಂಡೆತ್ತಿ ಬಂದನು. ಅವನನ್ನು ಹಲವುಬಾರಿ ಓಡಿಸಿದರೂ ಬಿಡದೆ ಮೇಲೆಮೇಲೆ ಬಂದು ನಮ್ಮ ಪಟ್ಟಣವನ್ನು ಮುತ್ತುತ್ತಾ ಇದ್ದುದರಿಂದ ಪದೇಪದೇ ಈ ತೊಂದರೆ ಇರಬಾರದೆಂದು ನಾವು ಸಮುದ್ರಮಧ್ಯದಲ್ಲಿ ದ್ವಾರಕೆ ಯೆಂಬ ಪಟ್ಟಣವನ್ನು ಕಟ್ಟಿಕೊಂಡು ಅಲ್ಲಿ ಸುಖವಾಗಿದ್ದೇವೆ.

ಇದಲ್ಲದೆ ಆ ಜರಾಸಂಧನು ನೂರುಮಂದಿ ರಾಜಕುಮಾರರ ತಲೆಗಳನ್ನು ಬಲಿಕೊಟ್ಟು ಪರಮೇಶ್ವರನ ಅನುಗ್ರಹವನ್ನು ಪಡೆಯ ಬೇಕೆಂದು ಸಂಕಲ್ಪಿಸಿ ಇದುವರೆಗೆ ತೊಂಭತ್ತುಮಂದಿ ರಾಜರನ್ನು ಹಿಡಿದು ಸೆರೆಯಲ್ಲಿ ಹಾಕಿರುವನು. ನಮ್ಮ ಕಾರ್ಯವು ನಿರ್ವಿಘ್ನವಾಗಿ ಜರುಗಬೇಕಾದರೆ ಅವನನ್ನು ಕೊಂದು, ಸೆರೆಯಲ್ಲಿರುವ ರಾಜರನ್ನು ಬಿಡಿಸಬೇಕು. ಅದಲ್ಲದೆ ಇನ್ನೂ ಕೆಲವರು ದುಷ್ಟರಿರು ವರು. ಹೇಳುವೆನು ಕೇಳು. ಶಿಶುಪಾಲನು, ಭಗದತ್ತನು, ಬಾಹ್ಲಿ ಕನು, ನರಕನು, ವೃದ್ಧಕ್ಷತ್ರನು, ಚೀನನು, ಜೋಟಕನು, ದಕ್ಷಿಣ ದೇಶದಲ್ಲಿ ಚೋಳ ಪಾಂಡ್ಯಾದಿಗಳು, ಹೀಗೆ ಪರಾಕ್ರಮಿಗಳಾದ ರಾಜರು ಬಹುಮಂದಿ ಹೆಚ್ಚಿರುವರು. ಇವರಲ್ಲಿ ಜರಾಸಂಧ, ಶಿಶು ಪಾಲರೆಂಬವರಿಬ್ಬರೇ ಅತಿಬಲಿಷ್ಠರಾಗಿ ನಮ್ಮ ಯಾಗಕಾರ್ಯಕ್ಕೆ ವಿಘ್ನತರುವವರು. ಅವರಲ್ಲಿಯೂ ಜರಾಸಂಧನನ್ನು ಗೆಲ್ಲುವುದು ಮಾತ್ರ ನಮ್ಮಿಂದ ಸಾಧ್ಯವಾಗತಕ್ಕದಲ್ಲ. ನಾನು ಕಂಸನನ್ನು ಕೊಂದೆನು. ಹಂಸಡಿಬಿಕರನ್ನು ವಧಿಸಿದೆನು. ಮುರ ನರಕಾದಿ ರಾಕ್ಷ ಸರನ್ನೆಲ್ಲಾ ಹೆಸರಡಗಿಸಿದೆನು. ಆ ಜರಾಸಂಧನಮೇಲೆ ಮಾತ್ರ ನನ್ನ ಕೈನಡೆಯಲಿಲ್ಲ. ಇವನನ್ನು ಜಯಿಸಿ ಹೇಗೆ ಯಜ್ಞ ನಡಿಸುವೆಯೋ ನೋಡಪ್ಪಾ.

ಯುಧಿ,—(ಚಿಂತೆಯಿಂದ) ಜೀಯಾ, ಅಷ್ಟುಮಂದಿ ದುರು

ಳರು ನಮ್ಮ ಯಜ್ಞಕ್ಕೆ ವಿಘ್ನಕಾರಿಗಳಾಗಿರುವಾಗ ನಾನುಮಾಡತಕ್ಕುದೇನು? ಆ ರಾಜಸೂಯಕ್ಕೆ ಒಂದು ನಮಸ್ಕಾರ ಸ್ವಾಮಿ. ಅಷ್ಟುಜನ ದುಷ್ಟರನ್ನು ನಿಗ್ರಹಿಸಿದ ಪರಬ್ರಹ್ಮ ಸ್ವರೂಪನಾದ ನೀನು ಜರಾಸಂಧನೊಬ್ಬನನ್ನು ಮಾತ್ರ ಜಯಿಸಲಾರೆನೆಂಬ ಮಾತು ನನಗೆ ಆಶ್ಚರ್ಯವಾಗಿ ತೋರುತ್ತದೆ.

ಭೀಮ.—(ವೀರಾವೇಶದಿಂದ) ಶ್ರೀಕೃಷ್ಣಮೂರ್ತೀ? ಅಣ್ಣಯ್ಯನು ಯಾಗದೀಕ್ಷೆ ವಹಿಸಬೇಕೆಂದುಮಾಡಿರುವ ಸಂಕಲ್ಪಕ್ಕೆ ಅಡ್ಡಿಯುಂಟೆ? ನಿನ್ನ ದಯೆ ಒಂದಿದ್ದರೆ ಸಾಕು. ನನ್ನ ತೋಳುಬಲವನ್ನು ತೋರಿಸುವೆನು. ನೋಡು. ಜರಾಸಂಧನು ಬಹು ಬಲಿಷ್ಠನೆಂದು ಹೊಗಳುವೆ. ನನಗೆ ವೀಳಯವನ್ನು ಕೊಡು. ಅವನ ಕೊಬ್ಬನ್ನಡಗಿಸಿ ಯಮಪುರಿಗೆ ಕಳುಹದೆ ಬಿಡೆನು. ಅಷ್ಟುಮಾತ್ರವೇ ಅಲ್ಲ. ಸಮಸ್ತ ದ್ವೀಪಗಳಿಗೂ ಹೋಗಿ ಅಲ್ಲಲ್ಲಿಯ ರಾಜರ ನೆತ್ತಿಯಮೇಲೆ ಕಪ್ಪವನ್ನು ಹೊರಿಸಿ ತರಿಸುವೆನು. ನೀವು ಆ ದುರುಳನಾದ ಜರಾಸಂಧನಿಗೆ ಸ್ವಲ್ಪವೂ ಹೆದರಬೇಡಿರಿ. ಯಾಗ ಪ್ರಯತ್ನಗಳನ್ನೆಲ್ಲಾ ಮಾಡಿ, ಋಷಿಗಳನ್ನು ಕರೆಯಿಸಿರಿ.

ಅರ್ಜುನ.—(ನಗುತ್ತಾ) ಸ್ವಾಮೀ, ಜರಾಸಂಧಾದಿ ವೀರರನ್ನು ಯುದ್ಧದಲ್ಲಿ ಜಯಿಸುವುದು ಕಷ್ಟವೆಂದು ಹೇಳುತ್ತೀಯೆ! ನನ್ನೆದುರಿಗೆ ಇಂತಹ ಮಾತನಾಡಬಹುದೆ? ಈ ಗಾಂಡೀವವೇತಕ್ಕೆ? ನನಗೆ ಈ ಅಕ್ಷಯತೂಣೀರಗಳೇಕೆ? ಈ ದಿವ್ಯಾಸ್ತ್ರಗಳಿಂದ ಫಲವೇನು? ಈ ಕಪಿಧ್ವಜವು ಸಾಮಾನ್ಯವಾದುದೆ? ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ರಕ್ಷಿಸದೆ ಹೋದರೆ ನನ್ನ ಅಸ್ತ್ರವಿದ್ಯಾಭ್ಯಾಸದಿಂದ ಫಲವೇನು? ಹುಲುರಾಜರಿಗೆ ಹೆದರಿ, ಮಹಾಯಜ್ಞದ ಸಂಕಲ್ಪವನ್ನು ಬಿಡುವಿರಾ! ದೇವಾ. ನಿನ್ನ ಅನುಗ್ರಹವು ಪೂರ್ಣವಾಗಿರು

ವಾಗ ಈ ಯಜ್ಞಕಾರ್ಯವು ನೆರವೇರುವುದೊಂದು ದೊಡ್ಡದಲ್ಲ. ಶ್ರೀಕೃಷ್ಣಮೂರ್ತೀ ! ಏಕೆ ಆಲಸ್ಯಮಾಡುವೆ? ಬೇಗ ಅನುಜ್ಞೆ ಕೊಡು (ಯುಧಿಷ್ಠಿರನ ಕಡೆ ತಿರುಗಿ) ಅಣ್ಣಾ ? ಸದ್ಬ್ರಾಹ್ಮಣರಿಗೆಲ್ಲಾ ಆ ಮಂತ್ರಣವನ್ನು ಕಳುಹಿಸು. ಯಾಗದ ವಿವರಣೆಯನ್ನು ಸಮಸ್ತ ದೇಶಗಳಲ್ಲಿಯೂ ಪ್ರಚುರಗೊಳಿಸು. ನಮ್ಮ ಬಂಧುಜನರಿಗೆಲ್ಲಾ ಲಗ್ನಪತ್ರಿಕೆಗಳನ್ನು ಬರೆಯಿಸಿ ಕಳುಹು. ಸಾಧುಗಳಾಗಿ ನಮ್ಮ ಕೈವಶರಾಗಿರುವ ರಾಜರನ್ನು ಆದರಿಸಿ, ನಮ್ಮನ್ನು ಎದುರಿಸಿದ ರಾಜರ ತಲೆ ಚೆಂಡಾಡುವೆನು.

ಶ್ರೀ ಕೃಷ್ಣ.—(ಸಂತೋಷದಿಂದ) ರಾಜನೇ, ಈ ಭೀಮಾರ್ಜುನರು ಒಣಹರಟೆಯವರಲ್ಲ. ಕಾರ್ಯಶೂರರೆಂದು ಬಲ್ಲೆನು. ಕ್ರತುವು ಸಾಂಗವಾಗಿ ನೆರವೇರುವುದರಲ್ಲಿ ಅಡ್ಡಿಯಿಲ್ಲ. ಕ್ಷತ್ರಕುಲಕ್ಕೆ ವಿಹಿತವಾದ ವಿನಯ, ವಿಕ್ರಮ, ವಿದ್ಯೆ, ರಾಜನೀತಿ ಇವು ನಿಮ್ಮಲ್ಲಿ ಪೂರ್ಣವಾಗಿರುವುದರಿಂದ ನಿಮ್ಮನ್ನು ಎದುರಿಸತಕ್ಕವರೇ ಇಲ್ಲ. ಎಲೈ ಯುಧಿಷ್ಠಿರನೇ, ಚಿಂತೆಯನ್ನು ಬಿಡು. ನಿನ್ನ ಸಂಕಲ್ಪವು ನೆರವೇರುವುದು. ಈ ಭೀಮಾರ್ಜುನರನ್ನು ನನ್ನ ವಶಕ್ಕೆ ಕೊಡು. ಶತ್ರುರಾಜಸ್ತ್ರೀಯರ ಸೀಮಂತಮಣಿಗಳನ್ನು ಒಂದು ನಿಮಿಷದಲ್ಲಿ ತರಿಸಿ ನಿನ್ನ ಮುಂದೆ ಇರಿಸುವೆನು. ನಿರ್ವಿಘ್ನವಾಗಿ ಯಜ್ಞವು ನೆರವೇರುವುದೆಂದು ನಂಬು.

ಯುಧಿ.—ಸ್ವಾಮಿ, ಭೀಮಾರ್ಜುನರಿಬ್ಬರೂ ನನ್ನ ಕಣ್ಣುಗಳು. ನೀನೇ ನನ್ನ ಮನಸ್ಸು. ನಿಮ್ಮ ಪಾದವನ್ನೇ ದೃಢವಾಗಿ ನಂಬಿರುವ ನನಗೆ ಅಸಾಧ್ಯವು ಯಾವುದು ? ಭಕ್ತವತ್ಸಲನಾದ ನಿನ್ನ ಕೃಪೆ ಪೂರ್ಣವಾಗಿರುವಾಗ ಈ ಯಾಗ ನೆರವೇರುವುದು ಏನು ದೊಡ್ಡದು?

ಶ್ರೀಕೃಷ್ಣ.—ರಾಯನೇ, ಈ ಭೀಮಾರ್ಜುನರ ಶಕ್ತಿಸಾಹಸಗಳನ್ನೂ ನಿನ್ನ ಭಕ್ತಿಯನ್ನೂ ಬಲ್ಲೆನು. ಆದರೂ ಈ ರಾಜಸೂಯಯಾಗಕ್ಕೆ ಎಲ್ಲರೂ ಶತ್ರುಗಳಾಗಿ ಪರಿಣಮಿಸುವರು. ಮರುತ್ತನು, ಕಾರ್ತವೀರ್ಯನು, ಮುಂತಾದವರು ಕೂಡ ಈ ಯಾಗವನ್ನು ಮಾಡಲಾರದೆ ಬಿಟ್ಟುಬಿಟ್ಟರು. ಕಾಲಸ್ಥಿತಿ ವಿಷಮವಾಗಿದೆ. ಮಾಗಧನೊಬ್ಬನನ್ನು ಜಯಿಸಿದರೆ ನಿನ್ನಕಾರ್ಯವು ನೆರವೇರಿತೆಂದು ತಿಳಿ.

ಯುಧಿ.—ವಾಸುದೇವನೇ, ಮೊದಲಿನಿಂದಲೂ ಆ ಜರಾಸಂಧನನ್ನು ಬಹಳವಾಗಿ ಹೊಗಳುತ್ತಿರುವೆ. ಅವನು ಯಾರು ? ಅವನಿಗೆ ಅಷ್ಟುಶಕ್ತಿ ಹೇಗೆಬಂತು ? ಅದು ಸಹಜವೋ, ವರದಬಲವೋ ಮಹಾಶೂರರಾದ ರಾಜರಿಗಿಂತ ಅವನು ಹೆಚ್ಚಿದವನೆಂಬುದು ಹೇಗೆ ? ದಯಮಾಡಿ ಆ ವೃತ್ತಾಂತವನ್ನು ಅಪ್ಪಣೆಕೊಡಿಸಬೇಕೆಂದು ಪ್ರಾರ್ಥಿಸುತ್ತೇನೆ.

ಶ್ರೀಕೃಷ್ಣ.—ಯುಧಿಷ್ಠಿರನೇ, ಆ ಮಾಗಧನ ವೃತ್ತಾಂತವನ್ನು ಕೇಳು. ಆ ಮಗಧ ರಾಜ್ಯಕ್ಕೆ ಗಿರಿವ್ರಜವೆಂಬುದು ರಾಜಧಾನಿ. ಅದರ ಸುತ್ತಲೂ ಐದು ಬೆಟ್ಟಗಳಿರುವುದರಿಂದ ಇತರರು ಆ ಪಟ್ಟಣಕ್ಕೆ ಪ್ರವೇಶಿಸುವುದು ಕಷ್ಟವು. ಬೃಹದ್ರಥನೆಂಬುವನು ಅಲ್ಲಿಗೆ ಅರಸಾಗಿದ್ದನು. ಅವನಿಗೆ ಇಬ್ಬರು ಹೆಂಡತಿಯರಿದ್ದರೂ ಪುತ್ರಸಂಪತ್ತಿಯು ಲಭಿಸಲಿಲ್ಲ. ಈ ಮನೋವ್ಯಥೆಯಿಂದ ಆ ರಾಜನು ವೈರಾಗ್ಯವನ್ನು ಹೊಂದಿ, ತಪಸ್ಸಿನಿಂದ ಕಾಲವನ್ನು ಕಳೆಯಬೇಕೆಂದು ಹೊರಟನು. ಮಾರ್ಗದಲ್ಲಿ ಚಂಡಕೌಶಿಕನೆಂಬ ಮಹರ್ಷಿಯು ಎದುರಾಗಿ ಬಂದು, ಆತನ ವೈರಾಗ್ಯದ ಕಾರಣವನ್ನು ತಿಳಿದನು. ಬಳಿಕ ಆ ಮುನಿಯು ಕರುಣೆಯಿಂದ ಧ್ಯಾನಮಾಡಲು ಎದುರಿಗೆ ಇರುವ ಮಾವಿನ ಮರದಿಂದ ಮಧುರವಾದ ಒಂದು ಫಲವು ಕೆಳಕ್ಕೆ

ಬಿತ್ತು. ಮಹರ್ಷಿಯು ಆ ಹಣ್ಣನ್ನು ತೆಗೆದು ರಾಜನ ಕೈಗೆ ಕೊಟ್ಟು "ಇದನ್ನು ನಿನ್ನ ಪಟ್ಟದರಾಣಿಗೆ ಕೊಡು. ಪುತ್ರನುದಿಸುವನು," ಎಂದು ಅನುಗ್ರಹಿಸಿ ಹೊರಟುಹೋದನು. ಬೃಹದ್ರಥನು ಆ ಹಣ್ಣನ್ನು ತೆಗೆದುಕೊಂಡು ಅರಮನೆಗೆ ಬಂದನು. ಪತ್ನಿಯರಿಬ್ಬರಲ್ಲಿಯೂ ಆತನಿಗೆ ಸಮಾನಪ್ರೀತಿ ಇದ್ದುದರಿಂದ ಒಬ್ಬಳಿಗೆಕೊಟ್ಟರೆ ಇನ್ನೊಬ್ಬಳಿಗೆ ಅಸಮಾಧಾನವಾಗುವುದೆಂದು ತಿಳಿದು, ಆ ಹಣ್ಣನ್ನು ಎರಡುಭಾಗಮಾಡಿ ಪತ್ನಿಯರಿಬ್ಬರಿಗೂ ಕೊಟ್ಟನು. ಅದನ್ನವರು ಭಕ್ತಿಯಿಂದ ತೆಗೆದುಕೊಂಡು, ಸಂತಾನಕಾಂಕ್ಷೆಯಿಂದ ಭಕ್ಷಿಸಿದರು, ಒಡನೆ ಅವರು ಗರ್ಭವತಿಯರಾಗಿ ನವಮಾಸಗಳು ಹೊತ್ತಬಳಿಕ ಒಂದುದಿನ ಸಮಾನವಾದ ಸೀಳುಗಳುಳ್ಳ ಒಂದೊಂದು ಅವಯವದ ಅರ್ಧಭಾಗದ ಶಿಶುಗಳನ್ನು ಹೆತ್ತರು. ಅವರು "ಅಯ್ಯೋ! ಇದೇನು ಕರ್ಮಶೇಷವೊ, ಈ ಅರ್ಧಾರ್ಧ ಶರೀರದ ಮಾಂಸದಿಂದ ಫಲವೇನು? ಎಂದು ಚಿಂತಿಸಿ, ಆ ಮಧ್ಯರಾತ್ರಿಯಲ್ಲಿ ಊರಹೊರಗೆ ಅವುಗಳನ್ನು ಬಿಸುಡಿಸಿದರು. ಆವೇಳೆಗೆ ಸರಿಯಾಗಿ ಜರೆಯೆಂಬ ರಾಕ್ಷಸಸ್ತ್ರೀಯು ಮಾಂಸವನ್ನು ಹುಡುಕಿಕೊಂಡು ಅದೇಮಾರ್ಗದಲ್ಲಿ ಬರುತ್ತಿದ್ದಳು. ಅವಳು ಊರಹೊರಗೆ ಬಿದ್ದಿದ್ದ ಆ ಸೀಳುಗಳನ್ನುನೋಡಿ, "ಏನಿದು! ಯಾರೋ ಮೂರ್ಖರು ಇದನ್ನು ತಿನ್ನಬೇಕೆಂದು, ಶಿಶುವನ್ನು ಸೀಳಿ, ತಿನ್ನದೆ ಹಾಗೆಯೇ ಬಿಟ್ಟು ಹೋಗಿರುವರು! ಅವರೆಂತಹ ಹೆಡ್ಡರು!" ಎಂದುಕೊಂಡು ವಿನೋದಕ್ಕಾಗಿ ಆವೆರಡು ಹೋಳುಗಳನ್ನು ಕೂಡಿಸಿದಳು. ಒಡನೆ ಆ ಸೀಳುಗಳು ಒಂದಾಗಿ ಮಗುವಿಗೆ ಜೀವವುಂಟಾಯಿತು. ಅದು ಆ ನಿಶಿರಾತ್ರಿಯಲ್ಲಿ ಬೆಟ್ಟಗಳೆಲ್ಲವೂ ಬಿರಿಯುವಂತೆ ಗಟ್ಟಿಯಾಗಿ ಕಿರಚಿಕೊಂಡಿತು. ಪುರಜನರು ಆವೇಳೆಯಲ್ಲಿ ಈ ಗದ್ದಲವೇನೆಂದು ಗಾಬರಿಯಾಗಿ, ಕೈದೀವಿಗೆಗಳನ್ನು ಹತ್ತಿಸಿಕೊಂಡು ಅಲ್ಲಿಗೆ

ಓಡಿಬಂದರು. ಆ ಜರೆಯೆಂಬ ರಾಕ್ಷಸಿಯು ತನ್ನ ಕೈಕೊಟ್ಟಲ್ಲಿಯೇ ಮಗುವನ್ನು ತೂಗುತ್ತಾ ಇದ್ದಳು. ಜನರೆಲ್ಲರೂ ಹೆದರಿಕೆಯಿಂದ ದೂರದಲ್ಲಿಯೇ ನಿಂತುನೋಡಿ ಆಶ್ಚರ್ಯಪಡುತ್ತಿದ್ದರು. ಆಗ ಆ ರಾಕ್ಷಸಿಯು ಆ ಜನರನ್ನು ಕಂಡು "ನೀವು ಹೆದರಬೇಡಿರಿ. ಇವನು ನನ್ನ ಮಗನು. ನಿಮ್ಮರಾಜನು ಬಂದರೆ ಅವನಿಗೆ ಕೊಡುವೆನು. ಹೋಗಿ ಹೇಳಿರಿ." ಎಂದಳು. ಅರಸನಿಗೆ ಈ ಸುದ್ದಿ ತಿಳಿಯಿತು. ಕೂಡಲೇ ಬಹು ಆತುರದಿಂದ ಬಂದು ನೋಡಿದನು. ಆ ರಾಕ್ಷಸಿಯು ಬೃಹದ್ರಥನನ್ನು ಕುರಿತು "ಇಗೋ, ಈ ಮಗುವು ನಿನ್ನದು. ಇದರ ಸೀಳುಗಳನ್ನು ನಾನು ಕೂಡಿಸಿದ್ದರಿಂದ ಇದಕ್ಕೆ ಪ್ರಾಣಬಂತು. ಆದುದರಿಂದ ಇದನ್ನು ನನ್ನ ಹೆಸರಿನಿಂದ ಜರಾಸಂಧನೆಂದು ಕರೆ. ಇವನು ಲೋಕದಲ್ಲಿ ಬಹು ಪರಾಕ್ರಮಿಯೆನಿಸಿ ವಿಖ್ಯಾತನಾಗುವನು." ಎಂದು ಹೇಳಿ ಆ ಮಗುವನ್ನೊಪ್ಪಿಸಿ ಹೊರಟುಹೋದಳು. ಆ ಜರಾಸಂಧನು ಬೆಳೆದು ಪ್ರಬಲನಾಗಿ, ಯಾರನ್ನೂ ಗಣಿಸದೆ ಮೆರೆಯುತ್ತಿರುವನು. ಅವನು ತನ್ನ ಇಷ್ಟದೈವವಾದ ಈಶ್ವರನಿಗೆ ಬಲಿಕೊಡಲಿಕ್ಕಾಗಿಯೇ ಹಲವು ರಾಜರನ್ನು ಹಿಡಿದು ಸೆರೆ ಹಾಕಿರುವನು. ಅವನೊಬ್ಬನನ್ನು ಗೆದ್ದರೆ ಎಲ್ಲಾ ರಾಜರೂ ಅಂಜಿ ನಿನಗೆ ಕಾಣಿಕೆ ಕಪ್ಪಗಳನ್ನೊಪ್ಪಿಸುವರು. ನೀನು ಅಧೈರ್ಯಪಡದೆ ಭೀಮಾರ್ಜುನರನ್ನು ನನ್ನಸಂಗಡ ಕಳುಹಿಸು.

ಯುಧಿ.—ಸ್ವಾಮಿ, ಸರ್ವಜ್ಞನಾದ ನಿನಗೆ ತಿಳಿಯದೆ ಇರುವ ವಿಷಯವೇನಿದೆ? ನನ್ನ ಮಾನಾಪಮಾನಗಳು ನಿನ್ನವೇ ಅಲ್ಲವೆ! ಈ ರಾಜಸೂಯ ಯಾಗವನ್ನು ನಡಿಸುವ ಭಾರವೂ ನಿನ್ನದೇ. ನಿನ್ನ ಪ್ರೇರಣೆಯಿಂದ ನಾನುಮಾಡುವ ಸಮಸ್ತ ಕೃತ್ಯಗಳನ್ನೂ ನಡಿಸಿ, ಅದರ ಫಲವನ್ನೆಲ್ಲಾ ನಿನಗೆ ಒಪ್ಪಿಸಿದ್ದೇನೆ.

ಹೀಗೆ ಹೇಳಿ ಯುಧಿಷ್ಠಿರನು ಶ್ರೀಕೃಷ್ಣನಿಗೆ ನಮಸ್ಕರಿಸಿದನು. ಆತನು ರಾಜನನ್ನು ತೆಗೆದೆತ್ತಿ ಮನ್ನಿಸಿ "ಎಲೈ ರಾಯನೇ, ನೀನು ಚಿಂತಿಸಬೇಡ. ರಾಜಸೂಯಕ್ರತುವಿಗೆ ಲಗ್ನವನ್ನು ನಿಶ್ಚಯಿಸಿ, ಎಲ್ಲರಿಗೂ ಆಮಂತ್ರಣಗಳನ್ನು ಕೊಟ್ಟು ಕರೆಯಿಸಿಕೋ. ಸೇನಾಪತಿಯನ್ನು ಚತುರಂಗಬಲದೊಡನೆ ನಮ್ಮ ಸಂಗಡ ಕಳುಹಿಸು. ಯಾಗಸಂಭಾರಗಳನ್ನೆಲ್ಲಾ ಸಿದ್ಧಪಡಿಸಿಕೋ" ಎಂದು ಹೇಳಲು ಆತನ ಅಪ್ಪಣೆಯಂತೆ ಎಲ್ಲವೂ ಏರ್ಪಾಡಾದುವು.

ಬಳಿಕ ಶ್ರೀಕೃಷ್ಣನು ಭೀಮಾರ್ಜುನರನ್ನು ಕರೆದುಕೊಂಡು ಮಗಧರಾಜ್ಯಕ್ಕೆ ಹೊರಟನು. ಈ ಮೂವರೂ ಸ್ನಾತಕ ವ್ರತವನ್ನು ಧರಿಸಿದ ಮುನಿಗಳಂತೆ ವೇಷಹಾಕಿಕೊಂಡು, ಪ್ರಯಾಣಮಾಡುತ್ತಾ ದಾರಿಯಲ್ಲಿ ಸಿಕ್ಕಿದ ಗಂಗಾನದಿಯನ್ನು ದಾಟಿ, ಪೂರ್ವದಿಕ್ಕಿಗೆ ನಡೆದರು. ಗಂಗಾತೀರದ ಭೂಮಿಯು ಸರ್ವೋತ್ಕೃಷ್ಟವಾದುದು. ಅತ್ಯುತ್ತಮವಾದ ಸಸ್ಯಗಳಿಂದ ಸಮೃದ್ಧವಾದ ಭೂಮಿಯು ನೇತ್ರಾನಂದಕರವಾಗಿತ್ತು. ಎಲ್ಲಿ ನೋಡಿದರೂ ದ್ರಾಕ್ಷಿಯವನಗಳೂ, ಫಲಭರಿತಗಳಾದ ಮಾವು. ಹಲಸು, ದಾಳಿಂಬ, ನೇರಳೆ, ಮುಂತಾದ ವೃಕ್ಷಗಳೂ, ರಮಣೀಯವಾಗಿದ್ದುವು. ಬಗೆಬಗೆಯ ಬತ್ತದ ಗದ್ದೆಗಳೂ, ಕಬ್ಬಿನ ತೋಟಗಳೂ ಅಂದವಾಗಿ ಕಾಣುತ್ತಿದ್ದುವು. ಕೃಷ್ಣಾದಿಗಳೊಡನೆ ಹೊರಟ ಚತುರಂಗಬಲವು ಮಾರ್ಗದಲ್ಲಿ ಸಿಕ್ಕಿದ ಪ್ರಜೆಗಳಿಗೆ ಯಾವ ತೊಂದರೆಯನ್ನು ಕೊಡದೆ ತೆರಳುತ್ತಿತ್ತು. ಪರರಾಜ್ಯವೆಂದು ವೈರವಿಡದೆ ಅವರು ತಮಗೆ ಬೇಕಾದ ವಸ್ತುಗಳಿಗೆ ತಕ್ಕ ಬೆಲೆಕೊಟ್ಟು ಕೊಳ್ಳುತ್ತಿದ್ದರು. ಆ ಸೈನ್ಯವು ಯಾವ ಪೈರು ಪಚ್ಚೆಗಳಿಗೂ ಗಾಸಿಮಾಡದೆ ಪ್ರಯಾಣಮಾಡಿ ಮಗಧದೇಶದ ರಾಜಧಾನಿಯಾದ ಗಿರಿವ್ರಜದ ಹೊರಗಡೆ ಬೀಡುಬಿಟ್ಟಿತು. ಶ್ರೀಕೃಷ್ಣ

ಭೀಮಾರ್ಜುನರು ಬ್ರಾಹ್ಮಣವೇಷದಿಂದ ರಾತ್ರಿಯಕಾಲದಲ್ಲಿ ಸರಿಯಾದ ಬಾಗಿಲಲ್ಲಿ ಹೋಗದೆ ಆ ಗಿರಿಯ ಶಿಖರವನ್ನು ಹತ್ತಿ, ಪಟ್ಟಣದೊಳಕ್ಕೆ ಪ್ರವೇಶಮಾಡಿದರು.

ಆ ಪಟ್ಟಣದಲ್ಲಿ ಪೂರ್ವಕಾಲದಲ್ಲಿ ಆಳುತ್ತಿದ್ದ ರಾಜನೊಬ್ಬನು ಮಾನುಷಾದನೆಂಬ ವೃಷಭವನ್ನು ಕೊಂದು, ಅದರ ಚರ್ಮದಿಂದ ಮೂರು ಭೇರಿಗಳನ್ನು ಮಾಡಿಸಿದನು. ಅವುಗಳನ್ನು ಪಟ್ಟಣದ ಸುತ್ತಲಿರುವ ಬೆಟ್ಟಗಳಲ್ಲಿ ಒಂದಾದ ಚೈತ್ಯಗಿರಿಯೆಂಬ ಬೆಟ್ಟದಮೇಲೆ ಇಟ್ಟಿದ್ದರು. ಪರದೇಶದವರು ಯಾರಾದರೂ ಆ ರಾಜಧಾನಿಯಲ್ಲಿ ಪ್ರವೇಶಿಸಿದರೆ ಕೂಡಲೇ ಆ ಭೇರಿಗಳು ತಮ್ಮಷ್ಟಕ್ಕೆ ತಾವೇ ಮೊಳಗುತ್ತಿದ್ದುವು. ಹೊಸಬರಾದ ಈ ಮೂವರೂ ಬಂದುದರಿಂದ ಆ ಭೇರಿಗಳು ತಮ್ಮ ನಿಯಮದಂತೆ ಮಹಾಧ್ವನಿಮಾಡಿದುವು. ಶ್ರೀಕೃಷ್ಣನು ಅದರ ಕಾರಣವನ್ನು ಹೇಳಲು ಭೀಮಸೇನನು ಕೂಡಲೇ ಆ ಭೇರಿಗಳನ್ನು ಹೊಡೆದು ಕೆಡಹಿದನು. ಆ ಬಳಿಕ ಅವರು ಪುರಪ್ರವೇಶಮಾಡಿ, ಅಂಗಡಿಗಳಲ್ಲಿ ಗಂಧಮಾಲ್ಯಾದಿಗಳನ್ನು ಕೊಂಡು ಅವುಗಳಿಂದ ಅಲಂಕೃತರಾಗಿ, ರಾಜದ್ವಾರವನ್ನು ಬಿಟ್ಟು ಬೇರೆ ಮಾರ್ಗದಿಂದ ಜರಾಸಂಧನ ಅರಮನೆಯೊಳಕ್ಕೆ ಹೋದರು. ಅಪೂರ್ವ ವೇಷಧಾರಿಗಳಾದ ಈ ಬ್ರಾಹ್ಮಣರನ್ನು ನೋಡಿದಕೂಡಲೇ ಜರಾಸಂಧನು ಎದ್ದು ಬಂದು, ಅವರನ್ನು ಒಳಕ್ಕೆ ಕರೆದುಕೊಂಡುಹೋಗಿ ಭಕ್ತಿಯಿಂದ ಆದರಿಸಿ ಕುಶಲ ಪ್ರಶ್ನೆಗಳನ್ನು ಮಾಡಿದನು. ಆಬಳಿಕ ಅರಸು ಆ ಕಪಟದ್ವಿಜರನ್ನು ನೋಡಿ, "ಸ್ವಾಮೀ, ನಿಮ್ಮದೇಶವು ಯಾವುದು? ನಿಮ್ಮ ಹೆಸರೇನು? ಯಾವಕಾರ್ಯಾರ್ಥವಾಗಿ ಬಂದಿರುವಿರಿ?" ಎಂದು ಕೇಳಲು ಅವರು ಯಾವ ಉತ್ತರವನ್ನೂ ಕೊಡಲಿಲ್ಲ. ಇದರಿಂದ ಆ ಜರಾಸಂಧನು ಸಂಶಯಗ್ರಸ್ತನಾಗಿ ತನ್ನ ಮನಸ್ಸಿನಲ್ಲಿ

"ಇವರುಯಾರೋ ತಿಳಿಯದು. ಬ್ರಾಹ್ಮಣರಾಗಿದ್ದರೆ ನನ್ನ ಸತ್ಕಾರವನ್ನು ಪರಿಗ್ರಹಿಸಿ ನನ್ನ ಪ್ರಶ್ನೆಗಳಿಗೆ ಉತ್ತರಕೊಡದೆ ಇರುವರೆ? ಇವರ ಮುಖದಲ್ಲಿ ಕ್ಷಾತ್ರತೇಜಸ್ಸು ಹೊಳೆಯುತ್ತಿದೆ, ಭುಜಪ್ರದೇಶಗಳು ಬಿಲ್ಲಿನ ಹೆದೆಯ ಪೆಟ್ಟಿನಿಂದ ಜಡ್ಡುಗಟ್ಟಿವೆ. ಇವರು ಧನುರ್ವಿದ್ಯಾನಿಪುಣರೆಂದು ಕಾಣುತ್ತಿದೆ. ಇವರು ಯಾರಾಗಿರಬಹುದು? ದೇವತ್ರಯರಾದ ಇಂದ್ರ ಯಮಾನಿಲರೋ? ಅಥವಾ ಸೂರ್ಯಚಂದ್ರಾಗ್ನಿಗಳೋ? ಈ ಲೋಕದ ದೊರೆಗಳಲ್ಲಿ ಯಾರೂ ನನ್ನ ಬಳಿಗೆ ಇಷ್ಟು ದಿಟ್ಟತನದಿಂದ ಬಂದು ನಿಲ್ಲತಕ್ಕವರೇ ಇಲ್ಲ. ಈಗ ಲೋಕದಲ್ಲಿ ಪ್ರಸಿದ್ಧರಾದ ರಾಜರಲ್ಲಿ ಹಸ್ತಿನಾಪುರದ ಅರಸರೇ ಶಕ್ತರೆನಿಸಿಕೊಂಡಿರುವರು. ಅವರಲ್ಲಿ ಪಾಂಡವರು ಪರಮ ಸಾಧುಗಳು. ಸಮುದ್ರತೀರದ ರಾಜರ ಶಕ್ತಿಯೆಲ್ಲಾ ನಾನು ನೋಡಿಬಿಟ್ಟಿದೇ ಹೊರತು ಹೊಸದೇನೂ ಇಲ್ಲ. ಯಾದವರುಮಾತ್ರ ಪೂರ್ವದಿಂದಲೂ ನಮ್ಮಲ್ಲಿ ಶತ್ರುತ್ವವನ್ನು ಬೆಳಸಿದವರು. ಅವರಲ್ಲಿ ದನಕರುಗಳನ್ನು ಕಾಯುತ್ತಿದ್ದ ಶ್ರೀಕೃಷ್ಣನ ಮಾತೇನು? ಅವನು ನಮ್ಮ ಭಯದಿಂದಲೇ ಓಡಿಹೋಗಿ ಸಮುದ್ರ ಮಧ್ಯದಲ್ಲಿ ಊರು ಕಟ್ಟಿಕೊಂಡಿರುವನು. ಇನ್ನು ನಮ್ಮೊಂದಿಗೆ ಸೆಣಸುವ ವೀರರು ಯಾರಿರುವರು? ಆದರೂ ವಿಚಾರಿಸಿ ತಿಳಿಯೋಣ," ಹೀಗೆ ಯೋಚಿಸಿ, ಅವರನ್ನು ಕುರಿತು ಇಂತೆಂದನು.

ಜರಾ.—ಅಯ್ಯಾ! ನೀವು ನಿಜವಾದ ಬ್ರಾಹ್ಮಣರಾಗಿ ತೋರುವುದಿಲ್ಲ. ವೇಷಾಂತರವನ್ನು ಧರಿಸಿದ ವೀರರೆಂಬ ಸಂಶಯವು ತೋರುತ್ತಿದೆ. ಏಕೆಂದರೆ, ನೀವು ಬಹಿರಂಗವಾದ ರಾಜದ್ವಾರದಲ್ಲಿ ಬಾರದೆ ದಿಡ್ಡಿಬಾಗಿಲಿನಿಂದ ಅರಮನೆಯನ್ನು ಹೊಕ್ಕಿರಿ, ನನ್ನ ಸತ್ಕಾರಗಳನ್ನು ಪರಿಗ್ರಹಿಸದೆಯೂ, ನನ್ನ ಪ್ರಶ್ನೆಗಳಿಗೆ ಉತ್ತರ ಕೊಡದೆಯೂ ಇರು

ವಿರಿ. ನೀವು ಈ ಕಪಟವೇಷದಿಂದ ಇಲ್ಲಿಗೆ ಬಂದುದಕ್ಕೆ ಕಾರಣ ವೇನು? ಹೆದರದೆ ನಿಜವಾಗಿ ಹೇಳಿರಿ.

ಶ್ರೀಕೃಷ್ಣ.—ಎಲೈ ರಾಜನೇ. ಸ್ನಾತಕವೇಷವು ವೈಶ್ಯ ಶೂದ್ರರಿಗೆ ನಿಷಿದ್ಧವೇ ಹೊರತು ಬ್ರಹ್ಮಕ್ಷತ್ರಿಯರಿಗೆ ಪಾತಕವೆನಿ ಸುವುದಿಲ್ಲವು. ನಾವು ಕ್ಷತ್ರಿಯ ಕುಲೋತ್ಪನ್ನರು. ನಮಗೆ ಸ್ವಲ್ಪ ವೂ ಹೆದರಿಕೆ ಇಲ್ಲ. ಶತ್ರುವಿನ ಮನೆಯನ್ನು ಅದ್ವಾರದಲ್ಲಿಯೇ ಪ್ರವೇಶಿಸಬೇಕೆಂಬ ನೀತಿಯುಂಟು. ಅದರಂತೆಯೇ ನಾವು ಬಂದಿ ರುವೆವು.

ಜರಾ.—(ನಗುತ್ತಾ) ಅಯ್ಯಾ! ಏನು ಹೀಗೆಹೇಳುವೆ? ಇದು ಶತ್ರುವಿನ ಮನೆಯೇ? ನಾನು ನಿಮ್ಮ ಶತ್ರುವೇ? ಅದು ಹೇಗೆ? ಈ ವಿಕಾರ ವೇಷವನ್ನು ಧರಿಸಿ ಬರಬೇಕೆಂದು ನಿಮಗೆ ಹೇಳಿಕೊಟ್ಟ ಉಪಾಧ್ಯಾಯರು ಯಾರು?

ಶ್ರೀಕೃಷ್ಣ.—ಎಲೈಮತ್ತನೇ, ನೀನು ಹಲವು ರಾಜರನ್ನು ಗೆದ್ದು ಸೆರೆಯಲ್ಲಿ ಹಾಕಿರುವೆ. ಸತ್ಕುಲಪ್ರಸೂತನಾದ ರಾಜನು ಸ್ವ ಧರ್ಮವನ್ನು ಎಂದಿಗೂ ಬಿಡಬಾರದು. ನೀನು ನಿರಪರಾಧಿಗಳನ್ನು ಶಿಕ್ಷಿಸುವುದು ಸರಿಯೆ? ಆ ರಾಜರು ಯಾವತಪ್ಪು ಮಾಡಿದರು? ಸಾಧುಸಜ್ಜನರನ್ನು ಹಿಂಸಿಸುವುದು ನಿನಗೆ ಧರ್ಮವೇ? ನರಮೇಧ ವನ್ನುಮಾಡುವ ಮನುಷ್ಯಾಧಮನುಂಟೆ? ತಿರ್ಯಗ್ಜಂತುಗಳುಕೂಡ ತಮ್ಮಜಾತಿಯ ಪ್ರಾಣಿಗಳನ್ನು ಕೊಲ್ಲುವುದಿಲ್ಲವಲ್ಲ? ರುದ್ರಪೂಜಾ ವ್ಯಾಜದಿಂದ ನೀನು ನರಬಲಿಕೊಡುವುದು ಯಾವಧರ್ಮ? ಹೀಗೆ ರಾಜ್ಯಮದದಿಂದಮೈಮರೆತು ಪೂಜ್ಯರಾದವರನ್ನು ಕೊಂದು, ದುರ್ಮಾ ರ್ಗನೆಂದು ಹೆಸರುಪಡೆದೆ. ಆ ರಾಜರ ಸೆರೆಬಿಡಿಸಿ, ನಿನಗೆ ಬುದ್ಧಿಕಲಿಸ ಲಿಕ್ಕೆಬಂದ ಉಪಾಧ್ಯಾಯರೇ ನಾವೆಂದು ತಿಳಿ.

ಜರಾ.—(ತಲೆದೂಗುತ್ತಾ) ಎಲಾ ನೀನು ಯಾರು? ಆ ಸೆರೆಯಲ್ಲಿ ಬಿದ್ದಿರುವ ರಾಜರಿಗೆ ಮಗನೋ, ಮೊಮ್ಮಗನೋ, ಬಂಧುವೋ, ಬಳಗವೋ, ಭೃತ್ಯನೋ, ನಿನಗೆ ಅವರನ್ನು ಬಿಡಿಸಬೇಕೆಂಬ ಇಚ್ಛೆ ಇದ್ದರೆ ಈಗ ಏನುಮಾಡಬೇಕೆಂದು ಬಂದಿರುವೆ?

ಶ್ರೀಕೃಷ್ಣ.—ಎಲಾ ಮಾಗಧನೇ, ನಾವು ಈ ಲೋಕದಲ್ಲಿ ಅಧರ್ಮಪ್ರವರ್ತಕರನ್ನೆಲ್ಲಾ ಸಂಹಾರಮಾಡಿ, ಧರ್ಮವನ್ನು ನೆಲೆಗೊಳಿಸುವೆವು. ಶಿಕ್ಷಾರಕ್ಷಣೆಗಳೇ ನಮ್ಮ ಕರ್ತವ್ಯವಾಗಿವೆ. ಮೊದಲು ನೀನು ಸೆರೆಹಾಕಿರುವ ರಾಜರನ್ನು ಬಿಡುಗಡೆಮಾಡಿ ಜೀರ್ಣಮಾತನಾಡು.

ಜರಾ.—ಓಹೋ! ನೀವು ಜಗದುದ್ಧಾರಕರೋ! ದುಷ್ಟಶಿಕ್ಷಣವೇ ನಿಮ್ಮ ದೀಕ್ಷಾವ್ರತವೋ! ಹಾಗಾದರೆ ನಾವೇ ಕಪಟಾಚಾರ್ಯರೆಂದು ಭಾವಿಸಿರುವಿರೋ! ಸಾಕುಸಾಕು. ಮಾತಿನಲ್ಲಿ ಒಳ್ಳೆಯ ಜಾಣರಾಗಿರುವಿರಿ. ನಿಮ್ಮ ಉದ್ದೇಶವು ತಿಳಿಯಿತು. ನೀವು ಯಾರೆಂಬುದನ್ನು ಹೇಳಿರಿ. ನೋಡೋಣ.

ಶ್ರೀಕೃಷ್ಣ—ಅಯ್ಯಾ, ನಮ್ಮ ಹೆಸರು ತಿಳಿಯಬೇಕೆ? ಇದರಿಂದ ನಿನಗೆ ಲಾಭವೇನು? ಆದರೂ ಹೇಳುವೆನು ಕೇಳು. ನಾನು ದನುಜವೈರಿಯಾದ ವಾಸುದೇವನು. ಈತನು ಶತ್ರುರಾಜರ ತಲೆಯನ್ನು ಚಂಡಾಡುವ ಅಪ್ರತಿಮಲ್ಲನಾದ ಭೀಮಸೇನನು. ಇವನು ಸಾಕ್ಷಾತ್ಪರಮೇಶ್ವರನಿಗೆ ಸಮವಾದ ಭುಜಬಲವುಳ್ಳ ಅರ್ಜುನನು. ಈಗ ತಿಳಿಯಿತೆ? ನಾವು ಧರಿಸಿರುವ ಈ ಬ್ರಾಹ್ಮಣವೇಷಕ್ಕೆ ತಕ್ಕಹಾಗೆ ನಮ್ಮಲ್ಲಿ ಯಾರಾದರೂ ಒಬ್ಬನಿಗೆ ದ್ವಂದ್ವಯುದ್ಧವನ್ನು ಕೊಡುವೆಯಾ?

ಹೀಗೆ ನಿರ್ಭೀತಿಯಿಂದ ಆಡಿದ ಮಾತನ್ನು ಕೇಳಿದ ಆ ಜರಾಸಂಧನಿಗೆ ಕೂಡಲೇ ಕಣ್ಣುಗಳು ಕೆಂಪುಹತ್ತಿದುವು. ನಗೆಯು ಉಕ್ಕಿ ಉಕ್ಕಿ ಬರುತ್ತಿದ್ದಿತು. ಮೈಯೆಲ್ಲಾ ರೋಮಾಂಚವೆದ್ದಿತು. ದೀರ್ಘ

ವಾದ ಉಛ್ವಾಸನಿಶ್ವಾಸಗಳಿಂದ ಕೋಪವು ಮಿತಿಮೀರಿತು. ಆದರೂ ತನ್ನಲ್ಲಿಯೇ ತಾನು ಸಮಾಧಾನತಂದುಕೊಂಡು, ಹತ್ತಿರ ಇದ್ದ ತನ್ನಕಡೆಯ ವೀರರನ್ನು ನೋಡಿ (ನಗುತ್ತಾ) ಇಂತೆಂದನು.

ಅಯ್ಯಾ, ಇವನು ಯಾರೆಂದು ಬಲ್ಲಿರಾ? ಇವನೂ ನಮ್ಮವನೇ! ನಮಗೆ ಹತ್ತಿರ ಬಂಧುವು. ನಮ್ಮ ಅಳಿಯನಾದ ಕಂಸನಿಗೆ ಇವನೂ ಅಳಿಯನು ದೇವಕಿಯಮಗನು. ಮಾವೆಯಲ್ಲಿ ನಮ್ಮ ಮೊಮ್ಮಗನೆನಿಸಿರುವನು. ಇವನು ಹಿಂದೆ ಎಂಭತ್ತುನಾಲ್ಕು ದುರ್ಗಗಳಲ್ಲಿ ನಮ್ಮೊಂದಿಗೆ ಕಾದಿಸೋತು ಓಡಿಹೋದವನೇ ಈ ವೀರನು! ತಾನು ಬಹು ಬಲಿಷ್ಠನೆಂದು ಕೊಚ್ಚಿಕೊಳ್ಳುತ್ತಿದ್ದಾನೆ. ಇವನ ಚಾತುರ್ಯವನ್ನು ನೀವು ಕೇಳಿರಲಾರಿರಿ. ಹೇಳುವೆನು ಕೇಳಿ. ಕೊಳಲೂದುವುದರಲ್ಲಿ ಇವನಿಗೆ ಸಮಾನರಿಲ್ಲ. ಕಲಸಿದ ಬುತ್ತಿಯನ್ನು ಕಾಡಿನಲ್ಲಿ ನಿತ್ಯವೂ ಉಣ್ಣುತ್ತಿದ್ದವನು. ಗೊಲ್ಲಹುಡುಗರ ಸಂಗಡ ಆಟವಾಡಿಕೊಂಡು ದನಕರುಗಳನ್ನು ಮೇಯಿಸುತ್ತಾ ಕಾಲಹಾಕುತ್ತಿದ್ದ ಜಾಣನು. ಇವನು ವಿದ್ಯಾಪ್ರವೀಣನಂತೆ! ಇನ್ನೂ ಇವನ ಸಾಹಸಕಾರ್ಯಗಳನ್ನು ಕೇಳುವಿರಾ!

ಒಂದು ಹೋರಿ, ಒಬ್ಬ ಹೆಂಗಸು, ಬಂಡಿ, ಹಕ್ಕಿ, ಗಾಳಿ, ಕುದುರೆ, ಹಾವು, ಕತ್ತೆ, ಇಂತಹ ವೀರರು ಇವನಕೈಗೆ ಸಿಕ್ಕಿ ಪ್ರಾಣಗಳನ್ನು ಕಳೆದುಕೊಂಡರಂತೆ! ಕಂಸನ ಪರಿವಾರದೊಂದಿಗೆ ಅವನನ್ನೂ ಕೊಂದುಹಾಕಿದೆನೆಂಬ ಗರ್ವವು ಇವನ ನೆತ್ತಿಗೆ ಹತ್ತಿಹೋಗಿದೆ.

ಹೀಗೆ ಹೇಳಿ, ಶ್ರೀಕೃಷ್ಣನಕಡೆಗೆ ತಿರುಗಿ, ಇಂತೆಂದನು.

ಜರಾ.—ಎಲಾಗೊಲ್ಲಗೌಡಾ, ಇದು ನಿನ್ನ ಮಾವನಾದ ಕಂಸನಮನೆಯೆಂದು ತಿಳಿದೆಯಾ? ಅಥವಾ ಪೌಂಡ್ರಕನ ಯುದ್ಧ

ರಂಗವೋ, ಹಂಸಡಿಬಿಕರ ಕಾಳಗವೇನು ? ಛೀ, ಛೀ, ನಿನಗೆ ಇಷ್ಟು ಗರ್ವಹುಟ್ಟಿತೆ? ಮೊಲವು ತನ್ನಶಕ್ತಿ ತಿಳಿಯದೆ ಹುಲಿಯಬಳಿಗೆ ಅಭ್ಯಾಗತನಾಗಿ ಬಂದಂತೆ ಆಯಿತು. ಮರಿಯಾನೆಯು ಸಿಂಹದ ಸಂಗಡ ಅಜ್ಞಾನದಿಂದ ಕಲಹವನ್ನು ಬಯಸುವಹಾಗೆ ನಿನ್ನ ಶಕ್ತಿಯರಿಯದೆ ಬಂದು ನನ್ನಲ್ಲಿಯುದ್ಧವನ್ನು ಬಯಸುವೆಯಾ ? ಎಲಾ! ಇದರಿಂದ ನೀನು ಕೆಡುವುದೇಸಿದ್ಧ. ನಿನ್ನ ಜತೆಯಲ್ಲಿ ಇವರನ್ನುಕೊಲ್ಲಿಸಲಿಕ್ಕೆ ಏಕೆ ಕರೆದುತಂದೆ? ಹುಚ್ಚಾ; ಆಸೆಯಿದ್ದರೆ ಈಗಲಾದರೂ ಬಂದದಾರಿ ಹಿಡಿದುಕೊಂಡು ಹೋಗು.



ಶ್ರೀಕೃಷ್ಣ.—ಎಲಾ ಜರಾಸಂಧಾ! ನಿನಗೇನು ಪಿತ್ತಭ್ರಮಣೆಯಾಗಿದೆಯೋ ? ಮದ್ಯಪಾನಮಾಡಿದವನಂತೆಯೂ, ಬಂಗಿಯನ್ನು ಸೇದಿದವನಂತೆಯೂ, ಅಫೀಮನ್ನು ತಿಂದವನಹಾಗೆಯೂ ಹುಚ್ಚುಹುಚ್ಚಾಗಿ ಮಾತನಾಡುತ್ತಿರುವೆ. ನೀನು ವೀರನಾಗಿದ್ದರೆ ಎದ್ದು ಬಾ. ಕಾಳಗದಲ್ಲಿ ನಿನ್ನ ಕೈಗುಣವನ್ನು ತೋರು. ನಿನ್ನಮನೆಯಲ್ಲಿ ನಿನ್ನ ರಾಣಿವಾಸದ ಹೆಂಗಸರ ಎದುರಿಗೆ ಜಳ್ಳುಹರಟೆ ಆಡಿದರೆ ಫಲವೇನು ? ಯುದ್ಧದಲ್ಲಿ ನಿನ್ನ ಹಣೆಯಬರಹವನ್ನಳಿಸುವೆನು ನೋಡು.

ಜರಾ.—ಎಲಾ ಗೋವಳಿಗಾ ! ನೀನು ಅನ್ಯಾಯವಾಗಿ ಕೊಂದ ಕಂಸನಹೆಂಡಿರ ದುಃಖಾಗ್ನಿಯನ್ನು ನಂದಿಸುವುದಕ್ಕೆ ನಿನ್ನ ರಕ್ತವೇ ಜಲಧಾರೆಯಾಗಲಿ, ಕಾಲ ಯವನಾದಿ ದೈತ್ಯರನ್ನು ಗೆದ್ದೆನೆಂದು ಉಬ್ಬುವ ನಿನ್ನಕೊಬ್ಬನ್ನು ಈಗಲೇ ಮುರಿಯುವೆನು. (ಭೀಮಾರ್ಜುನರಕಡೆ ತಿರುಗಿ)

ಹುಡುಗರಿರಾ, ಈ ಗೋಪಾಲನಿಗಂತು ನಾಚಿಕೆಯೇ ಇಲ್ಲ. ರಾಜಕುಮಾರರಾದ ನೀವು ಸಾವನ್ನು ಬಯಸುವ ಈ ಮೂರ್ಖನ ಸಂಗಡ ಏಕೆ ಬಂದಿರಿ ? ಅನ್ಯಾಯವಾಗಿ ಸಾಯುವಿರಲ್ಲ ! ನಿಮ್ಮಲ್ಲಿ

ಬುದ್ಧಿಹೇಳುವ ಹಿರಿಯರು ಯಾರೂ ಇರಲಿಲ್ಲವೆ? ಛೀ, ಛೀ, ನೀವು ಇಲ್ಲಿಗೆ ಬಂದುದು ದೊಡ್ಡತಪ್ಪಾಯಿತು.

ಭೀಮ.—ಅಯ್ಯಾ, ಸಾಕು ನಿಲ್ಲಿಸು. ಈ ಪೊಳ್ಳುಹರಟೆಗಳಿಂದ ಏತಕ್ಕೆ ಹೊತ್ತುಕಳೆಯುತ್ತೀಯೆ? ಜಾಣರು ಈ ಮಾತನ್ನು ಮೆಚ್ಚಲಾರರು. ನೀನು ನಿಜವಾದ ವೀರನಾಗಿದ್ದರೆ ಎದ್ದುಬಾ. ಯುದ್ಧದಲ್ಲಿ ನಿನ್ನ ಶಕ್ತಿಯನ್ನು ತೋರಿಸು. ಜಗನ್ನಾಯಕನಾದ ಈ ನಮ್ಮ ಸ್ವಾಮಿಯನ್ನು ನಿಂದಿಸಿ ಮಾತನಾಡುವುದು ನಿನಗೆ ಶ್ರೇಯಸ್ಕರವಲ್ಲ. ಮುಚ್ಚುಬಾಯಿ.

ಜರಾ.—ಎಲಾ! ನೀವೂ ಒಳ್ಳೆಯ ಧೈರ್ಯಶಾಲಿಗಳೇ ಸರಿ. ಮುಂದೆ ಬರುವ ಸಾವನ್ನು ತಿಳಿಯದೆ ಕೆಟ್ಟುಹೋಗುವಿರಲ್ಲ! ಈ ಬಡಗೊಲ್ಲನ ಬೇಳುವೆಯ ಮಾತುಗಳಿಗೆ ಬೆರಗಾಗಿ, ನೀವು ಇಲ್ಲಿಗೆ ಬರಬಹುದೆ? ಸಮಬಲರಲ್ಲದ ನಿಮ್ಮ ಸಂಗಡ ಕಾದುವುದಕ್ಕೆ ನನಗೆ ನಾಚಿಕೆಯಾಗುವುದು. ವೀರನಾದ ಬಲರಾಮನು ನನ್ನೊಂದಿಗೆ ಯುದ್ಧಮಾಡಲು ಬಂದಿದ್ದರೆ ಚೆನ್ನಾಗಿತ್ತು. ಆದುದಾಯಿತು. ನಿಮ್ಮ ಸೈನ್ಯದವರು ಬಂದಿದ್ದರೆ ನಮ್ಮ ದಳದೊಂದಿಗೆ ಕಾದುತ್ತಿರಲಿ. ನೀವು ಮೂವರೂ ನನ್ನ ಮೇಲೆ ಯುದ್ಧಕ್ಕೆ ಬನ್ನಿರಿ. ನಿಮ್ಮಲ್ಲಿ ಆಯುಧಗಳಿಲ್ಲವೋ? ತರಿಸಿಕೊಡುವೆನು. ಕಾದಲಿಕ್ಕೆ ಸಿದ್ಧರಾಗಿರಿ.

ಶ್ರೀಕೃಷ್ಣ.—ಎಲಾ! ನಿನ್ನ ಸಂಗಡ ಕಾದಲಿಕ್ಕೆ ಬಲರಾಮನು ಬರಬೇಕಾಗಿತ್ತೆ! ಬಾಯಿಮುಚ್ಚು. ನಮ್ಮ ಮೂವರೊಂದಿಗೆ ನೀನು ಕಾದಬಲ್ಲೆಯಾ? ಏಕೆ ಸಣ್ಣಸಣ್ಣ ಮಾತುಗಳನ್ನಾಡುವೆ? ನೀನು ವೀರನೇ ಇರಬಹುದು. ನಮ್ಮೆಲ್ಲರನ್ನೂ ಜಯಿಸುವಮಾತು ಇರಲಿ. ಮೂವರಲ್ಲಿ ಯಾರಾದರೂ ಒಬ್ಬನನ್ನು ವರಿಸು.

ಜರಾ.—ಆಹಾ! ದ್ವಂದ್ವ ಈ ಯುದ್ಧವು ನಿಮಗೆ ಅತ್ಯಾವ

ಶ್ಯಕವಾಗಿದೆಯೊ ? ನಮ್ಮ ಖ್ಯಾತಿಗೆ ಇದು ಸರಿಯಾಗಿ ತೋರುವು ದಿಲ್ಲ. ಆದರೂ ಒಂದುಕೈ ನೋಡೋಣ. ಎಲಾ ಕೃಷ್ಣಾ! ಹಲವುಬಾರಿ ನಮಗೆ ಹೆದರಿ ಓಡಿಹೋಗಿ ನೀರಲ್ಲಿ ಹೊಕ್ಕೆ! ನಿನ್ನ ವಿಕ್ರಮವನ್ನು ನಾವು ಅರಿಯದವರಲ್ಲ. ಈ ಅರ್ಜುನನು ಇನ್ನೂ ಚಿಕ್ಕಹುಡುಗನು ನಮಗೆ ಸಮಜೋಡಿಯಲ್ಲ. ಈ ಭೀಮಸೇನನು ಸಮರ್ಥನೆಂದು ಜನರು ಹೇಳುತ್ತಿರುವರು. ಇವನೊಂದಿಗೆ ಕಾದಿ ನೋಡುವೆನು. ನಿಮ್ಮ ಬಯಕೆಯು ತಾನೇ ಏಕೆ ವ್ಯರ್ಥವಾಗ ಬೇಕು ? ಒಂದು ಆಟ ಆಡಿಯೇ ಬಿಡೋಣ.

ಹೀಗೆ ಹೇಳಿ ಗಂಧಪುಷ್ಪತಾಂಬೂಲಾದಿಗಳನ್ನು ತರಿಸಿ, ಅವರೆಲ್ಲರಿಗೂ ಕೊಟ್ಟು ತಾನೂ ಅಲಂಕರಿಸಿಕೊಂಡನು. ಭೀಮ ಸೇನನಿಗೆ ಒಳ್ಳೆಯ ಯುದ್ಧ ಸಿಕ್ಕಿತೆಂಬ ಸಂತೋಷವು ಉಕ್ಕಿತು. ಆಗ ಜರಾಸಂಧನು ಭೀಮನನ್ನು ನೋಡಿ, "ಅಯ್ಯಾ! ಯಾವ ಆಯುಧವಲ್ಲಿ ನಿನಗೆ ಇಷ್ಟ? ಕತ್ತಿಯೇ, ಕಠಾರಿಯೇ, ಗದೆಯೇ ಕೊಡಲಿಯೆ, ಬಾಣವೆ, ತೋಮರವೆ, ಕುಂತವೆ, ಮುಷ್ಟಿಯೆ, ಏತ, ರಿಂದ ಕಾದುವೆ ಹೇಳು?

ಭೀಮ.—ಅಯ್ಯಾ, ನಿನ್ನಮನಸ್ಸುಬಂದ ಆಯುಧವನ್ನು ತೆಗೆದುಕೊಳ್ಳಬಹುದು.

ಜರಾ.—ಭೀಮಾ! ಯಾವ ಆಯುಧವೂ ಬೇಡ. ನೀನು ಹತ್ತುಸಾವಿರ ಆನೆಗಳ ಬಲವುಳ್ಳವನೆಂದು ಕೇಳಿರುವೆನು. ಅದು ನಿಜವೋ ಸುಳ್ಳೋ ಈಗ ನೋಡೋಣ. ನಿಜವಾಗಿಯೂ ನೀನು ನನ್ನ ಸಮಬಲನಾಗಿದ್ದರೆ ಹತ್ತಾಹತ್ತಿಯಾಗಿ ಮಲ್ಲಯುದ್ಧವನ್ನೇ ಮಾಡೋಣ.

ಬಳಿಕ ಭೀಮ ಜರಾಸಂಧರು ಮಲ್ಲಯುದ್ಧಕ್ಕೆ ಸಿದ್ಧರಾದರು.

ಅರಮನೆಯ ಅಂಗಳವೇ ರಣಭೂಮಿಯಾಯಿತು. ಕೃಷ್ಣಾರ್ಜುನರೂ ಅಲ್ಲಿಗೆ ಬಂದಿದ್ದ ಬ್ರಾಹ್ಮಣರೂ ಪ್ರೇಕ್ಷಕರಾದರು. ಊರಹೊರಗೆ ಉಭಯಸೈನ್ಯಗಳಿಗೂ ಯುದ್ಧವು ಭಯಂಕರವಾಗಿ ನಡೆಯುತ್ತಿತ್ತು. ಕಾರ್ತೀಕ ಶುದ್ಧ ಪಾಡ್ಯದದಿನ ಆರಂಭಿಸಿದ ಯುದ್ಧವು ಹದಿಮೂರು ದಿನಗಳು ಅಹೋರಾತ್ರಗಳಲ್ಲಿಯೂ ಅವಿಚ್ಛಿನ್ನವಾಗಿ ನಡೆಯುತ್ತಿತ್ತು ವೀರಾಗ್ರಣಿಗಳಾದ ಭೀಮಜರಾಸಂಧರಿಬ್ಬರೂ ಸಿಡಿಲಿನಂತೆ ಗರ್ಜಿಸುತ್ತಾ, ಹುಬ್ಬುಗಳನ್ನು ಗಂಟಿಟ್ಟುಕೊಂಡು, ಭುಜವನ್ನಪ್ಪಳಿಸುತ್ತಾ, ದಂಡೆಯನ್ನೊತ್ತುತ್ತಾ, ನೀಲನಿಷಧಾದ್ರಿಗಳಂತೆ ಸಮಜೋಡಿಯಾಗಿ ದ್ವಂದ್ವಯುದ್ಧ ಮಾಡಿದರು. ಅವರು ಒಬ್ಬರಕೈಗೆ ಒಬ್ಬರು ಸಿಕ್ಕುತ್ತಿರಲಿಲ್ಲ. ಅವರ ಹಸ್ತಲಾಘವವು ಇತರರಿಗೆ ತಿಳಿಯುತ್ತಲೇ ಇರಲಿಲ್ಲ. ಹೆಜ್ಜೆಹಾಕುವುದೂ, ಮುಂಡಿಯೂರುವುದೂ, ಕೊರಳನ್ನು ಪಟ್ಟಾಗಿ ಹಿಡಿಯುವುದೂ, ತಿರುವುಮುರಿವುಗಳೂ ಬಹು ಚಮತ್ಕಾರವಾಗಿದ್ದುವು. ಅವರು ತಮ್ಮ ಮೈಗಳನ್ನು ಹಗುರವಾಗಿ ಮಾಡಿಕೊಂಡು, ಬೇರೆಬೇರೆ ವರಸೆಗಳಿಂದ ಎರಡಂಗುಲ, ನಾಲ್ಕಂಗುಲ, ಬಿಟ್ಟು ಬಂದು ಮರಳಿ ಹಿಡಿಯುತ್ತಾ ಬಂದರು. ಪರಸ್ಪರಜಯಾಭಿಲಾಷೆಯಿಂದ ಕೈಗಳನ್ನು ಹಿಡಿಯುವುದು, ಕಾಲು ಹಿಡಿಯುವುದು, ಕಂಕುಳಿಂದ ತಬ್ಬುವುದು, ಅರ್ಭಟಿಸುವುದು, ಒಬ್ಬರನ್ನೊಬ್ಬರು ಚಾತುರ್ಯದಿಂದ ಪಟ್ಟಾಗಿ ಹಿಡಿದುಕೊಂಡು ಕೂಡಲೇ ಬಿಟ್ಟು ಬಿಡುವುದು, ನೆಲದಮೇಲೆಕುಕ್ಕಿಅಗಸನ ಒಗೆತದಂತೆ ಒಗೆಯುವುದು, ಮುಂತಾದ ಚಮತ್ಕಾರ ಕೃತ್ಯಗಳು ನೋಟಕರಿಗೆ ಆಶ್ಚರ್ಯಕರವಾಗಿದ್ದುವು. ತಲೆಯಿಂದ ತಿವಿಯುವುದು, ಕಂಕುಳನ್ನು ಹಿಡಿಯುವುದು, ಕೊರಳು ಹಿಡಿಯುವುದು, ಎದೆಯನ್ನು ಗುದ್ದುವುದು, ನೆಲಕ್ಕೆ ಕೆಡಹುವುದು, ಪೂರ್ಣಕುಂಭವನ್ನು ಕುಕ್ಕುವಂತೆ ಕುಕ್ಕುವುದು,

ಅಂಗದಿಂದ ಅಂಗವನ್ನೂ ಭುಜದಿಂದ ಭುಜವನ್ನೂ, ಸುತ್ತಿಕೊಂಡು, ನೊಂಟಕ್ಕೂ ಪಕ್ಕೆಗಳಿಗೂ ಕೈಹಾಕಿ ಎಳೆಯುವುದು, ಕಣ್ಣುಗಳಲ್ಲಿ ಕೆಂಡವನ್ನು ಕಾರುತ್ತಾ, ಸಿಂಹದಂತೆ ಘೋರವಾಗಿ ಗರ್ಜಿಸುವುದು ಮುಂತಾದ ಅದ್ಭುತಕಾರ್ಯಗಳನ್ನು ನೋಡಿದವರೆಲ್ಲರೂ ಆಶ್ಚರ್ಯದಿಂದ ತಲೆದೂಗುತ್ತಿದ್ದರು.

ಆ ಮಲ್ಲರ ಮೈಯಲ್ಲಿ ಬೆವರು ಸುರಿಯುತ್ತಿತ್ತು. ಅದರ ಮೇಲೆ ಕೆಂಧೂಳಿ ಮುಚ್ಚಿಕೊಂಡಿತು. ಮೂಗಿನ ಹೊಳ್ಳೆಯಿಂದ ಬಿಸಿಬಿಸಿಯ ಉಸಿರು ಬರುತ್ತಿದ್ದುವು. ಬಲದಲ್ಲಿ ಅವರಿಬ್ಬರೂ ಕಡಿಮೆಯಾದವರಲ್ಲ. ಧೈರ್ಯದಲ್ಲಿಯೂ ಕುಂದಿಲ್ಲ. ಗರ್ವವೂ ಕೋಪವೂ ಹೆಚ್ಚುತ್ತಲೇ ಬಂದುವು. ಕೃಷ್ಣಾರ್ಜುನರು ಅದನ್ನು ನೋಡಿ "ಭಲಾ ಭೀಮಾ, ಶಹಬಾಸ್, ಹುರೇ, ಪರಬಲ ಭಯಂಕರನೆಂಬ ಹೆಸರು ನಿನಗೆ ಸಾರ್ಥಕವಾಯಿತು. ನೀನೇ ಜಗಜಟ್ಟಿ!" ಎಂದು ಹೊಗಳುತ್ತಿದ್ದರು. ಜರಾಸಂಧನ ಪರಿವಾರದವರು "ಶಹಬಾಸ್! ಮಾಗಧೇಂದ್ರಾ ನಿನ್ನ ಸಮಾನರಾದ ಶೂರರು ಈ ಜಗದಲ್ಲಿಯೇ ಇಲ್ಲ. ಮಲ್ಲರ ಗರ್ವವನ್ನಡಗಿಸಬಲ್ಲವನು ನೀನೇ ಅಲ್ಲವೇ! ಹುರೇ" ಎಂದು ಕೊಂಡಾಡುತ್ತಿದ್ದರು.

ಆ ವೀರರಿಬ್ಬರೂ ಅಲಸಿದಾಗ ಕರ್ಪೂರತಾಂಬೂಲವನ್ನು ತೆಗೆದು ಗಂಟಲಲ್ಲಿರಿಸಿಕೊಳ್ಳುತ್ತಾ, ಸ್ವಲ್ಪಸ್ವಲ್ಪ ಹಿಂದಕ್ಕೆ ಸರಿಯುವುದೂ, ಮರಳಿ ಮುಂದಕ್ಕೆ ಬರುವುದೂ, ಕುಳ್ಳಿರುವುದೂ, ಹಾರುವುದೂ, ಕುಪ್ಪಳಿಸುವುದೂ, ಇತ್ಯಾದಿಗಳಿಂದ ವಿಶ್ರಾಂತಿಪಡೆಯುತ್ತಿದ್ದರು. ಮೈಯಲ್ಲಿ ರಕ್ತ ಸುರಿಯುತ್ತಿದ್ದರೂ, ಮೂಳೆಗಳು ಮುರಿಯುತ್ತಿದ್ದರೂ, ನೋವು ಹೆಚ್ಚುತ್ತಿದ್ದರೂ, ಸ್ವಲ್ಪವೂ ಲಕ್ಷ್ಯವಾಡದೆ ಕಾಲಭೈರವನ ಹಣೆಗಣ್ಣಿನ ಜಟವೋ, ಎಂಬಂತೆ ಕಾದುತ್ತಿ

ದ್ದರು. ಹಿಂದೆ ತ್ರೇತಾಯುಗದಲ್ಲಿ ವೀರನಾದ ಹನುಮಂತನ ಸಂಗಡ ರಾವಣನು ಶಪಥಮಾಡಿಕೊಂಡು ಮೂರು ಗುದ್ದುಗಳಲ್ಲಿ ಸೋಲು ಗೆಲವುಗಳನ್ನು ಪರೀಕ್ಷೆ ಮಾಡತೊಡಗಿ, ಮೊದಲನೆಯ ಗುದ್ದಿನಲ್ಲಿಯೇ ಬಳಲಿ ಬೇಸತ್ತು ಚೈತನ್ಯ ಪಡೆದಮೇಲೆ ಒಂದಾವೃತ್ತಿ ಮಾರುತಿಯನ್ನು ಗುದ್ದಲು ಅವನು ಮೈಮರೆತನು. ಪುನಃ ಎಚ್ಚತ್ತು ಒಂದು ಗುದ್ದಿದರೆ ತನ್ನ ಜೀವ ಉಳಿಯಲಾರದೆಂದು ಹೆದರಿ ರಾವಣನು ಓಡಿಹೋದನು. ಆ ವೀರರಿಬ್ಬರಿಗೂ ನಡೆದ ಯುದ್ಧವನ್ನು ಈ ಭೀಮಜರಾಸಂಧರು ನೆನಪಿಗೆ ತಂದರೆಂಬಂತೆ ಜನರು ಹೇಳಿಕೊಳ್ಳುತ್ತಿದ್ದರು.

ಹಗಲು ರಾತ್ರಿಗಳೆನ್ನದೆ ಆಹಾರ ನಿದ್ರೆಗಳನ್ನುಳಿದು, ಬಹು ರೋಷಾವೇಶದಿಂದ ಆ ವೀರರಿಬ್ಬರೂ ಸ್ವಲ್ಪವೂ ಬೇಸರವಿಲ್ಲದೆ ಮುಷ್ಟಿಯುದ್ಧವನ್ನು ಮಾಡುತ್ತಿದ್ದರೂ ಅವರ ಬಲವು ಸವೆಯಲಿಲ್ಲ. ಕೋಪದ ಬೀಜವು ಬರಡಾಗಲಿಲ್ಲ. ಜಯಾಭಿಲಾಷೆಯು ಸಡಿಲಲಿಲ್ಲ. ಗರ್ವವು ತಗ್ಗಲಿಲ್ಲ. ಮೈಸೋಲಲಿಲ್ಲ. ಮೈಯುನೋವು ತೋರಲಿಲ್ಲ. ಮನಸ್ಸು ಹಿಮ್ಮೆಟ್ಟಲಿಲ್ಲ. ಹೀಗೆ ಅವಿಚ್ಛಿನ್ನವಾಗಿ ಕಾದುತ್ತಿರುವಾಗ ಹದಿನಾಲ್ಕನೆಯ ರಾತ್ರಿ ಜರಾಸಂಧನ ಭುಜಬಲವು ಸ್ವಲ್ಪ ಕುಂದಿತು. ಧೈರ್ಯವು ತಗ್ಗಿತು. ಅವನ ಶಕ್ತಿಯ ತೇಜಸ್ಸು ಸಂಜೆಯ ಸೂರ್ಯನಂತೆ ಕಾಂತಿ ಹೀನವಾಯಿತು. ನಿಮಿಷ ನಿಮಿಷಕ್ಕೂ ಅವನ ನಾಲಗೆ ಒಣಗುತ್ತಾ ಬಂತು. ಮುಂದೆ ತಾನು ಜಯಿಸುವೆನೆಂಬ ಆಶೆಯು ಜಾರಿಹೋಯಿತು. ಅವನ ಪ್ರತಾಪವೆಂಬ ಸೂರ್ಯನಿಗೆ ಕರಿಯಮುಗಿಲು ಮುಚ್ಚಿತು,

ಆ ಭೀಮಸೇನನು ಎದುರಾಳಾದ ಜರಾಸಂಧನ ಈ ದುರವಸ್ಥೆಯನ್ನು ನೋಡಿ, ಅವನನ್ನು ನಿಗ್ರಹಿಸಲು ಇದೇ ಸಮಯವೆಂದು

ತಿಳಿದು, ಸಮಸ್ತ ಪ್ರಾಣಿಗಳ ಸೃಷ್ಟಿ ಸ್ಥಿತಿ ಲಯ ಕರ್ತನಾದ ಶ್ರೀಕೃಷ್ಣನನ್ನು ಭಕ್ತಿಯಿಂದ ಧ್ಯಾನಿಸಿದನು. ಆಬಳಿಕ ತನ್ನ ತಂದೆಯಾದ ವಾಯುದೇವನ ವೀರಾವೇಶವನ್ನು ಹೊಂದಿ, ಶ್ರೀಕೃಷ್ಣಾನುಗ್ರಹದಿಂದ ಮಹಾಬಲವನ್ನು ಪಡೆದು, ಆ ಜರಾಸಂಧನನ್ನು ಹಿಡಿದು ತಿರುಗಿಸಿ, ಬೀಸಿ, ನೆಲಕ್ಕೆ ಕೆಡಹಿ ಅವನ ಕಾಲುಗಳಲ್ಲಿ ಒಂದನ್ನು ತುಳಿದುಕೊಂಡು, ಮತ್ತೊಂದು ಕಾಲನ್ನು ಕೈಯಲ್ಲಿ ಹಿಡಿದು ಸಾಹಸದಿಂದ ಎತ್ತಿ ದೇಹವನ್ನು ಎರಡುಸೀಳುಮಾಡಿ, ಬಿಸುಟನು. ವರದ ಬಲದಿಂದ ಅವನು ಸಾಯಲಿಲ್ಲ. ಆಗಲೇ ಆ ಸೀಳುಗಳೆರಡೂ ಒಂದಾಗಿ ಕೂಡಿಕೊಂಡುವು. ಜರಾಸಂಧನು ಪುನಃ ಯುದ್ಧಕ್ಕೆ ಸಿದ್ಧನಾಗಿ ನಿಂತನು. ಭೀಮಸೇನನು ಮೊದಲಿನಂತೆಯೇ ಆ ಶತ್ರುವಿನ ದೇಹವನ್ನು ಸೀಳಿ ಒಗೆದನು. ಮರಳಿ ಆ ಸೀಳುಗಳು ಕೂಡಿಕೊಂಡು ಜರಾಸಂಧನು ಯುದ್ಧಕ್ಕೆ ಸಿದ್ಧನಾಗಿ ನಿಂತನು. ಪುನಃ ಭೀಮಸೇನನು ಆ ದೇಹವನ್ನು ಸೀಳಿ ಬಿಸುಟನು. ಹೀಗೆ ನೂರೆಂಟುಸಾರಿ ಭೀಮಸೇನನು ಆ ಜರಾಸಂಧನ ದೇಹವನ್ನು ಸೀಳಿ ಹಾಕುತ್ತಿದ್ದರೂ ಅವನು ಸಾಯದೆ ಎದ್ದು ನಿಂತು ಯುದ್ಧಮಾಡತೊಡಗುತ್ತಿದ್ದನು. ಇದನ್ನು ಕಂಡು ಪರಾಕ್ರಮಿಯಾದ ಭೀಮಸೇನನಿಗೆ ಅತ್ಯಾಶ್ಚರ್ಯವುಂಟಾಗಿ ಮುಂದೆ ಏನುಮಾಡಬೇಕೆಂಬುದೇ ತೋರದೆ ಹೋಯಿತು. ಇಂಗಿತಜ್ಞನಾದ ಶ್ರೀಕೃಷ್ಣನು ತನ್ನ ಎರಡು ಕೈಗಳನ್ನೂ ಹಿಂದುಮುಂದಾಗಿ ಜೋಡಿಸಿ ಸಂಜ್ಞೆಮಾಡಿ ತೋರಿಸಿದನು. ಭೀಮನು ಈ ಉಪಾಯವನ್ನು ಗ್ರಹಿಸಿ ಶತ್ರುವಿನ ದೇಹದ ಸೀಳುಗಳು ಒಂದಾಗಿ ಸೇರಲು ಆಸ್ಪದವಿಲ್ಲದಂತೆ ಕೊನೆಯಸಾರಿ ಆ ಸೀಳುಗಳನ್ನು ಹಿಂದುಮುಂದಾಗಿ ಬಿಸುಟನು. ಅವು ಸೇರಲು ಅನುಕೂಲವಿಲ್ಲದ್ದರಿಂದ ಕೂಡಿಕೊಳ್ಳಲಾರದೆ ಜರಾಸಂಧನ ಪ್ರಾಣಗಳು ಹೋದುವು.

ಮಾಗಧನು ಮಡಿದ ಸುದ್ದಿಯು ಜಾಗ್ರತೆಯಲ್ಲಿ ಹರಡಿತು. ಅಂತಃಪುರದಲ್ಲಿದ್ದ ಜರಾಸಂಧನ ಪತ್ನಿಯರು ಹಾಹಾಕಾರವಮಾಡುತ್ತಾ ಒಡೆಗಳನ್ನು ಬಿಚ್ಚಿ, ಮುಂಡೇಕೂದಲುಗಳನ್ನು ಕೆದರಿಕೊಂಡು ಶೋಕಾವೇಶದಿಂದ ಎದೆ ಬಡಿದುಕೊಳ್ಳುತ್ತಾ, ಅಲ್ಲಿಗೆ ಓಡಿಬಂದು ಪತಿಯ ಶವದಮೇಲೆ ಬಿದ್ದು ಆಕ್ರಂದಿಸುತ್ತಿದ್ದರು. ಪುರಜನರು ಭಯದಿಂದತಮ್ಮ ಮನೇಬಾಗಿಲುಗಳನ್ನು ಮುಚ್ಚಿಕೊಂಡು ಹೊರಕ್ಕೆ ಹೊರಡದೆ ಇದ್ದರು. ಆ ಜರಾಸಂಧನ ಪುತ್ರರು ಭಯದಿಂದ ಬೆಟ್ಟದ ಮರೆಯಲ್ಲಿ ಅಡಗಿಕೊಳ್ಳಲಿಕ್ಕೆ ಓಡಿಹೋಗುತ್ತಿದ್ದರು. ಪುರಜನರೆಲ್ಲಾ ಗಾಬರಿಯಾಗಿ ತಲೆತಪ್ಪಿಸಿಕೊಳ್ಳುತ್ತಿದ್ದರು. ಆಗ ಕರುಣಾಳುವಾದ ಶ್ರೀಕೃಷ್ಣನು ಅವರನ್ನು ನೋಡಿ, ಅವರೆಲ್ಲರಿಗೂ ಅಭಯವನ್ನು ಕೊಟ್ಟು, ರಾಜಪತ್ನಿಯರನ್ನು ಹಿತವಾಕ್ಯಗಳಿಂದ ಸಮಾಧಾನಮಾಡಿದನು. ಜರಾಸಂಧನಮಗ ಸಹದೇವನಿಗೆ ಪಟ್ಟವನ್ನು ಕಟ್ಟಿ, ಪೂರ್ವದಿಂದ ಇದ್ದ ಅಧಿಕಾರಿಗಳಿಗೆಲ್ಲಾ ಅವರವರ ಪದವಿಗಳನ್ನು ಕೊಡುವೆನೆಂದು ಹೇಳಿದನು. ಅಲ್ಲಿಂದ ಆ ಮೂವರು ವೀರರೂ ಸೆರೆಮನೆಗೆ ಹೋಗಿ ಬಂದಿಯಲ್ಲಿದ್ದ ರಾಜರನ್ನೆಲ್ಲಾ ಬಿಡಿಸಿ ಮನ್ನಿಸಿದರು. ಅವರು ಭೀಮಾದಿಗಳ ಉಪಕಾರವನ್ನು ಸ್ಮರಿಸಿ, ತಮ್ಮ ಕೃತಜ್ಞತೆಯನ್ನು ತೋರಿ, ತಮಗೆ ಏನು ಅಪ್ಪಣೆ? ಎಂದು ಕೇಳಲು ಶ್ರೀಕೃಷ್ಣನು ನೀವುಗಳೆಲ್ಲರೂ ನಿಮ್ಮನಿಮ್ಮ ರಾಜಧಾನಿಗಳಿಗೆ ಹೊರಡಿರಿ. ಯುಧಿಷ್ಠಿರನ ರಾಜಸೂಯಯಾಗದ ವೇಳೆಗೆ ನಿಮಗೆ ಅನುಕೂಲವಾದ ಕಾಣಿಕೆಗಳನ್ನು ತೆಗೆಯಿಸಿಕೊಂಡು, ಇಂದ್ರಪ್ರಸ್ಥಪುರಕ್ಕೆ ಬನ್ನಿರಿ. ಆ ಮಹಾರಾಯನ ದರ್ಶನವನ್ನು ಮಾಡಿಕೊಂಡು ಯಜ್ಞವು ಪೂರೈಸಿದ ಬಳಿಕ ಹೊರಡಬಹುದು ” ಎಂದು ಹೇಳಿ ಕಳುಹಿದನು.

ಬಳಿಕ ಆ ಜರಾಸಂಧನ ಮಗ ಸಹದೇವನು ಮಂತ್ರಿ ಪ್ರಧಾನ

ರ ಹಿಂದೆ ಬಂದು ಶ್ರೀಕೃಷ್ಣನಿಗೂ ಭೀಮಾರ್ಜುನರಿಗೂ ವಂದಿಸಿ ನಿಂತುಕೊಂಡನು. ಆಗ ಮಂತ್ರಿಗಳು ಸ್ವಾಮಿಗೆ ಕೈಮುಗಿದು "ದೇವಾ, ನಮ್ಮ ರಾಜನಾದ ಜರಾಸಂಧನ ಮಗನಿಗೆ ತಂದೆಯು ಹೋದ ಮಾರ್ಗವನ್ನೇ ತೋರಿಸುವಿರಾ ? ಅಥವಾ ಕೃಪಾದೃಷ್ಟಿ ಯಿಂದ ಕಟಾಕ್ಷಿಸಿ, ದೀನರಕ್ಷಕನೆಂಬ ಬಿರುದನ್ನು ಸಾರ್ಥಕಗೊಳಿ ಸುವಿರಾ ?" ಎಂದರು. ಅದಕ್ಕೆ ಶ್ರೀಕೃಷ್ಣನು "ನೀವು ಹೆದರ ಬೇಡಿರಿ. ಇವನಿಗೆ ರಾಜ್ಯದ ಪಟ್ಟವನ್ನು ಕಟ್ಟುವತನಕ ನಾವು ಹಿಂ ದಕ್ಕೆ ಹೋಗತಕ್ಕವರಲ್ಲ. ಮೃತರಾಜನ ಶವವನ್ನು ತಕ್ಕ ಮರ್ಯಾದೆ ಗಳಿಂದ ಸಂಸ್ಕರಿಸಿರಿ" ಎನ್ನಲು ಆದರ ಅಪ್ಪರ ಅಪರ ಕೃತ್ಯಗಳಿಗೆ ತಕ್ಕಪ್ರಯತ್ನಗಳೆಲ್ಲವೂ ನಡೆದುವು. ಜರಾಸಂಧನ ಪತ್ನಿಯರು ಶ್ರೀ ಕೃಷ್ಣನನ್ನು ಕಂಡು ವಂದಿಸಿ 'ಸ್ವಾಮಿಾ! ನಮಗೆ ಸಹಗಮನಕ್ಕೆ ಅನುಜ್ಞೆಕೊಟ್ಟು ನಮ್ಮ ಪತಿಯ ಸಾನ್ನಿಧ್ಯವನ್ನು ಅನುಗ್ರಹಿಸ ಬೇಕು.' ಎಂತ ಪ್ರಾರ್ಥಿಸಲು ಆತನು ಅದರಂತೆಯೇ ಅಪ್ಪಣೆ ಕೊಟ್ಟನು. ವೈದಿಕ ವಿಧಾನದಿಂದ ಅಪರ ಕರ್ಮಗಳೆಲ್ಲ ನೆರವೇರಿದುವು.

ಹೀಗೆ ಭೀಮಾರ್ಜುನರು ಬ್ರಾಹ್ಮಣ ವೇಷಧಾರಿಗಳಾಗಿ ಶ್ರೀ ಕೃಷ್ಣನ ಸಹಾಯದಿಂದ ಜರಾಸಂಧನನ್ನು ನಿಗ್ರಹಿಸಿದರು. ಇದರಿಂದ ಮುಖ್ಯವಾದ ಒಂದು ನೀತಿಯನ್ನು ಕಲಿಯಬಹುದು. ಜರಾಸಂಧನ ಉತ್ಪತ್ತಿಯು ಜರೆಯೆಂಬ ರಾಕ್ಷಸಿಯಿಂದಲೇ ಆಯಿತೆಂದು ಹಿಂದೆ ಹೇಳಲ್ಪಟ್ಟಿದೆ. ಈ ಜರೆಯೇ ಸಮಸ್ತ ಜನರಿಗೂ ಸಾಮಾನ್ಯವಾಗಿ ಅಂತ್ಯಕಾಲವನ್ನು ತೋರಿಸುವ ವೃದ್ಧಾಪ್ಯದ ಸಾಕ್ಷಾತ್ಸ್ವರೂಪವು, ಇಂತಹ ಜರೆಯೂ ತನ್ಮೂಲಕ ಮರಣವೂ ಯಾರಿಗೂ ತಪ್ಪದೆ ಇರು ವುದು. ಇಂದ್ರಿಯ ಪರವಶರಾಗಿಯೂ, ವಿಷಯಾಸಕ್ತರಾಗಿಯೂ ಅಹಂಕಾರ ವಿಶಿಷ್ಟರಾಗಿಯೂ ಇರುವ ರಾಜಾಧಿರಾಜರೆಲ್ಲರೂ ಈ

ಜರೆಯೆಂಬ ಶಕ್ತಿಗೆ ಸಿಕ್ಕಿ ಜರಾಸಂಧನ ಕಾರಾಗೃಹದಲ್ಲಿ ಬಿದ್ದಿದ್ದ ರೆಂದು ಹೇಳಬಹುದು. ಈ ಜರಾಬಾಧೆ ತಪ್ಪಿ, ನಿತ್ಯಾನಂದ ಸುಖ ವುಂಟಾಗಬೇಕಾದರೆ ಪರಮಾತ್ಮನಾದ ಶ್ರೀಕೃಷ್ಣನ ಅನುಗ್ರಹ ಪಡೆ ಯದೆ ಬೇರೆಮಾರ್ಗವಿಲ್ಲವು. ಭಗವಧ್ಯಾನಪರರಾಗಿ ಯಮನಿಯಮಾ ದಿಗಳಿಂದ ಶುದ್ಧಚಿತ್ತರಾದ ಬ್ರಹ್ಮಜ್ಞಾನಿಗಳಿಗೆ ಮಾತ್ರ ಭಗವದನು ಗ್ರಹ ವುಂಟಾಗುವುದು. ಅಂತಹ ಬ್ರಹ್ಮನಿಷ್ಠರು ತಮ್ಮ ಯೋಗಾ ಭ್ಯಾಸಬಲದಿಂದ ಸರ್ವಜನಸಾಮಾನ್ಯಕ್ಕೆ ಸಂಭವಿಸುವ ಜರೆಯನ್ನು ಕೂಡ ಪರಿತ್ಯಜಿಸಿ ತಾವು ಚಿರಕಾಲ ಬ್ರಹ್ಮಾನಂದ ಸುಖವನ್ನು ಅನುಭವಿಸುತ್ತಾ ಇತರರಿಗೂ ಸನ್ಮಾರ್ಗಪ್ರದರ್ಶಕರಾಗುವರು. ಈ ವಿಷಯದ ನೀತಿಯನ್ನು ಜರಾಸಂಧವಧೆಯ ಕಥೆಯು ಬೋಧಿ ಸುವುದು.

ಭೀಮಾರ್ಜುನರು ಸಹಜವಾದ ಪರಾಕ್ರಮಿಗಳೇ ಆಗಿದ್ದರೂ ಅಹಂಕಾರದಿಂದ ಕೂಡಿದ ಕ್ಷಾತ್ರವೃತ್ತಿಯನ್ನೇ ಅವಲಂಬಿಸಿ, ಕಾದಿ ದ್ದರೆ ಆ ಜರಾಸಂಧನು ಅವರ ಕೈವಶನಾಗುತ್ತಿರಲಿಲ್ಲ. ಮತ್ತು ಬ್ರಾಹ್ಮಣ ಧರ್ಮವನ್ನನುಸರಿಸಿ, ಆತ್ಮಜಯವನ್ನು ಪಡೆದರೂ ಕೂಡ ಶ್ರೀ ಕೃಷ್ಣನ ಸಹಾಯವಿಲ್ಲದಿದ್ದರೆ ಆ ಜರಾಸಂಧನು ಅವರಿಂದ ನಿಗ್ರಹಿಸಲ್ಪಡುತ್ತಿರಲಿಲ್ಲ. ಅವರು ಆ ಅಹಂಕಾರ ವುಳಿದು ಬ್ರಾಹ್ಮ ಣರ ವೇಷಗಳನ್ನು ಧರಿಸಿ, ಬ್ರಹ್ಮಜ್ಞಾನಹೊಂದಿ, ಭಗವದನುಗ್ರಹ ವನ್ನು ಪಡೆದುದರಿಂದಲೇ ಆ ಜರಾಸಂಧನೆಂಬ ರಕ್ಕಸನನ್ನು ಜಯಿಸಿ ದರು. ಹೀಗೆಯೇ ಯೋಗಾಭ್ಯಾಸದಿಂದ ಇಂದ್ರಿಯಗಳನ್ನು ನಿಗ್ರ ಹಿಸಿ, ಆತ್ಮಜ್ಞಾನವನ್ನು ಪಡೆದು, ಭಗವದನುಗ್ರಹಕ್ಕೆ ಪಾತ್ರರಾದರ ಮೃತ್ಯುವನ್ನು ಕೂಡ ದೂರಪಡಿಸಿ, ಶಾಶ್ವತವಾದ ಸುಖವನ್ನು ಅನು ಭವಿಸಬಹುದೆಂಬುದೇ ಈ ಕಥೆಯಿಂದ ಕಲಿಯಬಹುದಾದನೀತಿಯು.

ವಿಚಾರಮಾಡುತ್ತಾಬಂದರೆ ಈ ಮಹಾಭಾರತದಲ್ಲಿ ಪ್ರತಿಯೊಂದು ಕಥೆಯಲ್ಲಿಯೂ, ಇಂತಹ ನೀತಿಯೊಂದೊಂದು ಇದ್ದೇ ಇರುವುದು. ಕಥಾಶ್ರವಣವು ಪುಣ್ಯಪ್ರದವೆಂಬುದು ಮುಖ್ಯವಾದರೂ ಪ್ರತಿಒಂದು ಕಥೆಯಲ್ಲಿಯೂ ಇರುವ ತತ್ವವನ್ನು ವಿಚಾರಮಾಡಿ ತಿಳಿದು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದರಿಂದ ಅಧಿಕಲಾಭವುಂಟು. ಇನ್ನು ಈ ವಿಷಯವನ್ನು ನಿಲ್ಲಿಸಿಕಥಾಸಂದರ್ಭಕ್ಕೆ ತಿರುಗೋಣ.

ಬಳಿಕ ಒಂದುದಿನ ಶುಭಮುಹೂರ್ತದಲ್ಲಿ ಶ್ರೀಕೃಷ್ಣನು ಜರಾಸಂಧನ ಜ್ಯೇಷ್ಠಪುತ್ರನಾದ ಸಹದೇವನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ಬಹು ಸಂಭ್ರಮದಿಂದ ನೆರವೇರಿಸಿ, ರಾಜಮರ್ಯಾದೆಗಳಿಂದ ಅವನನ್ನು ಮನ್ನಿಸಿ, ತಕ್ಕ ಬುದ್ಧಿಮಾತುಗಳನ್ನು ಉಪದೇಶಿಸಿದನು. ಆ ರಾಜಪುತ್ರನು ಶ್ರೀಕೃಷ್ಣನಿಗೂ ಭೀಮಾರ್ಜುನರಿಗೂ ವಿನಯದಿಂದ ವಂದಿಸಿ, ತನ್ನ ಕೃತಜ್ಞತೆಯನ್ನು ತೋರಿಸಿದುದಲ್ಲದೆ ಅವರಿಗೆ ಯಥೋಚಿತವಾದ ಕಪ್ಪಗಳನ್ನೊಪ್ಪಿಸಿದನು. ಅವರು ಆ ದ್ರವ್ಯಗಳನ್ನೆಲ್ಲಾ ಪರಿಗ್ರಹಿಸಿ ಚತುರಂಗಬಲದೊಂದಿಗೆ ಇಂದ್ರಪ್ರಸ್ಥಕ್ಕೆ ಬಂದು ಸೇರಿದರು. ಯುಧಿಷ್ಠಿರನು ಜಯಶಾಲಿಗಳಾಗಿ ಬಂದ ತಮ್ಮಂದಿರನ್ನೂ, ಶ್ರೀಕೃಷ್ಣನನ್ನೂ ಸಂತೋಷದಿಂದ ಮನ್ನಿಸಿ ದೇವದೇವನಾದ ಆ ಸ್ವಾಮಿಯ ಅನುಗ್ರಹವನ್ನು ಬಹಳವಾಗಿ ಕೊಂಡಾಡಿದನು.



# ಮೂರನೆಯ ಸಂಧಿ.

ಸೂ|| ಧರ್ಮರಾಯನ ಅಪ್ಪಣೆಯಿಂದ ಭೀಮಾದಿಗಳು ದಿಗ್ವಿಜಯ ಮಾಡಿ, ಸಮಸ್ತರಾಜರುಗಳಿಂದಲೂ ಕಪ್ಪಗಳನ್ನು ತಂದೊಪ್ಪಿಸಿದರು. ಬಳಿಕ ಯಾಗಕ್ಕೆ ಪ್ರಾರಂಭವಾಡಲ್ಪಟ್ಟಿತು.

ಶ್ರೀಕೃಷ್ಣನು ಜಯಶಾಲಿಗಳಾದ ಭೀಮಾರ್ಜುನರೊಂದಿಗೆ ಮಗಧ ದೇಶದಿಂದ ಹೊರಟು, ಇಂದ್ರಪ್ರಸ್ಥಕ್ಕೆ ಬಂದು ಸೇರಿದನು. ಯುಧಿಷ್ಠಿರನು ಜರಾಸಂಧನ ವೃತ್ತಾಂತವನ್ನು ಕೇಳಿ ಬಹು ಸಂತೋಷಿಸಿ, ಆ ಮಹಾತ್ಮನ ಅನುಗ್ರಹವನ್ನು ಬಹಳವಾಗಿ ಹೊಗಳಿದನು. ಬಳಿಕ ಶ್ರೀಕೃಷ್ಣನು ದ್ವಾರಕೆಗೆ ಹೋಗಿ, ರಾಜಸೂಯದ ವೇಳೆಗೆ ಬರುವೆನೆಂದು ಯುಧಿಷ್ಠಿರನಿಗೆ ಹೇಳಿ, ಪ್ರಯಾಣಮಾಡಿದನು.

ತರುವಾಯ ಒಂದುದಿನ ಭೀಮಾದಿಗಳು ಅಣ್ಣನನ್ನು ನೋಡಿ, "ಆರ್ಯನೇ, ಶ್ರೀಕೃಷ್ಣಾನುಗ್ರಹದಿಂದ ಜರಾಸಂಧನನ್ನು ನಿಗ್ರಹಿಸಿದುದಾಯಿತು. ಇನ್ನು ನಾವು ಯಜ್ಞದ ವೆಚ್ಚಕ್ಕೋಸ್ಕರ ಬಹು ದ್ರವ್ಯವನ್ನು ಸಂಪಾದಿಸಬೇಕಾಗಿದೆ. ಸುಮ್ಮನೆ ಕುಳಿತಿದ್ದರೆ ನಮ್ಮ ಸಂಕಲ್ಪಸಿದ್ಧಿಯಾಗದು. ನಮ್ಮಗಳಿಗೆ ಅನುಜ್ಞೆಕೊಟ್ಟರೆ ಬೇರೆಬೇರೆ ದಿಕ್ಕುಗಳಿಗೆ ಹೋಗಿ, ಅಲ್ಲಲ್ಲಿರುವ ರಾಜರನ್ನು ಜಯಿಸಿ, ಅವರಿಂದ ಕಪ್ಪಗಳನ್ನು ತಂದೊಪ್ಪಿಸುವೆವು. ಬಳಿಕ ಯಾಗವನ್ನು ಆರಂಭಿಸಬಹುದು." ಎಂದು ಅರಿಕೆಮಾಡಿದರು. ಆಗ ಯುಧಿಷ್ಠಿರನು ಸ್ನಿಗ್ಧ ಗಂಭೀರವಾಕ್ಯಗಳಿಂದ "ತಮ್ಮಂದಿರಾ, ನಿಮ್ಮಂತಹ ಶೂರರಾದ ಸಹೋದರರ ಸಹಾಯವಿರುವಾಗ ಯಾಗವು ನೆರವೇರುವುದರಲ್ಲಿ ಸಂಶಯವೇನು ? ನಿಮಗೆ ಅಭಿಮತವಾದ ದಿಕ್ಕುಗಳಿಗೆ ಪ್ರಯಾಣ

ಮಾಡಿ, ಕಾರ್ಯಸಾಧನೆಮಾಡಿಕೊಂಡು ಬನ್ನಿರಿ.''' ಎಂದು ಹೇಳಿದನು. ಅರ್ಜುನನು ಉತ್ತರಕ್ಕೂ, ಭೀಮನು ಪೂರ್ವಕ್ಕೂ, ನಕುಲನು ಪಶ್ಚಿಮಕ್ಕೂ, ಸಹದೇವನು ದಕ್ಷಿಣ ದಿಕ್ಕಿಗೂ ದಿಗ್ವಿಜಯಾರ್ಥವಾಗಿ ಹೊರಡತಕ್ಕದೆಂದು ನಿಶ್ಚಯಿಸಿಕೊಂಡರು.

ಅರ್ಜುನನು ದೊಡ್ಡಸೈನ್ಯವನ್ನು ಕೂಡಿಸಿಕೊಂಡು ಅಗ್ನಿದತ್ತವಾದ ರಥವನ್ನೇರಿ ಗಾಂಡೀವವನ್ನೂ ದಿವ್ಯಾಸ್ತ್ರಗಳನ್ನೂ ತೆಗೆದುಕೊಂಡು ಉತ್ತರದಿಕ್ಕಿಗೆ ಹೊರಟನು. ಪಟ್ಟದರಸಿಯಾದ ದ್ರೌಪದಿಯು ವಿಜಯನ ವಿಜಯವನ್ನು ಬಯಸಿ ಸಕರ್ಪೂರ ತಾಂಬೂಲವನ್ನು ಚಿನ್ನದ ತಟ್ಟೆಯಲ್ಲಿ ತುಂಬಿ ತಂದುಕೊಟ್ಟು, ಆರತಿಯನ್ನೆತ್ತಿ ಅಕ್ಷತೆಗಳನ್ನು ಚೆಲ್ಲಿದಳು. ಅರ್ಜುನನು ಪುರೋಹಿತನಾದ ಧೌಮ್ಯನಿಗೂ, ತಾಯಿಗೂ, ಅಣ್ಣಂದಿರಿಗೂ, ನಮಸ್ಕಾರಮಾಡಿ ಹೊರಟನು. ಮೊದಲು ಆನರ್ತ, (ಗುಜರಾತ್) ಕಾಲಕೂಟ, ಕುಳಿಂದ, (ಸರಸ್ವತೀತೀರ,) (ಸಹರನಪುರ) ದೇಶಗಳಿಗೆ ಹೋಗಿ, ಆ ರಾಜರಿಗೆ ಹೇಳಿಕಳುಹಿದನು. ಅವರು ಅರ್ಜುನನ ಪ್ರತಾಪಕ್ಕೆ ಹೆದರಿ ತಮ್ಮಲ್ಲಿದ್ದ ಶ್ರೇಷ್ಠವಸ್ತುಗಳನ್ನೂ ವಿಶೇಷದ್ರವ್ಯವನ್ನೂ ತಂದೊಪ್ಪಿಸಿದರು. ಅರ್ಜುನನು ಅವುಗಳನ್ನು ಇಂದ್ರಪ್ರಸ್ಥಕ್ಕೆ ಕಳುಹಿ, ಸೈನ್ಯಸಮೇತನಾಗಿ ಮುಂದೆ ನಡೆದು ಶಾಕಲದ್ವೀಪಕ್ಕೆ ಹೋದನು. ಅಲ್ಲಿಯ ಅರಸನಾದ ಪ್ರತಿವಿಂಧ್ಯನೊಂದಿಗೆ ಕಾದಿ ಅವನನ್ನೊಕ್ಕಡಗಿಸಿ, ಅಲ್ಲಿಕೊಟ್ಟ ಅಪರಿಮಿತ ದ್ರವ್ಯವನ್ನು ಪಡೆದು, ಅಲ್ಲಿಂದ ಪ್ರಾಗ್ಜ್ಯೋತಿಷ (ಅಸ್ಸಾಂ) ಕ್ಕೆ ಹೋದನು. ಅಲ್ಲಿ ನರಕಾಸುರನ ಮಗನಾದ ಭಗದತ್ತನೆಂಬ ಕಿರಾತರಾಜನು ಆಳುತ್ತಿದ್ದನು. ಆ ರಾಜನು ಕಿರಾತಸೈನ್ಯವನ್ನೂ, ಚೀನರ ಸೇನೆಯನ್ನೂ ಕೂಡಿಕೊಂಡು ಅರ್ಜುನನೊಂದಿಗೆ ಯುದ್ಧಕ್ಕೆ ನಿಂತನು. ಎಂಟುದಿನಗಳತನಕ ಘೋರಯುದ್ಧನಡೆದು, ಆ ಭಗದತ್ತನು ಸೋ

ತುಹೋಗಿ, ಶರಣಾಗತನಾದನು. ಅರ್ಜುನನು ಅವನನ್ನು ಮನ್ನಿಸಿ, ಆವನಿಂದ ಯಥೇಷ್ಟವಾದ ದ್ರವ್ಯವನ್ನು ಪಡೆದು ತನ್ನ ರಾಜಧಾನಿಗೆ ಕಳುಹಿದನು. ಅಲ್ಲಿಂದ ಮುಂದೆ ಹೊರಟು ಹಿಮಾಲಯ ಪರ್ವತ ರಾಜ್ಯಗಳಲ್ಲಿದ್ದ ರಾಜರಿಂದ ಕಾಣಿಕೆ ಕಪ್ಪಗಳನ್ನು ತೆಗೆದುಕೊಂಡು ಉಲೂಕದೇಶಕ್ಕೆ ಹೋದನು. ಅಲ್ಲಿಯ ರಾಜನಾದ ಬೃಹಂತನೆಂಬು ವನು ಹೆಚ್ಚಾಗಿ ಸೈನ್ಯವನ್ನು ಕೂಡಿಸಿಕೊಂಡು ಅರ್ಜುನನನ್ನು ಎದು ರಿಸಿದನು. ಮಹಾಶೂರನಾದ ಪಾರ್ಥನ ಬಾಣದಪೆಟ್ಟಿಗೆ ಆವನು ತಡೆಯಬಲ್ಲನೆ! ಒಂದೆರಡುಗಳಿಗೆ ಕಾದುವಷ್ಟರಲ್ಲಿಯೇ ಅವನಶಕ್ತಿ ಕುಗ್ಗಿ ಯೋಯಿತು. ಆತನು ಅರ್ಜುನನ ಕೈವಶನಾಗಿ, ಅವನು ಕೋರಿದಷ್ಟು ಧನ ಸಹಾಯಮಾಡಿದನು. ಬಳಿಕ ಅರ್ಜುನನು ಆ ಉಲೂಕರಾಜನನ್ನು ಕರೆದುಕೊಂಡು ಪಶ್ಚಿಮದಿಕ್ಕಿಗೆ ತಿರುಗಿ ಉತ್ತರ ದಿಕ್ಕಿನಲ್ಲಿರುವ ಪೌಂಡ್ರ, ಕಾಶ್ಮೀರ, ತ್ರಿಗರ್ತ, (ಲಾಹೂರು) ಗಾಂಧಾರ, (ಕಂದಹಾರ್) ದೇವಪ್ರಸ್ಥ ಮುಂತಾದ ದೇಶಾಧೀಶ್ವರರನ್ನು ಜಯಿಸಿ ಅಲ್ಲಲ್ಲಿರುವ ಅಪೂರ್ವವಸ್ತುಗಳನ್ನೂ, ಧನರಾಶಿಗಳನ್ನೂ ಪಡೆದು ಮುಂದೆ ಸಿಂಹಪುರ (ಸಿಂಧೂನದೀತೀರ)ಕ್ಕೆ ಹೋದನು. ಅಲ್ಲಿ ಚಿತ್ರಾ ಯುಧನೆಂಬುವನು ಆಳುತ್ತಿದ್ದನು. ಅವನು ಅರ್ಜುನನ ಪರಾಕ್ರಮ ಕ್ಕೆ ಹೆದರಿ, ತನ್ನಲ್ಲಿದ್ದ ವಸ್ತುಗಳನ್ನೊಪ್ಪಿಸಿದನು. ಅವುಗಳನ್ನು ಪರಿ ಗ್ರಹಿಸಿ, ಬಾಹ್ಲೀಕ (ಬೀಯಾಸ್‌ನದೀತೀರ) ದರದ (ದರ್ದಿಸ್ಥಾನ— ಕಾಶ್ಮೀರಕ್ಕೆ ಉತ್ತರ) ಕಾಂಬೋಜ (ಅಫ್ಘಾನಿಸ್ಥಾನ್) ಋಷೀಕ (ರಷ್ಯಾ) ಮುಂತಾದ ರಾಜ್ಯಗಳಲ್ಲಿ ಆಳುತ್ತಿದ್ದ ಅರಸರಿಂದ ಕಪ್ಪಗ ಳನ್ನೂ ಬಣ್ಣಬಣ್ಣದ ಕುದುರೆಗಳನ್ನೂ ತೆಗೆಸಿಕೊಂಡು ಶ್ವೇತಪರ್ವತ ವನ್ನುದಾಟಿ, ಕಿಂಪುರುಷ ರಾಜನಾದ ದ್ರುಮಪುತ್ರನನ್ನೂ, ಗುಹ್ಯಕ ರಾಜನನ್ನೂ ಗೆದ್ದು, ಗಂಧರ್ವರಕ್ಷಿತವಾದ ಹಾಟಕದೇಶದ ರಾಜ

ನಿಂದ ತಿತ್ತಿರಿ, ಕಲ್ಮಾಷ, ಮಂಡೂಕ ಎಂಬ ಉತ್ತಮ ಜಾತ್ಯಶ್ವಗಳನ್ನು ಪಡೆದನು. ಅಲ್ಲಿಂದ ಉತ್ತರದಿಕ್ಕಿನಲ್ಲಿರುವ ಹರಿವರ್ಷಕ್ಕೆ ಹೋಗಬೇಕೆಂದು ಯತ್ನಿಸಲು, ಅಲ್ಲಿದ್ದ ಜನರು ಅರ್ಜುನನ ಬಳಿಗೆ ಬಂದು "ಎಲೈ ರಾಜನೇ, ಇನ್ನು ಉತ್ತರಕ್ಕೆ ಹೊರಡಲು ಮನುಷ್ಯರಿಗೆ ಸಾಧ್ಯವಲ್ಲವು. ನಿನ್ನ ಅಪೇಕ್ಷೆ ಏನಿರುವುದೋ ತಿಳಿಸಿದಲ್ಲಿ ನಾವೇ ಅದನ್ನು ನಡಿಸಿಕೊಡುವೆವು" ಎಂದರು. ಅದಕ್ಕೆ ಅರ್ಜುನನು "ಅಯ್ಯಾ, ಉತ್ತರ ಕುರುವೀರರೇ, ಧರ್ಮರಾಯನು ರಾಜಸೂಯ ಯಾಗವನ್ನು ಮಾಡುವನು. ನಿಮ್ಮಲ್ಲಿರುವ ಅಪೂರ್ವವಸ್ತುಗಳನ್ನು ಆ ಯಜ್ಞಾರ್ಥವಾಗಿ ಕೊಡಬಹುದು." ಎಂದು ಹೇಳಲು ಅವರು ಸಂತೋಷಪೂರ್ವಕವಾಗಿ ಹಲವು ವಸ್ತುಗಳನ್ನು ತಂದು ಕೊಟ್ಟರು.

ಈ ಪ್ರಕಾರವಾಗಿ ಅರ್ಜುನನು ಮಿತ್ರರಾಗಿ ಬಂದ ಅರಸರನ್ನು ಮನ್ನಿಸುತ್ತಾ, ಗರ್ವದಿಂದ ಎದುರಿಸಿದ ರಾಜರನ್ನು ಯುದ್ಧದಲ್ಲಿ ಭಂಗಿಸಿ, ಓಡಿಸಿ, ಅವರ ಸರ್ವಸ್ವವನ್ನೂ ತೆಗೆದುಕೊಳ್ಳುತ್ತಾ, ಶರಣಾಗತರಾದ ರಾಜರಿಗೆ ಅಭಯವಿತ್ತು ಪೊರೆಯುತ್ತಾ, ಅಪರಿಮಿತವಾದ ಧನಕನಕವಸ್ತುವಾಹನಾದಿ ಸಾಮಗ್ರಿಗಳನ್ನು ತೆಗೆಯಿಸಿಕೊಂಡು ಉತ್ತರ ದಿಗ್ವಿಜಯ ಮಾಡಿ, ಇಂದ್ರಪ್ರಸ್ಥಕ್ಕೆ ಬಂದು, ಅಣ್ಣನಿಗೆ ವಂದಿಸಿ, ವಸ್ತುಗಳನ್ನು ಒಪ್ಪಿಸಿದನು! ಯುಧಿಷ್ಠಿರನು ಪಾರ್ಥನ ಶೌರ್ಯವನ್ನು ಬಹಳವಾಗಿ ಹೊಗಳಿ ಸಂತೋಷಿಸಿದನು.

ಭೀಮಸೇನನು ಅಣ್ಣನ ಆಜ್ಞೆಯಿಂದ ಪೂರ್ವದಿಕ್ಕಿಗೆ ಹೊರಟು ಪಾಂಚಾಲ ದೇಶ (ಗಂಗಾ ಯಮುನಾ ಮಧ್ಯದೇಶ) ಕ್ಕೆ ಹೋದನು. ಆ ರಾಜನು ವಾಯುಪುತ್ರನಾದ ಭೀಮನನ್ನು ಸತ್ಕರಿಸಿ ತನ್ನ ಬಳಿಯಿದ್ದ ಶ್ರೇಷ್ಠವಸ್ತುಗಳನ್ನು ಒಪ್ಪಿಸಿದನು. ಅಲ್ಲಿಂದ ಮುಂದೆ

ಹೊರಟು, ಗಂಡಕ, ಶೂರ, (ಮಧುರಾ) ವಿದೇಹ, (ತಿರುಹೂತ್) ದಶಾರ್ಣ, (ಛತ್ತೀಸಘುರ್) ದೇಶಗಳಿಗೆ ಹೋಗಿ ಅವುಗಳ ಅರಸರೊಡನೆ ಯುದ್ಧಮಾಡಿಗೆದ್ದು, ಅವರಿಂದ ಬಹು ದ್ರವ್ಯವನ್ನು ಪಡೆದನು. ಅಲ್ಲಿಂದ ಮುಂದೆ ಅಶ್ವಮೇಧರಾಜ್ಯದ ಅಧಿಪತಿಯಾದ ರೋಚಮಾನನೊಂದಿಗೆ ಕಾದಿ ಅವನ ಸೊಕ್ಕಡಗಿಸಿ, ಚೇದಿ (ಜಬ್ಬಲ್ಪುರ) ರಾಜ್ಯಕ್ಕೆ ಹೋದನು. ಅಲ್ಲಿಯ ಮಹಾರಾಜನಾದ ಶಿಶುಪಾಲನು ಭೀಮಸೇನನನ್ನು ತನ್ನ ಅರಮನೆಗೆ ಕರೆದೊಯ್ದು ಸತ್ಕರಿಸಿ ಯಜ್ಞವಾರ್ತೆಕೇಳಿ ಬಹುಸಂತೋಷಿಸಿ, ಒಂದು ತಿಂಗಳತನಕ ದಿವ್ಯವಾದ ಔತನಗಳಿಂದಲೂ, ಬಗೆಬಗೆಯ ಆಟಪಾಟಗಳಿಂದಲೂ ಆತನನ್ನು ಸಂತೋಷಪಡಿಸುತ್ತಾ, ಇರಿಸಿಕೊಂಡಿದ್ದು, ತನ್ನಲ್ಲಿದ್ದ ಶ್ರೇಷ್ಠವಾದ ವಸ್ತುಗಳನ್ನುಕೊಟ್ಟು ಕಳುಹಿದನು. ಬಳಿಕ ಭೀಮನು ಅಲ್ಲಿಂದ ಮುಂದೆ ಹೊರಟು, ಕೋಸಲ ದೇಶಕ್ಕೆಹೋಗಿ ಅಲ್ಲಿಯ ರಾಜನಾದ ಬೃಹದ್ಬಲನಿಂದ ಕಪ್ಪವನ್ನು ಪಡೆದು, ಉತ್ತರ ಕೋಸಲಕ್ಕೆ ಹೋಗಿ ಅಲ್ಲಿಯ ಅರಸನನ್ನು ಗೆದ್ದು ಬಹುದ್ರವ್ಯವನ್ನು ಪಡೆದನು. ಅಲ್ಲಿಂದ ಮುಂದೆ ಹೊರಟು ಭಲ್ಲಾಟ, ಕಾಶಿ, ಮತ್ಸ್ಯ (ಜಯಪುರ) ಮಲದ (ಸಾಹಾಬಾದ್) ವೈದೇಹಕ, ಶಕ, ಬರ್ಬರ ಮುಂತಾದ ದೇಶಾಧೀಶರನ್ನು ಜಯಿಸಿ, ಅವರಿಂದ ಹೇರಳವಾದ ದ್ರವ್ಯವನ್ನು ಪಡೆದು, ಮಗಧರಾಜ್ಯಕ್ಕೆ (ಬೇಹಾರ್) ಹೋದನು. ಅಲ್ಲಿ ಆಳುತ್ತಿದ್ದ ಜರಾಸಂಧನ ಪುತ್ರನಾದ ಸಹದೇವನು ಕೃತಜ್ಞತೆಯಿಂದ ತನ್ನ ಸರ್ವಸ್ವವನ್ನೂ ಭೀಮಸೇನನಿಗೆ ಒಪ್ಪಿಸಲು, ಅವನನ್ನುಮನ್ನಿಸಿ, ಬೇಕಾದಷ್ಟು ದ್ರವ್ಯವನ್ನು ತಮ್ಮ ರಾಜಧಾನಿಗೆ ಕಳುಹಿಸಿದನು. ಬಳಿಕ ಪುಂಡ್ರದೇಶಾಧಿಪತಿಯಾದ ವಾಸುದೇವನನ್ನೂ, ಕೌಶಿಕೀ ಕಚ್ಛರಾಜನಾದ ಮಹೌಜಸನನ್ನೂ, ಯುದ್ಧದಲ್ಲಿ ಸೋಲಿಸಿ ಅವರಿಂದ ಕರವನ್ನು

ಪಡೆದು, ಅಂಗ, (ಬಂಗಾಳ), ತಾಮ್ರಲಿಪ್ತ, (ಹುಗ್ಲಿ) ಕರ್ವಟ, ಸುಹ್ಮ, ಓಢ್ರ ಮುಂತಾದ ಹಲವು ರಾಜ್ಯಗಳಿಗೆ ಹೋಗಿ, ಅಲ್ಲಲ್ಲಿಯ ಅರಸರಿಂದ ರತ್ನಗಳು, ಶ್ರೀಗಂಧ, ಅಗರು, ವಸ್ತ್ರಗಳು, ಮುತ್ತುಗಳು, ಚಿನ್ನ, ಬೆಳ್ಳಿ, ಹವಳ, ದ್ರವ್ಯ, ಶಾಲುಗಳು ಮುಂತಾದ ಅನೇಕ ಪದಾರ್ಥಗಳನ್ನು ತೆಗೆಯಿಸಿಕೊಂಡು ಇಂದ್ರಪ್ರಸ್ಥಕ್ಕೆ ಬಂದು ಯುಧಿಷ್ಠಿರನಿಗೆ ಒಪ್ಪಿಸಲು ಆತನು ಬಹು ಸಂತೋಷದಿಂದ ಭೀಮಸೇನನನ್ನು ಮನ್ನಿಸಿದನು.

ದಕ್ಷಿಣದಿಕ್ಕಿಗೆ ಹೊರಟ ಸಹದೇವನು ಶೂರಸೇನನನ್ನು ಜಯಿಸಿ, ವಿರಾಟ (ಅಲ್ವಾರ್) ದೇಶದ ಮತ್ಸ್ಯರಾಜನನ್ನೂ, ದಂತವಕ್ರನನ್ನೂ ವಶಪಡಿಸಿಕೊಂಡು, ಸುಮಿತ್ರ, ಶ್ರೇಣಿಮಂತರೆಂಬ ರಾಜರನ್ನು ಗೆದ್ದು ಪ್ರತಿ ಅರಸರಿಂದಲೂ ಯಥಾಶಕ್ತಿ ದ್ರವ್ಯವನ್ನು ಪಡೆದನು. ಅಲ್ಲಿಂದ ತನ್ನ ಅಜ್ಜನಾದ ಕುಂತೀಭೋಜನ ರಾಜಧಾನಿಗೆ ಹೋಗಿ ಹೇಳಿ ಕಳುಹಲು, ಆತನು ಬಹು ಆದರದಿಂದ ಆ ಸಹದೇವನನ್ನು ಕರೆಯಿಸಿಕೊಂಡು, ಕ್ಷೇಮಸಮಾಚಾರಗಳನ್ನು ವಿಚಾರಿಸಿ ಸತ್ಕರಿಸಿದನು. ಬಳಿಕ ಆತನ ಸಹಾಯವನ್ನು ಪಡೆದು ಮುಂದೆ ಹೊರಟು ಚರ್ಮಣ್ವತೀ (ಚಂಬಲ್) ನದಿಯನ್ನು ದಾಟಿ, ಸಹದೇವ, ಸೇಕ, ಅಪರಸೇಕ, ಎಂಬ ರಾಜರನ್ನು ಜಯಿಸಿ ನರ್ಮದಾತೀರಕ್ಕೆ ಬಂದನು. ಅವಂತೀ (ಮಾಳವ) ದೇಶಾಧೀಶರಾದ ವಿಂದಾನುವಿಂದರು ಆ ಸಹದೇವನನ್ನು ಎದುರಿಸಿ ಕಾದಲು ಯುದ್ಧದಲ್ಲಿ ಅವರನ್ನು ಪರಾಜಿತರನ್ನಾಗಿಮಾಡಿ, ಅವರಿಂದ ಬಹುದ್ರವ್ಯವನ್ನು ಪಡೆದು, ಭೀಷ್ಮಕ, ಕಾಂತಾರಕ, ಹೇರಂಬಕ, ಮಾರುಧ, ನಾಚೀನ, ಮುಂತಾದ ಕಾಡುರಾಜರನ್ನೆಲ್ಲಾ ಜಯಿಸಿ. ಪುಳಿಂದ (ಬಂಡಲಖಂಡ) ರಾಜರನ್ನು ಗೆದ್ದು, ಪಂಪಾಸರೋವರವನ್ನು ನೋಡಿಕೊಂಡು ಕಿಷ್ಕಿಂಧೆಗೆ ಬಂದನು.

ಅಲ್ಲಿ ಮೈಂದ ದ್ವಿವಿದರೆಂಬ ವಾನರ ರಾಜರು ಆಳುತ್ತಿದ್ದರು. ಅವರು ಸಹದೇವನನ್ನು ಮನ್ನಿಸಿ, ತಮ್ಮ ಅರಮನೆಗೆ ಕರೆದುಕೊಂಡುಹೋಗಿ ಒಂದುವಾರದತನಕ ಬಗೆಬಗೆಯ ಸತ್ಕಾರಗಳಿಂದ ಆದರಿಸಿ, ಶ್ರೇಷ್ಠವಾದ ರತ್ನಗಳನ್ನು ಕೊಟ್ಟು ಕಳುಹಿದರು. ಬಳಿಕ ಸಹದೇವನು ಮಾಹಿಷ್ಮತೀ (ಇಂದೂರು) ಪಟ್ಟಣಕ್ಕೆ ಬರಲು ಅಲ್ಲಿಯ ರಾಜನಾದ ನೀಲನು ಪ್ರತಾಪದಿಂದ ಕುಂತೀಪುತ್ರನನ್ನು ಎದುರಿಸಿದನು. ಆತನಿಗೆ ಅಗ್ನಿಯು ಅಳಿಯನಾಗಿದ್ದುದರಿಂದ ಅವನ ಸಹಾಯದಿಂದ ಯುದ್ಧಮಾಡುವ ಆ ರಾಜನೊಂದಿಗೆ ಕಾದಲು ಸಹದೇವನ ಸೇನೆಗೆ ಸಾಧ್ಯವಿಲ್ಲದೆ ಹೋಯಿತು. ಈ ವಿಷಯವನ್ನು ತಿಳಿದು ಆ ಮಾದ್ರೇಯನು ಅಗ್ನಿಸೂಕ್ತದಿಂದ ಯಜ್ಞೇಶ್ವರನನ್ನು ಸ್ತುತಿಸಲು ಆ ದೇವನು ಪ್ರತ್ಯಕ್ಷನಾಗಿ, ಆತನ ಇಷ್ಟದಂತೆ ಯುಧಿಷ್ಠಿರನ ಯಾಗಕ್ಕಾಗಿ ತನ್ನ ಮಾವನಿಂದ ಕಪ್ಪವನ್ನು ಕೊಡಿಸಿದನು. ಸಹದೇವನು ಅಲ್ಲಿಂದ ದಕ್ಷಿಣಕ್ಕೆ ಹೊರಟು ತ್ರಿಪುರ, ಸುರಾಷ್ಟ್ರ, (ಸೂರತ್) ಭೀಷ್ಮಕ, ನಿಷಾದ, ಪಾಂಡ್ರ, ದ್ರಾವಿಡ, ಆಂಧ್ರ, ಕಳಿಂಗ (ರಾಜಮಹೇಂದ್ರ,) ಚೋಳ, ಕೇರಳ, ಮುಂತಾದ ದೇಶಗಳನ್ನು ಹೊಕ್ಕು, ಆಯಾ ದೇಶಾಧೀಶರಿಂದ ಕಪ್ಪಗಳನ್ನು ಪಡೆದು ಅಲ್ಲಿಂದ ಮಣಿಪುರಕ್ಕೆ ಬಂದನು. ಅಲ್ಲಿ ಅರ್ಜುನನ ಮಾವನು ಆಳುತ್ತಿದ್ದನು. ಆತನು ಭೀಮಸೇನನನ್ನು ಕರೆಯಿಸಿಕೊಂಡು ಉಪಚರಿಸಿ ತನ್ನಲ್ಲಿದ್ದ ಉತ್ತಮವಸ್ತುಗಳನ್ನು ಕೊಟ್ಟುಕಳುಹಿದನು. ಭೀಮನು ಅಲ್ಲಿಂದ ಹೊರಟು ತಾಮ್ರಪರ್ಣೀನದಿಯನ್ನು ದಾಟಿ ರಾಮೇಶ್ವರಕ್ಕೆ ಬಂದನು. ಅಲ್ಲಿಂದ ಮುಂದೆ ಲಂಕಾದ್ವೀಪಕ್ಕೆ ತನ್ನ ಸೈನ್ಯವು ಹೋಗಲು ಸಾಧ್ಯವಲ್ಲದಕಾರಣ ಭೀಮಾತ್ಮಜನಾದ ಘಟೋತ್ಕಚನನ್ನು ಧ್ಯಾನಿಸಿದನು. ಕೂಡಲೇ ಆತನು ಪ್ರತ್ಯಕ್ಷನಾಗಿ ಬಂದು, ವಂದಿಸಿ ತನ್ನಿಂದ ಆಗಬೇಕಾದ

ಕಾರ್ಯವೇನಿರುವುದೆಂದು ಬೇಡಲು "ಮಗನೇ, ನೀನು ಲಂಕೆಗೆಹೋಗಿ, ವಿಭೀಷಣದೇವನಿಂದ ಯಜ್ಞಾರ್ಥವಾಗಿ ರತ್ನಗಳನ್ನು ಪಡೆದು ಬಾ" ಎಂದು ಹೇಳಿದನು. ಆತನು ಅಪ್ಪಣೆಯಂತೆ ಹೊರಟು ತನ್ನ ಮಾಯಾ ಬಲದಿಂದ ಸಮುದ್ರಮಧ್ಯದಲ್ಲಿರುವ ಲಂಕಾಪಟ್ಟಣಕ್ಕೆ ಹೋಗಿ, ವಿಭೀಷಣನನ್ನು ಕಂಡು, ಸಹದೇವನ ಸಂದೇಶವನ್ನು ತಿಳಿಸಿದನು. ವೈಷ್ಣವ ಶಿರೋಮಣಿಯಾದ ವಿಭೀಷಣನು ಶ್ರೀಕೃಷ್ಣಾನುಗ್ರಹ ದಿಂದ ಯುಧಿಷ್ಠಿರನು ನಡಿಸುವ ಯಾಗಕ್ಕೆ ಸಹಾಯಮಾಡುವ ಸಂದರ್ಭವು ಒದಗಿತೆಂಬ ಸಂತೋಷದಿಂದ, ಆ ಘಟೋತ್ಕಚನನ್ನು ಮನ್ನಿಸಿ, ತನ್ನ ಭಂಡಾರದಲ್ಲಿದ್ದ ಅನರ್ಘ್ಯ ಮಣಿಭೂಷಣಾದಿಗಳನ್ನು ಕೊಟ್ಟು ಕಳುಹಿದನು. ಭೀಮಪುತ್ರನು ಅವುಗಳನ್ನು ತನ್ನ ಅನುಚರ ರಾದ ರಾಕ್ಷಸರಿಂದ ತೆಗೆಯಿಸಿಕೊಂಡು ಬಂದು, ಸಮುದ್ರ ತೀರದಲ್ಲಿ ಇಳಿದಿದ್ದ ಸಹದೇವನಿಗೆ ಒಪ್ಪಿಸಿ, ಈತನ ಅಪ್ಪಣೆಪಡೆದು ಹೊರಟು ಹೋದನು.

ಈಚೆಗೆ ಶಾಸನ ಮುಂತಾದುವುಗಳ ಆಧಾರದಮೇಲೆ ನಡಿ ಸಿದ ಪರಿಶೋಧನೆಗಳಿಂದ ನಮ್ಮ ಮೈಸೂರು ಸೀಮೆಯಲ್ಲಿ ಮಹಾ ಭಾರತ ಕಥೆಗೆ ಸಂಬಂಧಿಸಿದ ಕೆಲವು ಸ್ಥಳಗಳ ವಿಚಾರವಾಗಿ ಮೈ ಸೂರು ಗೆಜಟಿಯರಿನಲ್ಲಿ ಬರೆದಿರುವದನ್ನು ನಮ್ಮ ವಾಚಕರಿಗೆ ಇಲ್ಲಿ ತಿಳಿಸುವುದು ಅಗತ್ಯವು. (೧) ಮಣಿಪುರ.—ಚಾಮರಾಜನಗರದ ತಾಲ್ಲೂಕಿನಲ್ಲಿದೆ. ಚಿತ್ರಾಂಗದೆಯ ತಂದೆ ಚಿತ್ರವಾಹನನ ರಾಜ ಧಾನಿ. (೨) ಮೈಸೂರು.—(ಮಾಹಿಷ್ಮತೀಪುರ) ಕಾವೇರೀತೀರ. ಅಗ್ನಿಯ ಮಾವನಾದ ನೀಲನ ರಾಜಧಾನಿ. ಮಲೆಯಾಳದ ಸ್ತ್ರೀಯರ ನಡತೆಗಳೆಲ್ಲವೂ ಇಲ್ಲಿವೆ. (೩) ವಿರಾಟನ ಮತ್ಸ್ಯನಗರ,--ನೊರಬದ ತಾಲ್ಲೂಕು ಹಾನಗಲ್ಲು. (೪) ಕುಂತಲದೇಶ.—ಶಿವಮೊಗ್ಗಾ

ಡಿಸ್ಟ್ರಿಕ್ಟ ಕಚ್ಚಟ್ಟೂರು, ಚಂದ್ರಹಾಸನ ರಾಜಧಾನಿ. (೫) ಏಕ ಚಕ್ರಪುರ, ಚಿತ್ರದುರ್ಗದಬಳಿ ರಹಿಮಾರ್ಘಡ, ಬಕಾಸುರನ ಅಡವಿ. (೬) ಚಿತ್ರದುರ್ಗ, ಹಿಡಿಂಬವನ. (೭) ಕಾಮ್ಯಕವನ.—ಶಿವಮೊಗ್ಗ ಡಿಸ್ಟ್ರಿಕ್ಟ ಕವಲೇದುರ್ಗ. (೮) ಹಿರಿಯಮಗಳೂರು.—ಜನಮೇಜಯನು ಸರ್ಪಯಾಗಮಾಡಿದ ಸ್ಥಳ. (೯) ಚಂಪಕನಗರ.—ಗುಬ್ಬಿತಾಲ್ಲೂಕು ಸಂಪಗೆ, ಹಂಸಧ್ವಜನ ರಾಜಧಾನಿ. (ಇವುಗಳ ನಿಶ್ಚಯಾಭಿಪ್ರಾಯವನ್ನು ವಿಚಾರಮಾಡುವ ಕಾರ್ಯವನ್ನು ವಾಚಕರಿಗೆ ವಹಿಸಿ ಮುಂದೆ ಹೊರಡೋಣ.)

ದಿಗ್ವಿಜಯಕ್ಕೆ ಹೊರಟ ನಕುಲನು ಖಾಂಡವಪ್ರಸ್ಥದಿಂದ ಪಶ್ಚಿಮಕ್ಕೆ ಬಹುಸೇನೆಯೊಂದಿಗೆ ಪ್ರಯಾಣಮಾಡಿ, ಕುಮಾರಸ್ವಾಮಿಯು ಪ್ರಿಯನಾದ ರೋಹಿತಕನೆಂಬುವನನ್ನು ಯುದ್ಧದಲ್ಲಿ ಜಯಿಸಿ, ಅವನಿಂದ ಕರವನ್ನು ಪಡೆದು, (ನಾಗಪುರ) ದಶಾರ್ಣ, ಶಿಬಿ, ತ್ರಿಗರ್ತ, (ಲಾಹೂರು), ಅಂಬಷ್ಠ, ಮಾಳವ, ಕರ್ಪಟ, ಮುಂತಾದ ರಾಜ್ಯಗಳಿಗೆ ಹೋಗಿ ಅಲ್ಲಿಯ ರಾಜರನ್ನು ಗೆದ್ದು, ಸಿಂಧು ಮತ್ತು ಸರಸ್ವತೀ ತೀರಗಳಲ್ಲಿದ್ದ ದೊರೆಗಳನ್ನು ಸೋಲಿಸಿ, ಅವರಿಂದ ಕಪ್ಪಗಳನ್ನು ಪಡೆದನು. ಅಲ್ಲಿಂದ ಪಶ್ಚಿಮಕ್ಕೆ ತಿರುಗಿ, ಅಮರಪರ್ವತ, ರಾಮಠ, ಹಾರ, ಹೂಣ, ಮುಂತಾದ ದೇಶಾಧೀಶರಿಂದ ದ್ರವ್ಯಗಳನ್ನು ಪಡೆದು, ಮದ್ರ, (ಪಂಜಾಬ್) ರಾಜ್ಯಕ್ಕೆ ಹೋದನು. ಅಲ್ಲಿಯ ಅರಸನಾದ ಶಲ್ಯನು ಸಹದೇವನ ಸೋದರಮಾವನು. ಅವನು ಈತನನ್ನು ಆದರದಿಂದ ಸತ್ಕರಿಸಿ, ಬಹು ಧನಕನಕಾದಿಗಳನ್ನು ಕೊಟ್ಟು ಕಳುಹಿದನು. ಸಹದೇವನು ಅಲ್ಲಿಂದ ಮುಂದೆ ಹೊರಟು, ಪಲ್ಲವರು, ಮ್ಲೇಛ್ಛರು, ಬರ್ಬರರು, ಕಿರಾತರು, ಯವನರು, ಮುಂತಾದವರನ್ನು ಗೆದ್ದು ಅವರಿಂದ ಕಪ್ಪಗಳನ್ನು ತೆಗೆಬಿಸಿಕೊಂಡು

ಇಂದ್ರಪ್ರಸ್ಥಕ್ಕೆಬಂದು ಅಣ್ಣನಿಗೆ ಒಪ್ಪಿಸಿ, ಆತನ ಮನ್ನಣೆಯನ್ನು ಪಡೆದನು.

ಈಪ್ರಕಾರವಾಗಿ ಭೀಮಾದಿವೀರರು ದಿಗ್ವಿಜಯಮಾಡಿಕೊಂಡು ಬಂದರು. ಅವರು ಚತುಸ್ಸಮುದ್ರಗಳಲ್ಲಿಯೂ ಇರುವ ನೀರನ್ನು ಬಿಟ್ಟು ಸಮಸ್ತ ರತ್ನಗಳನ್ನೂ, ಅಷ್ಟದಿಗ್ಗಜಗಳನ್ನುಳಿದು ಮಿಕ್ಕ ಸಮಸ್ತ ಶ್ರೇಷ್ಠಗಜಗಳನ್ನೂ, ಸೂರ್ಯನ ಸಪ್ತಾಶ್ವಗಳನ್ನುಳಿದು, ಅಪೂರ್ವವಾದ ಸಕಲಾಶ್ವಗಳನ್ನೂ, ದೇವೇಂದ್ರನ ಕಾಮಧೇನುವನ್ನೂ ಈಶ್ವರನ ನಂದಿಯನ್ನೂ, ಉಳಿದು ಉತ್ತಮಗಳಾದ ಸಮಸ್ತ ಗೋವೃಷಭಗಳನ್ನೂ, ಇಂದ್ರಪ್ರಸ್ಥಕ್ಕೆ ತೆಗಿಸಿಕೊಂಡು ಬಂದರೋ ಎಂಬಂತೆ ಇತ್ತು. ಅಂದರೆ ಮುಖ್ಯವಾಗಿ ಲೋಕದಲ್ಲಿರುವ ಶ್ರೇಷ್ಠವಸ್ತುಗಳೊಂದನ್ನೂ ಬಿಟ್ಟುಬರಲಿಲ್ಲವೆಂದು ತಿಳಿಯಬಹುದು.

ಯಾಗಕ್ಕೆಬೇಕಾದ ಧನಸಹಾಯ ಒದಗಿತು. ಇತರ ಸಾಮಗ್ರಿಗಳೂ ಸಿದ್ಧವಾದುವು. ಧರ್ಮರಾಯನು ದ್ವಾರಕೆಯಿಂದ ಶ್ರೀಕೃಷ್ಣನನ್ನು ಕರೆಯಿಸಿಕೊಂಡು, ಮಹರ್ಷಿ ವೇದವ್ಯಾಸರನ್ನು ಧ್ಯಾನಿಸಿದನು. ಕೂಡಲೇ ಅವರು ಪ್ರತ್ಯಕ್ಷರಾಗಿ ಬಂದರು. ಬಳಿಕ ಆ ವ್ಯಾಸರ ಮತ್ತು ಧೌಮ್ಯನೆಂಬ ಪುರೋಹಿತನ ಸಮಕ್ಷದಲ್ಲಿ ಶ್ರೀಕೃಷ್ಣನ ಅಪ್ಪಣೆಯಂತೆ ಮುಂದೆ ನಡಿಸತಕ್ಕ ಯಾಗದ ಕಾರ್ಯಕ್ರಮವನ್ನು ನಿರ್ಣಯಿಸಿದರು. ಉತ್ತಮವಾದ ಪ್ರದೇಶದಲ್ಲಿ ಮೂರುಯೋಜನ ವಿಸ್ತಾರವಾದ ನೆಲವನ್ನು ಅಳತೆಮಾಡಿಸಿ, ಸುತ್ತಲೂ ಕೋಟೆಯಂತೆ ಪ್ರಾಕಾರದ ಗೋಡೆಹಾಕಿಸಿದರು. ಮಧ್ಯರಂಗದಲ್ಲಿ ಯಾಗಮಂಟಪವನ್ನು ಕಟ್ಟಿಸಿ ಅದರಸುತ್ತಲೂ ಬ್ರಾಹ್ಮಣಾದಿ ಸಮಸ್ತ ವರ್ಣದ ಜನರಿಗೂ ಕುಳಿತುಕೊಳ್ಳಲಿಕ್ಕೆ ತಕ್ಕ ಸ್ಥಳಗಳನ್ನು ಏರ್ಪಡಿಸಿದರು. ಸ್ತ್ರೀಯರು ಕುಳಿತುಕೊಳ್ಳಲಿಕ್ಕೆ ಪ್ರತ್ಯೇಕ

ವಾದ ಚಪ್ಪರಗಳು ಹಾಕಲ್ಪಟ್ಟುವು. ಪಾಠಕರು, ಜಟ್ಟಿಗಳು, ತಾರ್ಕಿಕರು, ವಾದ್ಯಗಾರರು, ಮುಂತಾದ ಜನರಿಗೆಲ್ಲಾ ಬೇರೆಬೇರೆ ಸ್ಥಳಗಳು ಏರ್ಪಾಡಾದುವು.

ತುಪ್ಪ, ಎಣ್ಣೆ, ಜೇನುತುಪ್ಪ, ಹಾಲು, ಮೊಸರು, ಇವುಗಳನ್ನು ತುಂಬಿಡಲು ದೊಡ್ಡದೊಡ್ಡ ಗಾರೆಯ ಬಾವಿಗಳು ಸಿದ್ಧವಾದುವು. ಸಕ್ಕರೆ, ಬೆಲ್ಲ, ರವೆ, ಗೋಧಿ, ಸಣ್ಣಕ್ಕಿ, ಹೆಸರು, ಕಡಲೆ, ಎಳ್ಳು ಮುಂತಾದ ಧಾನ್ಯಗಳನ್ನು ದೊಡ್ಡದೊಡ್ಡ ಕಣಜಗಳಲ್ಲಿ ತುಂಬಿಟ್ಟರು. ಪೀತಾಂಬರಗಳು, ಶಾಲುಗಳು, ಬಗೆಬಗೆಯ ಚಿತ್ರವಸ್ತ್ರಗಳು, ಸೀರೆ ಕುಪ್ಪಸಗಳು ಮುಂತಾದುವನ್ನು ತಂದು, ದೊಡ್ಡದೊಡ್ಡ ಮಳಿಗೆಗಳಲ್ಲಿ ಒಟ್ಟಿದ್ದರು. ಶ್ರೀಗಂಧ, ಅಗರು, ಅತ್ತಿ, ಅಶ್ವತ್ಥ ಮುಂತಾದ ಉತ್ತಮತರದ ಸೌದೆಗಳನ್ನು ರಾಶಿಹಾಕಿದರು. ಮಯವಿಶ್ವಕರ್ಮರಿಗೆ ಸಮಾನರಾದ ಶಿಲ್ಪಿಗಳಿಂದ ಯಾಗಮಂಟಪವನ್ನು ಬಹು ಶೃಂಗಾರವಾಗಿ ಕಟ್ಟಿಸಿ, ದರ್ಶನೀಯವಾದ ಅಲಂಕಾರ ಮಾಡಿಸಿದರು. ಯುಧಿಷ್ಠಿರನು ಪ್ರಸಿದ್ಧರಾದ ಮಹರ್ಷಿಗಳನ್ನೆಲ್ಲಾ ಕರೆದುತರಲು ಯೋಗ್ಯರಾದ ಬ್ರಾಹ್ಮಣರನ್ನು ಕಳುಹಿ, ಇತರ ಸಾಮಾನ್ಯ ಮುನಿಗಳಿಗೆಲ್ಲಾ ಲಗ್ನಪತ್ರಿಕೆಗಳನ್ನು ಬರೆಸಿ ಕಳುಹಿದನು. ಸಮಸ್ತರಾಜರನ್ನೂ ಕರೆದುಕೊಂಡು ಬರಲು ದೂತರಮೂಲಕ ಆಮಂತ್ರಣ ಪತ್ರಗಳನ್ನು ಕಳುಹಿದನು. ಪ್ರಮುಖರಾದ ಜನರೆಲ್ಲಾ ಕರೆಯಿಸಲು ತಕ್ಕ ಏರ್ಪಾಡುಗಳೆಲ್ಲಾ ಮಾಡಲ್ಪಟ್ಟುವು. ಒಳದೇಶದ ಪ್ರತಿ ಊರಿನ ಜನರೂ ಬಂದು ಸೇರಬೇಕೆಂದು ಡಂಗೂರಿಯಮೂಲಕ ಪ್ರಸಿದ್ಧಿಪಡಿಸಿದರು. ಉತ್ಸವವನ್ನು ನೋಡಲು ಬರುವವರೆಲ್ಲರೂ ಯಥೋಚಿತವಾದ ಕಾಣಿಕೆಗಳನ್ನು ತೆಗೆದುಕೊಂಡು ಇಂದ್ರಪ್ರಸ್ಥಕ್ಕೆ ಬಂದುಸೇರಿ, ತಮಗಾಗಿ ಏರ್ಪಡಿಸಿದ್ದ ಬಿಡಾರಗಳಲ್ಲಿ ಇಳಿದುಕೊಳ್ಳುತ್ತಿದ್ದರು.

# ನಾಲ್ಕನೆಯ ಸಂಧಿ.

ಸೂ|| ಯುಧಿಷ್ಠಿರನು ರಾಜಸೂಯ ಯಾಗವನ್ನು ಮಾಡಿ ಆಹುತಿಗಳಿಂದ ಸಮಸ್ತ ದೇವತೆಗಳನ್ನೂ, ಭೋಜನ ವಸ್ತ್ರ ದಕ್ಷಿಣಾದಿಗಳಿಂದ ಬ್ರಾಹ್ಮಣಾದಿ ಸಕಲ ವರ್ಣಾಶ್ರಮದ ಜನರನ್ನೂ ತೃಪ್ತಿಪಡಿಸಿದನು.

ಧರ್ಮಜ್ಞನಾದ ಯುಧಿಷ್ಠಿರನ ಆಮಂತ್ರಣವನ್ನು ಅಂಗೀಕರಿಸಿ ನಾನಾ ದಿಕ್ಕುಗಳಿಂದಲೂ ಅನೇಕ ಮಹರ್ಷಿಗಳು ಇಂದ್ರಪ್ರಸ್ಥಕ್ಕೆ ಬಂದು ಸೇರಿದರು. ಅವರಲ್ಲಿ ಕೃಷ್ಣದ್ವೈಪಾಯನನು, ಯಾಜ್ಞವಲ್ಕ್ಯನು, ಭೃಗುವು. ಅಂಗೀರಸನು, ಧನಂಜಯನು, ಕಣ್ವನು, ಜೈಮಿನಿ, ವಸಿಷ್ಠನು, ಗಾರ್ಗ್ಯನು, ಜಾಬಾಲಿ, ನಾರದನು, ಚ್ಯವನನು ಕಶ್ಯಪನು, ಮಾಂಡವ್ಯನು, ಮಾರ್ಕಂಡೇಯನು ಮೊದಲಾದವರೆಲ್ಲಾ ಬಂದಿದ್ದರು. ಇತರ ಮುನಿಜನರೂ, ವೇದಜ್ಞರಾದ ಸದ್ಬ್ರಾಹ್ಮಣರೂ ಅಸಂಖ್ಯಾತರಾಗಿದ್ದರು. ಕ್ಷತ್ರಿಯರಲ್ಲಿಯೂ ನಾನಾದೇಶಾಧೀಶ್ವರರೂ ಬಂದು ನೆರೆದಿದ್ದರು. ಚೇದಿರಾಜನಾದ ಶಿಶುಪಾಲನು ತನ್ನ ಮಗನೊಂದಿಗೆ ಬಹು ಸೈನ್ಯವನ್ನು ತೆಗೆಯಿಸಿಕೊಂಡು ಬರುತ್ತಿದ್ದನು. ಮಾರ್ಗದಲ್ಲಿ ಇವನಿಗೆ ಕೆಲವು ಅಪಶಕುನಗಳಾದರೂ ಇವು ತನ್ನನ್ನೇನು ಮಾಡುವುವು? ಎಂದು ಅಲಕ್ಷ್ಯಮಾಡಿ ಇಂದ್ರಪ್ರಸ್ಥಕ್ಕೆ ಬಂದನು. ಭಗದತ್ತನು, ಪೌಂಡ್ರಕ, ವಾಸುದೇವನು, ದಂತವಕ್ತ್ರನು, ಕುಂತೀಭೋಜನು, ಶಲ್ಯನು, ಧೃಷ್ಟದ್ಯುಮ್ನ ಸಹಿತನಾದ ದ್ರುಪದರಾಯನು, ಇವರಲ್ಲದೆ ಅಂಗ, ವಂಗ, ಕಳಿಂಗಾಂಧ್ರ ದೇಶಾಧಿಪತಿಗಳು, ಚೋಳ ಪಾಂಡ್ಯ ಕೇರಳ ರಾಜರು, ಕಾಶ್ಮೀರ ಕಾಂಭೋಜ ಮಾಲವ ದೇಶದ ದೊರೆಗಳು, ಮುಂತಾದ ರಾಜರೆಲ್ಲಾ ಬಂದರು. ಯುಧಿಷ್ಠಿ

ರನು ಕಳುಹಿದ ದೂತನ ಮೂಲಕ ಯಾಗದ ವೃತ್ತಾಂತವನ್ನು ಕೇಳಿ ಶ್ರೀಕೃಷ್ಣನು ವಸುದೇವನನ್ನು ದ್ವಾರಕೆಯ ರಕ್ಷಣೆಗಾಗಿ ಇರಿಸಿ, ಬಲರಾಮ, ಗದ, ಪ್ರದ್ಯುಮ್ನ, ಸಾಂಬ ಮೊದಲಾದ ಯದುವೀರರನ್ನೆಲ್ಲಾ ಕರೆದುಕೊಂಡು ಬಂದನು. ಯುಧಿಷ್ಠಿರನು ಭೀಷ್ಮಾದಿಬಂಧುಜನರನ್ನೂ, ದ್ರೋಣಾದಿ ಗುರುಗಳನ್ನೂ ಕರೆದುತರಲು ತನ್ನ ತಮ್ಮನಾದ ನಕುಲನನ್ನೇ ಕಳುಹಿದನು. ಆತನು ಹೋಗಿ ವಿನಯವಚನಗಳಿಂದ ಧರ್ಮರಾಯನ ಪ್ರಾರ್ಥನೆಯನ್ನು ತಿಳಿಸಲು, ಭೀಷ್ಮನು ವಿದುರ, ಧೃತರಾಷ್ಟ್ರ, ದುರ್ಯೋಧನ, ಕರ್ಣ, ಶಕುನಿಗಳೊಂದಿಗೆ ದ್ರೋಣ ಕೃಪಾಶ್ವತ್ಥಾಮಾದಿ ಗುರುಜನ ಸಹಿತನಾಗಿ ಇಂದ್ರಪ್ರಸ್ಥಕ್ಕೆ ಬಂದುಸೇರಿ, ಯುಧಿಷ್ಠಿರನ ಸತ್ಕಾರಗಳನ್ನು ಪಡೆದನು. ಧರ್ಮರಾಯನು ರಾಜಧಾನಿಗೆ ದಯಮಾಡಿಸಿದ ಮುನಿಜನರನ್ನೆಲ್ಲಾ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಅವರವರಿಗೆ ಉಚಿತಗಳಾದ ಬಿಡಾರಗಳಲ್ಲಿ ಇಳಿಸಿದನು. ರಾಜವರ್ಗದವರನ್ನೂ ಇತರ ಮಹನೀಯರನ್ನೂ ತಕ್ಕ ಮರ್ಯಾದೆಗಳಿಂದ ಬರಮಾಡಿಕೊಂಡನು. ಆತನು ಯಾಗಕ್ಕೆ ಬಂದ ತನ್ನ ಸಂಬಂಧಿಗಳಲ್ಲಿ ಹಿರಿಯರನ್ನು ವಂದಿಸುತ್ತಾ, ಕಿರಿಯರನ್ನು ಹರಸುತ್ತಾ, ಸಮಾನರನ್ನು ಆಲಿಂಗಿಸಿಕೊಳ್ಳುತ್ತಾ ಅವರವರಿಗೆ ತಕ್ಕಹಾಗೆ ಕುಶಲ ಪ್ರಶ್ನೆಗಳನ್ನು ಮಾಡಿ ಮನ್ನಿಸಿದನು. ಉಳಿದ ರಾಜರನ್ನೂ, ಪ್ರಮುಖರಾದ ಪುರಜನರನ್ನೂ ಸತ್ಕರಿಸಿದನು. ಕೆಲವರನ್ನು ಕಟಾಕ್ಷಿಸಿಕೊಂಡು ತ್ತಾ, ಹಸನ್ಮುಖನಾಗಿ ಕೆಲವರನ್ನು ಕಣ್ಣಸನ್ನೆಯಿಂದ ಮನ್ನಿಸುತ್ತಾ, ಕೆಲವರಿಗೆ ಕೈಹಿಡಿದು ಗೌರವಿಸುತ್ತಾ. ಯಾರಿಗೂ ಕೊರತೆಯುಂಟಾಗದಂತೆ ಅವರವರ ಯೋಗ್ಯತಾನುಸಾರವಾಗಿ ಉಪಚರಿಸುತ್ತಿದ್ದನು.

ಬಳಿಕ ಆ ಯುಧಿಷ್ಠಿರನು ಕುರುಪಿತಾಮಹನಾದ ಭೀಷ್ಮನಿಗೆ ವಂದಿಸಿ ವಿನಯದಿಂದ ಇಂತೆಂದನು.

ಯುಧಿ.—ಅಜ್ಜಯ್ಯಾ, ನಾನಾದರೋ ಇನ್ನೂ ಹುಡುಗನು; ಉದ್ದೇಶಿಸಿರುವ ಯಾಗಸಂಕಲ್ಪವೋ ಅಸಾಧ್ಯಪ್ರಯತ್ನವು. ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ಸಮಸ್ತದೇಶಗಳಿಂದ ಬಂದಿರುವ ರಾಜಾಧಿರಾಜರುಗಳೂ, ನಾನಾ ದಿಕ್ಕುಗಳಿಂದ ಬಂದಿರುವ ಅಸಂಖ್ಯಾತರಾದ ಜನರೂ ಈ ಪಟ್ಟಣದಲ್ಲಿ ಸೇರಿರುವರು. ಇವರನ್ನು ಉಚಿತರೀತಿಯಿಂದ ಸತ್ಕರಿಸುವುದರಲ್ಲಿ ಯಾವಹೆಚ್ಚುಕುಂದುಗಳೂ ಉಂಟಾಗದಹಾಗೆ ಹಿರಿಯರಾದ ನೀವೂ, ಗುರುಗಳಾದ ದ್ರೋಣಾಚಾರ್ಯರೂ ಯಜಮಾನರಾಗಿ ನಿಂತು, ವಿಚಾರಿಸಿಕೊಳ್ಳುತ್ತಾ ನಮಗೆ ಸರಿಯಾದ ಉಪದೇಶಗಳನ್ನು ಹೇಳಿ, ಗೌರವವನ್ನು ಕಾಪಾಡಬೇಕೆಂದು ಬೇಡುತ್ತೇನೆ.

ಭೀಷ್ಮ.—ಎಲೈಯುಧಿಷ್ಠಿರನೇ, ವೃದ್ಧನಾದ ನಾನು ಏನು ಮಾಡಬಲ್ಲೆನು? ಗುರುಗಳಾದ ದ್ರೋಣಾಚಾರ್ಯರು ತಾನೇ ಮಾಡತಕ್ಕುದೇನು? ನೀನು ಸಾರಾಸಾರ ವಿಚಾರಜ್ಞನು. ನಿನ್ನ ತಮ್ಮಂದಿರು ಪ್ರಾಜ್ಞರಾಗಿಯೂ, ಸಹಜ ಸೌಜನ್ಯಗುಣಯುಕ್ತರಾಗಿಯೂ, ವಿಕ್ರಮಶಾಲಿಗಳಾಗಿಯೂ ಇರುವರು. ಆದುದರಿಂದ ಬುದ್ಧಿಶಾಲಿಯಾದ ನೀನು ಸರಿಯಾಗಿ ನೋಡಿಕೊಂಡರೆ ನಿನ್ನ ಸಂಕಲ್ಪದಂತೆ ರಾಜಸೂಯಯಾಗವು ನಿರ್ವಿಘ್ನವಾಗಿ ನೆರವೇರುವುದರಲ್ಲಿ ಸಂಶಯವಿಲ್ಲವು. ಇದೂ ಅಲ್ಲದೆ ಯಜ್ಞಕರ್ತೃವಾಗಿಯೂ, ಯಜ್ಞಭೋಕ್ತೃವಾಗಿಯೂ, ಸಕಲ ಜಗತ್ತುಗಳ ಸೃಷ್ಟಿ ಸ್ಥಿತಿ ವಿಲಯಗಳಿಗೆ ಕಾರಣನಾಗಿಯೂ ಪರಮಾತ್ಮಸ್ವರೂಪನಾಗಿಯೂ ಇರುವ ಶ್ರೀಕೃಷ್ಣಸ್ವಾಮಿಯನ್ನು ನೀವು ನಂಬಿರುವುದರಿಂದ ಆತನೇ ನಿಮ್ಮವನಾಗಿ ಯಾವಕೊರತೆಯೂ ಬಾರದಂತೆ ನಿಮ್ಮ ಕಾರ್ಯವನ್ನು ನೆರವೇರಿಸುವನು. ಈ ಪರಬ್ರಹ್ಮನು ಚರಾಚರಾತ್ಮಕವಾದ ಈ ಜಗತ್ತಿನಲ್ಲೆಲ್ಲಾ ವ್ಯಾಪಿಸಿ

ಕೊಂಡು, ಎಲ್ಲರಿಂದಲೂ ತಕ್ಕ ಕಾರ್ಯಗಳನ್ನು ಮಾಡಿಸುತ್ತಾ ಇರುವನು. ಈ ಜಗದ್ವ್ಯಾಪಾರವೆಲ್ಲಾ ಈ ಮಹಾತ್ಮನ ಲೀಲೆಯಲ್ಲದೆ ಬೇರೆಇಲ್ಲ. ನೀನು ಮಹಾಮಹಿಮನಾದ ಈ ಪರಮಾತ್ಮನನ್ನೇ ದೃಢವಾಗಿನಂಬಿ, ಶಕ್ತಿವಂಚನೆಯಿಲ್ಲದೆ ಕಾರ್ಯಮಾಡಿ, ನಿಷ್ಕಾಮ್ಯಬುದ್ಧಿಯಿಂದ ಅದರ ಫಲವನ್ನು ಈತನಿಗೇನೇ ಅರ್ಪಿಸು. ಈ ಪರಮಾತ್ಮನ ಕೃಪಾಕಟಾಕ್ಷದಿಂದನಿನ್ನ ಕಾರ್ಯವುಕೈಗೂಡುವುದು. ಚಿಂತಿಸಬೇಡ.

ಆಗ ಯುಧಿಷ್ಠಿರನು ಶ್ರೀಕೃಷ್ಣನ ಬಳಿಗೆ ಬಂದು ಪೂಜ್ಯಬುದ್ಧಿಯಿಂದ ನಮಸ್ಕರಿಸಿ ಇಂತೆಂದನು.

ಯುಧಿ.—ಜಗದೀಶನೇ, ನಿನ್ನ ಅನುಗ್ರಹದಿಂದ ಈ ಪೃಥ್ವಿಯೆಲ್ಲಾ ನನ್ನ ವಶವಾದಂತೆ ಆಯಿತು. ನಿನ್ನ ದಯೆಯಿಂದಲೇ ಅಪರಿಮಿತವಾದ ದ್ರವ್ಯವು ಸಂಗ್ರಹಿಸಲ್ಪಟ್ಟಿತು. ನಿನ್ನ ಅನುಜ್ಞೆಯಂತೆ ಇದನ್ನು ವಿಧಿವತ್ತಾಗಿ ಬ್ರಾಹ್ಮಣರಲ್ಲಿಯೂ, ಅಗ್ನಿದೇವನ ಮುಖವಾಗಿ ದೇವತೆಗಳಲ್ಲಿಯೂ ವಿನಿಯೋಗಿಸಬೇಕೆಂದು ಅಪೇಕ್ಷಿಸುತ್ತೇನೆ. ಸ್ವಾಮಿಾ, ನಿನ್ನೊಡನೆ ನನ್ನ ಸಹೋದರರಿಂದ ಕೂಡಿ ಯಾಗಮಾಡಬೇಕೆಂಬ ಸಂಕಲ್ಪವಿದೆ. ನನ್ನ ಪ್ರಾರ್ಥನೆಯನ್ನು ಲಾಲಿಸಿ, ಯಜ್ಞವನ್ನು ನಡಿಸಿ, ನಮ್ಮನ್ನು ಧನ್ಯರೆನಿಸಬೇಕು. ನನ್ನ ತಂದೆಗೆ ಇಂದ್ರಲೋಕದಲ್ಲಿ ಉತ್ತಮಪದವಿಯು ಲಭಿಸಬೇಕೆಂಬ ಉದ್ದೇಶದಿಂದಲೇ ಈ ಯಾಗಕ್ಕೆ ಸಂಕಲ್ಪಿಸಿದರೂ ಸರ್ವತಂತ್ರ ಸ್ವತಂತ್ರನಾಗಿರುವ ನಿನ್ನ ಪ್ರೇರಣೆಯಿಂದಲೇ ನನಗೆ ಈ ಬುದ್ಧಿಯು ಹುಟ್ಟಿರುವುದರಿಂದ ನಿನ್ನ ಪ್ರೀತ್ಯರ್ಥವಾಗಿಯೇ ಈ ಯಾಗಮಾಡಲು ಶಕ್ತಿಯುಂಟಾಗುವಂತೆ ನನ್ನಲ್ಲಿ ಅನುಗ್ರಹಿಸು.

ಶ್ರೀಕೃಷ್ಣ.—ಎಲೈ ಸಾರ್ವಭೌಮನೇ, ರಾಜಸೂಯಯಾಗವನ್ನು ನಡಿಸಲಿಕ್ಕೆ ನೀನೇ ಸಮರ್ಥನಾಗಿದ್ದೀಯೆ. ನಿನಗೆ

ಬೇಕಾದ ಸಹಾಯಗಳೆಲ್ಲವೂ ದೊರೆತಿವೆ. ಸ್ಥಿರಸಂಕಲ್ಪನಾಗಿ ಯಾಗಕಾರ್ಯದಲ್ಲಿ ತೊಡಗು. ನನಗೆ ಯಾವ ಕಾರ್ಯವನ್ನು ನಿಯಮಿಸುವೆಯೋ ಅದನ್ನು ಮಾಡುವುದಕ್ಕೆ ನಾನು ಸಿದ್ಧನಾಗಿಯೇ ಇದ್ದೇನೆ.

ಯುಧಿ.—ಸ್ವಾಮಿಾ, ಅಜ್ಞನಾಗಿ ಪಾದಸೇವಕನಾದ ನಾನೆಲ್ಲಿ? ಸರ್ವಾಂತರ್ಯಾಮಿಯಾಗಿಯೂ, ಸರ್ವನಿಯಾಮಕನಾಗಿಯೂ, ಸರ್ವಜ್ಞನಾಗಿಯೂ ಇರುವ ನೀನೆಲ್ಲಿ? ನಿನಗೆ ಆಜ್ಞಾಪಿಸಲಿಕ್ಕೆ ನಾನು ಶಕ್ತನೇ? ನೀನೂ, ಆರ್ಯನಾದ ಭೀಷ್ಮನೂ ಯಾವ ಯಾವಕಾರ್ಯಕ್ಕೆ ಯಾರು ಯಾರನ್ನು ನಿಯಮಿಸುವಿರೋ ಅದರಂತೆ ಮಾಡಲು ಎಲ್ಲರೂ ಒಪ್ಪುವರು. ನೀವುಗಳೇ ಯೋಚಿಸಿ ನಿರ್ಣಯಿಸಬಹುದು.

ಬಳಿಕ ಯುಧಿಷ್ಠಿರನ ಪ್ರಾರ್ಥನೆಯಂತೆ ಶ್ರೀಕೃಷ್ಣಾನುಮತದಿಂದ ಭೀಷ್ಮ ದ್ರೋಣರಿಬ್ಬರೂ ಸಮಸ್ತ ಕಾರ್ಯಗಳನ್ನೂ ಮೇಲುವಿಚಾರಣೆ ನೋಡಿಕೊಳ್ಳುವುದಕ್ಕೆ ಸಮ್ಮತಿಸಿದರು. ಶ್ರೀಕೃಷ್ಣನು ಬ್ರಾಹ್ಮಣರ ಪಾದಪ್ರಕ್ಷಾಳನೆಮಾಡಿ, ಅವರನ್ನು ಸತ್ಕರಿಸುವ ಕೆಲಸವು ನನ್ನ ಪಾಲಿಗೆ ಇರಲೆಂದು ಒಪ್ಪಿಕೊಂಡನು. ಧೃತರಾಷ್ಟ್ರ, ಬಾಹ್ಲಿಕ, ಬೃಹದ್ರಥ ಸೋಮದತ್ತ, ಈ ನಾಲ್ವರೂ ಯಜ್ಞಮಂಟಪದ ನಾಲ್ಕುದಿಕ್ಕುಗಳಲ್ಲಿಯೂ ಕುಳಿತು, ಯಾವ ಆಕ್ಷೇಪಕ್ಕೂ, ಗದ್ದಲಕ್ಕೂ ಅವಕಾಶವಿಲ್ಲದಂತೆ ನೋಡಿಕೊಳ್ಳಲು ಒಪ್ಪಿದರು. ಇತರ ಕೆಲಸಗಳನ್ನು ಮಾಡಲು ಮುಂದೆ ಹೇಳುವಂತೆ ಜನರನ್ನು ನಿಯಾಮಕ ಮಾಡಿದರು.

| | |
|---|---|
| ೧. ಯಜ್ಞಕ್ಕೆ ಬೇಕಾದ ಸಾಮಗ್ರಿಗಳನ್ನು ಆಯಾ ಕಾಲಗಳಲ್ಲಿ ತಂದು ಒದಗಿಸುವುದಕ್ಕೆ | ಧೌಮ್ಯನು, |
| ೨. ಸಂತರ್ಪಣೆಯ ಅಡಿಗೆಗಳನ್ನು ಸರಿಯಾಗಿ ವಿಚಾರಿಸಿಕೊಂಡು ಬಡಿಸಲು ಸಿದ್ಧಪಡಿಸುವ ಕೆಲಸಕ್ಕೆ .... | ಯುಯುತ್ಸು |

| | | |
|---|---|---|
| ೩. | ಋಷಿಗಳಿಗೂ, ಬ್ರಾಹ್ಮಣರಿಗೂ ಆಹಾರಪಾನೀಯಗಳನ್ನು ಒದಗಿಸಿಕೊಡುವ ಕೆಲಸ | ಸಹದೇವನು. |
| ೪. | ರಾಜರುಗಳಿಗೂ, ಅವರ ಪರಿಜನರಿಗೂ ತಕ್ಕ ಭೋಜನಸಾಮಗ್ರಿಗಳನ್ನು ಒದಗಿಸಿ ಉಪಚರಿಸುವ ಕೆಲಸ .... | ಸಂಜಯನು. |
| ೫. | ಬ್ರಾಹ್ಮಣೇತರರ ಸಂತರ್ಪಣೆಯ ವಿಚಾರಣೆಗೆ | ಕರ್ಣನು. |
| ೬. | ಎಲ್ಲರನ್ನೂ ಅವರವರ ತಾರತಮ್ಯಾನುಗುಣವಾಗಿ ಊಟಕ್ಕೆ ತಕ್ಕ ಸ್ಥಾನಗಳಲ್ಲಿ ಕುಳ್ಳಿರಿಸಿ ಸರಿಯಾಗಿ ಬಡಿಸುವ ವಿಚಾರಣೆ | ಸಾತ್ಯಕಿ. |
| ೭. | ಊಟವಾದಮೇಲೆ ಎಂಜಲೆಲೆಗಳನ್ನು ತೆಗಿಸಿ ಭೂಶುದ್ಧಿಮಾಡಿಸುವ ಕೆಲಸ | ವಿಕರ್ಣ. |
| ೮. | ಊಟಮಾಡಿದ ಜನರಿಗೆ ಗಂಧ ಪುಷ್ಪ ತಾಂಬೂಲಗಳನ್ನು ಕೊಡಿಸುವ ಕೆಲಸ | ದುಶ್ಶಾಸನ. |
| ೯. | ಋಷಿಗಳಿಗೂ ಬ್ರಾಹ್ಮಣರಿಗೂ ದಕ್ಷಿಣೆ ಕೊಡುವ ಕೆಲಸ | ಅಶ್ವತ್ಥಾಮ |
| ೧೦. | ರತ್ನಗಳನ್ನೂ, ಚಿನ್ನ ಬೆಳ್ಳಿ ಮೊದಲಾದ ನಾಣ್ಯಗಳನ್ನೂ ಭಂಡಾರದಿಂದ ತರಿಸಿ ವಿನಿಯೋಗಿಸುವ ಕೆಲಸ | ಕೃಪಾಚಾರ್ಯ |
| ೧೧. | ಹಾಲು, ಮೊಸರು, ತುಪ್ಪ, ಸಕ್ಕರೆ, ರವೆ, ಕಸ್ತೂರಿ ಮುಂತಾದುವುಗಳನ್ನು ಕೊಡಿಸುವ ಅಧಿಕಾರವು | ವಿದುರನು. |
| ೧೨. | ರಾಜವರ್ಗಕ್ಕೆ ಆನೆ, ಕುದುರೆ, ರಥಗಳು, ವಸ್ತ್ರಾಭರಣ ಮುಂತಾದುವುಗಳನ್ನು ಒದಗಿಸಿ ಕೊಡುವಕೆಲಸ | ಶಕುನಿ. |
| ೧೩. | ಸ್ತ್ರೀಜನರ ವಸ್ತ್ರಾಭರಣ ಗಂಧಮಾಲ್ಯಾದಿಗಳನ್ನು ತಂದೊದಗಿಸುವ ಕೆಲಸ | ಶಲ್ಯನು. |

| | |
|---|---|
| ೧೪. ರಾಜರಿಂದಲೂ, ಇತರಜನರಿಂದಲೂ ಬರತಕ್ಕ ಕಾಣಿಕೆ ಕಪ್ಪಗಳನ್ನು ಭಂಡಾರಕ್ಕೆ ಸೇರಿಸಿ, ಅವುಗಳನ್ನು ಅವಶ್ಯಕಕ್ಕೆ ತಕ್ಕಂತೆ ವಿನಿಯೋಗಿಸಲು ಕೊಡುವ ಕೆಲಸಕ್ಕೆ | ದುರ್ಯೋಧನ |
| ೧೫. ರಾಜಧಾನಿಗೆ ಬಂದ ಜನರಿಗೆಲ್ಲಾ ಅವರವರ ಅಂತಸ್ತಿಗೆ ತಕ್ಕಂತೆ ಅನುಕೂಲವಾದ ಮನೆಗಳನ್ನು ಏರ್ಪಡಿಸಿ, ಅವರು ಸಂತೋಷದಿಂದ ಕಾಲಕ್ಷೇಪಮಾಡಲು ತಕ್ಕ ಆಟಪಾಟಗಳನ್ನು ಕಲ್ಪಿಸುವುದು | ನಕುಲನು. |
| ೧೬. ರಾಜರ ಸಂಗಡ ಬಂದಿರುವ ಯೋಧರಿಗೂ ಸೈನಿಕರಿಗೂ ತಕ್ಕ ಅನುಕೂಲತೆಗಳನ್ನು ಕಲ್ಪಿಸುವುದು. | ದ್ರುಪದನು. |
| ೧೭. ಮಹಾರಾಜರುಗಳೊಂದಿಗೆ ಬಂದಿದ್ದ ರಾಣಿವಾಸದ ಜನರಿಗೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿಕೊಡುವುದು | ಕುಂತಿ ಗಾಂಧಾರಿ ಮತ್ತು ಅವರ ಸೊಸೆಯರು |
| ೧೮. ಮುನಿಜನಕ್ಕೆ ಆಗತ್ಯವಾದ ಸಾಮಗ್ರಿಗಳನ್ನು ಒದಗಿಸುವುದು | ಶಾಂಡಿಲ್ಯ ನಾರದರು. |
| ೧೯. ಮೂಕಾಂಧಬಧಿರಾದಿ ಅಂಗಹೀನರನ್ನು ಸತ್ಕರಿಸುವುದು | ಜಯದ್ರಥ. |
| ೨೦. ಜನರ ಆರೋಗ್ಯರಕ್ಷಣೆ ಮತ್ತು ವ್ಯಾಧಿಗ್ರಸ್ತರ ಚಿಕಿತ್ಸೆಗೆ .... | ಧನ್ವಂತ್ರಿ. |

ಹೀಗೆ ಬೇರೆಬೇರೆ ಕೆಲಸಗಳನ್ನು ನಿರ್ವಹಿಸಲು ತಕ್ಕ ಜನರನ್ನೂ ಮುಖ್ಯಾಧ್ಯಕ್ಷರನ್ನೂ ಏರ್ಪಡಿಸಿ, ಅವರ ಕೈಕೆಳಗೆ ಉಪಾಧ್ಯಕ್ಷರನ್ನೂ, ಅವರ ಸಹಾಯಕ್ಕೆ ಬಹುಮಂದಿ ಕೈಕೆಳಗಿನ ಉದ್ಯೋಗಸ್ಥ

ರನ್ನೂ ನಿಯಮಿಸಿ, ನಿರಾಕ್ಷೇಪವಾಗಿ ಎಲ್ಲಾ ಕೆಲಸಗಳೂ ನಡೆಯು ವಂತೆ ಏರ್ಪಾಡು ಮಾಡಿಸಿದರು.

ದೇವತಾಕಾರ್ಯವನ್ನು ನಡಿಸುವ ಪ್ರಾರಂಭದಲ್ಲಿ ದೊಡ್ಡ ಸಂತರ್ಪಣೆ ಮಾಡುವ ಸಂಪ್ರದಾಯವು ಪುರಾತನಾರ್ಯರ ಕಾಲದಿಂ ದಲೂ ರೂಢಿಯಾಗಿರುವುದಷ್ಟೆ! ಈ ಸಮಾರಾಧನೆಯನ್ನು ಯುಧಿ ಷ್ಠಿರನು ಬಹು ಸಂಭ್ರಮದಿಂದ ಮಾಡಿಸಿದನು. ಉತ್ಸವಕ್ಕೆ ದಯ ಮಾಡಿಸಿದ್ದ ಮಹಾಜನರಿಗೆಲ್ಲಾ ಭಾರಿಯ ಔತಣವು ನಡೆಯಿತು. ಲಕ್ಷಾಂತರ ಜನರು ಬಂದು ಊಟಕ್ಕೆ ಸಾಲುಸಾಲಾಗಿ ಕುಳಿತಿದ್ದರು. ಪ್ರತಿಯೊಂದು ಪಙ್ತಿಯವರಿಗೂ ಕ್ರಮವಾದ ಭಕ್ಷ್ಯಭೋಜ್ಯಗಳು ಬಡಿಸಲ್ಪಡುತ್ತಿದ್ದುವು. ರಾಜವರ್ಗದಲ್ಲಿ ಕುಳಿತಿದ್ದವರಿಗೆ ಬಡಿಸಲು ಪಟ್ಟಮಹಿಷಿಯಾದ ದ್ರೌಪದಿಯೇ ನಿಂತಳು. ಆಕೆಯು ಒಂದು ಕೈ ಯಲ್ಲಿ ತುಪ್ಪದ ಪಾತ್ರೆಯನ್ನೂ, ಒಂದುಕೈಯಲ್ಲಿ ಸಕ್ಕರೆಯ ತಟ್ಟೆ ಯನ್ನೂ ತೆಗೆದುಕೊಂಡು ಬಡಿಸುತ್ತಿರುವಾಗ ಕೌರವರು ಊಟಕ್ಕೆ ಕುಳಿತಿದ್ದ ಕಡೆಗೆ ಬಂದಳು. ಅವಳನ್ನು ನೋಡಿ ದುರ್ಯೋಧನನು ಹಾಸ್ಯೋಕ್ತಿಗಳಿಂದ ಇಂತೆಂದನು.

ಅತ್ತಿಗೇ, ಬಡಿಸುವುದರಲ್ಲಿ ಬಹಳ ಬಳಲಿರುವಂತೆ ಕಾಣುತ್ತಿದೆ. ಐದು ಆನೆಗಳ ಕೈಗೆ ಸಿಕ್ಕಿದ ಹುಲ್ಲೆಯಂತೆ ಐವರು ಗಂಡಂದಿರ ಸೇವೆ ಯಲ್ಲಿ ಸಿಕ್ಕಿ ಆಯಾಸಗೊಂಡಿರುವ ನಿನಗೆ ಈ ಬಳಲಿಕೆಯು ಸಹಜವೇ ಸರಿ. ನೀನು ಮತ್ತಾರನ್ನಾದರೂ ಈ ಕೆಲಸಕ್ಕೆ ಬಿಟ್ಟು ಸ್ವಲ್ಪ ವಿ ಶ್ರಾಂತಿ ತೆಗೆದುಕೊಳ್ಳಬಾರದೆ?

ಹೀಗೆ ದುರ್ಯೋಧನನು ಹೇಳುವಷ್ಟರಲ್ಲಿ ಅವನ ತಮ್ಮಂ ದಿರು ನನಗೆ ತುಪ್ಪ, ನನಗೆ ಸಕ್ಕರೆ, ನನಗೆ ಮಂಡಿಗೆ, ನನಗೆ ಗೂ ಳೂರಿಗೆ, ಎಂದು ಒಂದೇಸಾರಿ ದೊಡ್ಡಧ್ವನಿಯಿಂದ ಕೂಗಿಕೊಳ್ಳು

ತ್ತಿದ್ದರು. ಈ ಗದ್ದಲದಲ್ಲಿ ದಿಕ್ಕುತೋರದೆ ಅಬಲೆಯಾದ ಆ ದ್ರೌಪದಿಯು ಕಕ್ಕುಬಿಕ್ಕಾಗಿ ಸುಮ್ಮನೆ ನಿಂತುಕೊಂಡಳು. ಅಷ್ಟರಲ್ಲಿ ಅಕಸ್ಮಾತ್ತಾಗಿ ಆಕೆಯು ನಿರಿಸಡಿಲಿ ಸೀರೆಯು ಸೆರಗು ಜಾರಿತು. ಪತಿವ್ರತೆಯಾದ ಆ ರಾಣಿಯು ಅಂತಹ ಬಿಕ್ಕಟ್ಟಿನ ಪ್ರಸಂಗದಲ್ಲಿ ಏನು ಮಾಡಲಾದೀತು? ಆಗಲಾಸಾಧ್ವಿಯು ಭಕ್ತಪರಾಧೀನನಾದ ಪರಮಾತ್ಮನನ್ನು ಕುರಿತು ನಿಶ್ಚಲಭಕ್ತಿಯಿಂದ "ಎಲೈ ಆಪದ್ಬಾಂಧವನೇ, ಶತ್ರುಗಳೆದುರಿಗೆ ಮಾನಹೋಗುವ ಹೊತ್ತುಬಂದಿದೆ. ನನ್ನ ಪಾತಿವ್ರತ್ಯವನ್ನು ರಕ್ಷಿಸಿ ಉದ್ಧರಿಸು. ಸ್ವಾಮೀ." ಎಂದು ತನ್ನ ಮನಸ್ಸಿನಲ್ಲಿಯೇ ಧ್ಯಾನಿಸಿದಳು. ಕೂಡಲೇ ಶ್ರೀಕೃಷ್ಣನು ಪ್ರಸನ್ನನಾಗಿ ಆಕಾಲಕ್ಕೆ ಅನುಕೂಲಿಸುವಂತೆ ಆಕೆಗೆ ಮತ್ತೆರಡು ಕೈಗಳನ್ನು ಅನುಗ್ರಹಿಸಿದನು. ಒಡನೆ ಆಕೆಯು ಭಗವತ್ಕೃಪೆಯಿಂದ ಬಂದ ಹೊಸ ಕೈಗಳಿಂದ ನಿರಿಯನ್ನು ಸರಿಯಾಗಿ ಬಿಗಿದುಕಟ್ಟಿಕೊಂಡು, ಮೊದಲಿನ ಕೈಗಳಿಂದ ಸಾಲಿನಮೇಲೆ ಬಡಿಸುತ್ತಾ ಹೊರಟಳು. ಈ ಕೆಲಸವು ತೀರಿದ ಕೂಡಲೇ ಹೊಸಕೈಗಳು ಮಾಯವಾದುವು ಸ್ವಾಮಿಯ ಅನುಗ್ರಹವು ಅಷ್ಟರಿಂದಲೇ ತೀರಲಿಲ್ಲ. ಸಾಲಿನಮೇಲೆ ಕುಳಿತಿದ್ದ ಪ್ರತಿಒಬ್ಬ ರಾಜನ ಎಲೆಯಮುಂದೆಯೂ ಒಂದೊಂದು ದ್ರೌಪದೀ ಮೂರ್ತಿಯು ನಿಂತುಕೊಂಡು ಬೇಕಾದ ಪದಾರ್ಥಗಳನ್ನು ಎಲೆಗಳಲ್ಲಿ ಯಥೇಷ್ಟವಾಗಿ ಬಡಿಸುತ್ತಾ ಇದ್ದಳು. ಶ್ರೀಕೃಷ್ಣನ ಮಹಿಮೆಯಿಂದ ಅವರೆಲ್ಲರಿಗೂ ಬುದ್ಧಿಭ್ರಮಣೆಯುಂಟಾಯಿತು. ಎಲೆಗಳ ತುಂಬ ಭಕ್ಷ್ಯಭೋಜ್ಯಗಳು, ಎದುರಿಗೆ ಜಗನ್ಮೋಹಿನಿಯಾದ ದ್ರೌಪದಿ, ಹೊಟ್ಟೆಯತುಂಬ ಉಂಡಿರುವುದರಿಂದ ಮುಂದೆ ತಿನ್ನಲಿಕ್ಕೆ ಎಡೆಯಿಲ್ಲ. ಇವುಗಳಿಂದ ಆ ರಾಜರಿಗೆಲ್ಲಾ ದಿಗ್ಭ್ರಮೆಯಾಗಿ, ಕರ್ತವ್ಯವೇ ತೋರದೆ, ಆ ಸಾಧ್ವಿಯ ಮುಖವನ್ನೇ ನೋಡುತ್ತಾ ಕುಳಿತರು.

ಪತಿವ್ರತಾ ಶಿರೋಮಣಿಯಾದ ದ್ರೌಪದಿಯನ್ನು ದುರಾತ್ಮರಾದ ದುರ್ಯೋಧನಾದಿಗಳು ಅಪಹಾಸ್ಯಮಾಡಿದರೆಂದು ಕೇಳಿ, ಮಹಾಪರಾಕ್ರಮಿಯಾದ ಭೀಮಸೇನನು ತತ್ಕ್ಷಣವೇ ಅಲ್ಲಿಗೆ ಬಂದು ನಿಂತನು. ಆ ವೀರನ ಸ್ಥಿತಿಯನ್ನು ನೋಡಿದಕೂಡಲೇ ಆ ರಾಜಕುಮಾರರಿಗೆ ಗಾಬರಿಯಾಯಿತು. ಭೀಮನು ಅವರನ್ನು ನೋಡಿ "ರಾಜರುಗಳಿರಾ! ಹಾಸ್ಯಮಾಡಿ ಎಲೆಗಳ ತುಂಬ ಬಡಿಸಿಕೊಂಡುದು ದೊಡ್ಡದಲ್ಲ. ಬಡಿಸಿದುದನ್ನು ಪೂರ್ತಿಯಾಗಿ ತಿನ್ನದಿದ್ದರೆ ನಿಮ್ಮ ಪೌರುಷವು ವ್ಯರ್ಥವೆನಿಸುವುದು. ಪದಾರ್ಥವು ನಷ್ಟವಾಗುವುದೆಂಬ ಚಿಂತೆಯು ನನಗಿಲ್ಲ. ನಿಮ್ಮ ಕುಹಕವಿದ್ಯೆಗೆ ತಕ್ಕ ಪ್ರಾಯಶ್ಚಿತ್ತಮಾಡಿ, ನಿಮಗೆ ಬುದ್ಧಿ ಕಲಿಸಬೇಕಾಗಿದೆ. ನಿಮ್ಮ ಎಲೆಗಳಲ್ಲಿ ಬಡಿಸಿಕೊಂಡಿರುವುದನ್ನೆಲ್ಲಾ ನೀವು ತಿನ್ನಲೇಬೇಕು. ಹಾಗೆ ಮಾಡದೆ, ಎಲೆಗಳಲ್ಲಿ ಏನಾದರೂ ಬಿಟ್ಟುಬಿಟ್ಟರೆ ಅದನ್ನು ನಿಮ್ಮ ತಲೆಗೆ ಕಟ್ಟಿ, ಮೆರವಣಿಗೆ ಮಾಡಿಸುವೆನು. ಜೋಕೆ!" ಎಂದು ಗರ್ಜಿಸಿದನು. ಇದನ್ನು ಕೇಳಿದಕೂಡಲೇ ಅವರಿಗೆ ಭಯವೂ, ನಾಚಿಕೆಯೂ, ಆಶ್ಚರ್ಯವೂ ಉಂಟಾದುವು. ಕಡೆಗೆ ಆ ಭೀಮನನ್ನೇ ಕ್ಷಮೆಬೇಡಿಕೊಂಡು, ಅವರು ಎದ್ದುಹೋದರು.

ಊಟಮಾಡಿದವರ ಸಂಖ್ಯೆಯನ್ನು ಪರಿಗಣಿಸುವುದಕ್ಕೆ ದೇವಲೋಕದಿಂದ ಇಂದ್ರನು ಒಂದು ಗಂಟೆಯನ್ನು ಕಳುಹಿದ್ದನು. ಒಂದು ಲಕ್ಷಮಂದಿಗೆ ಭೋಜನವಾದಕೂಡಲೇ ಆ ದೇವಘಂಟೆಯು ಒಂದುಸಾರಿ ಧ್ವನಿಕೊಡುತ್ತಿತ್ತು. ಹೀಗೆ ಎಷ್ಟುಸಾರಿ ಘಂಟಾನಾದವಾಗುವುದೋ ಅಷ್ಟುಲಕ್ಷ ಜನರು ಭುಜಿಸಿ ತೃಪ್ತರಾದರೆಂದು ಗಣಿಸುತ್ತಿದ್ದರು. ಇಂತಹ ನಾದಗಳು ಪ್ರತಿ ಗಳಿಗೆಯಲ್ಲಿಯೂ ಅನೇಕಸಾರಿ ಆಗುತ್ತಲೇ ಇದ್ದುದರಿಂದ ಅಸಂಖ್ಯಾತರಾದ ಜನರು

ಭುಜಿಸಿದರೆಂಬುದರಲ್ಲಿ ಸಂಶಯವಿಲ್ಲ. ಊಟಮಾಡಿದವರೆಲ್ಲಾ ಎದ್ದು ಹೋಗಿ ಕೈ ತೊಳೆದುಕೊಳ್ಳುವಷ್ಟರಲ್ಲಿ ಎಂಜಲೆಲೆ ತೆಗೆದು, ನೆಲಕ್ಕೆ ಗೋಮಯವನ್ನಿಕ್ಕಿ ಶುದ್ಧಿಮಾಡಿಸಿ, ಮತ್ತೊಂದು ಪಙ್ತಿಗೆ ಎಲೆ ಹಾಕಿ ಬಡಿಸುತ್ತಿದ್ದರು. ಪ್ರತಿಯೊಂದು ಕೆಲಸಕ್ಕೂ ನೂರಾರು ಮಂದಿಯನ್ನು ನೇಮಕಮಾಡಿದ್ದರೂ ಆಯಾ ಕೆಲಸದವರಿಗೆ ಸ್ವಲ್ಪವೂ ವಿರಾಮವು ಸಿಕ್ಕದಷ್ಟು ಹೆಚ್ಚುಹೆಚ್ಚಾಗಿ ಜನಗಳು ಬರುತ್ತಲೇ ಇದ್ದುದರಿಂದ ಹೊಸಹೊಸದಾಗಿ ಹೆಚ್ಚುಜನರನ್ನು ಸಹಾಯಕ್ಕೆ ತೆಗೆದುಕೊಳ್ಳುತ್ತಲಿದ್ದರು.

ವೇದವ್ಯಾಸರ ಪುತ್ರನಾಗಿ ಮಹರ್ಷಿಶ್ರೇಷ್ಠನಾದ ಶುಕಯೋಗಿಯು ಈ ಸಂದರ್ಭದಲ್ಲಿಯೇ ಯುಧಿಷ್ಠಿರನನ್ನು ನೋಡಬೇಕೆಂದು ಅಲ್ಲಿಗೆ ಬಂದನು. ಆ ಗದ್ದಲದಲ್ಲಿ ಮಹಾರಾಜನ ಸಂದರ್ಶನವು ಸಾಧ್ಯವೆ? ಮಂಟಪದ ಒಳಗೂ ಹೊರಗೂ ಎಲೆಗಳು ಹಾಕಲ್ಪಟ್ಟು ಬಹುಜನರ ಭೋಜನಗಳು ನಡೆಯುತ್ತಲಿವೆ. ಮಹಾರಾಜನನ್ನು ಹುಡುಕಲಿಕ್ಕೆ ಅನುಕೂಲಿಸಲಿಲ್ಲ. ತ್ರಿಕಾಲಜ್ಞನಾದ ನಾರದನು ಈ ಸಂದರ್ಭವನ್ನರಿತು, ಕೂಡಲೇ ಅಲ್ಲಿಗೆ ಬಂದು, ಬಡಿಸಿ ಸಿದ್ಧವಾಗಿದ್ದ ಒಂದು ಎಡೆಯಲ್ಲಿ ಆ ಮಹರ್ಷಿಯನ್ನು ಕುಳ್ಳಿರಿಸಿ, ಸಾವಕಾಶವಾಗಿ ಭುಜಿಸಬೇಕೆಂದು ಉಪಚಾರೋಕ್ತಿಯನ್ನು ಹೇಳಲು ಆ ಶುಕನು ಊಟಮಾಡುತ್ತಿದ್ದನು. ಆತನು ಕುಳಿತಮೊದಲು ಊಟವು ಮುಗಿಯುವತನಕ ದೇವಘಂಟೆಯು ಅವಿಚ್ಛಿನ್ನವಾಗಿ ಧ್ವನಿ ಮಾಡುತ್ತಲೇ ಇತ್ತು. ಯುಧಿಷ್ಠಿರನು ಇದನ್ನು ನೋಡಿ ಅತ್ಯಾಶ್ಚರ್ಯಗೊಂಡು ಶ್ರೀಕೃಷ್ಣನಿಗೆ ಇಂತೆಂದನು.

ಯುಧಿ.—ಸ್ವಾಮಿ, ಲಕ್ಷಮಂದಿಯ ಊಟ ಮುಗಿದರೆ ಒಂದುಸಾರಿ ಘಂಟಾನಾದವಾಗುವ ನಿಯಮವು ಇದ್ದಿತಷ್ಟೆ! ಈಗ

ಸ್ವಲ್ಪಹೊತ್ತಿನಿಂದ ಅವಿಚ್ಛಿನ್ನವಾಗಿ ಶಬ್ದವಾಗುತ್ತಿರುವುದು. ಇದರ ಕಾರಣವನ್ನು ತಿಳಿಯದೆ ಭ್ರಾಂತನಾಗಿದ್ದೇನೆ.

ಶ್ರೀಕೃಷ್ಣ.—ಭಾವಾ, ದೇವಘಂಟೆಯು ತನ್ನ ನಿಯಮದಂತೆಯೇ ಧ್ವನಿಮಾಡುತ್ತಿರುವುದು. ಈಗಿನ ಸಂದರ್ಭ ವಿಶೇಷವನ್ನು ಹೇಳುವೆನು, ಕೇಳು. ಸಾಂಗವಾಗಿ ವೇದಾಧ್ಯಯನಮಾಡಿದ ಬ್ರಾಹ್ಮಣನೊಬ್ಬನು ಸಾಮಾನ್ಯರಾದ ನೂರುಮಂದಿಗೆ ಸಮಾನನು. ವೇದದ ಅರ್ಥವನ್ನು ತಿಳಿದು, ವಿಧಿನಿಷೇಧಗಳನ್ನು ಬಲ್ಲವನಾದ ಸದಾಚಾರ ಸಂಪನ್ನನೊಬ್ಬನು ವೇದಾಧ್ಯಯನಮಾಡಿದ ನೂರು ಜನರಿಗೆ ಸಮಾನನು. ಜಿತೇಂದ್ರಿಯನಾಗಿ ಯೋಗಾಭ್ಯಾಸ ಶೀಲನಾಗಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ಬ್ರಹ್ಮಜ್ಞಾನಿಯು ಅಂತಹ ನೂರುಮಂದಿ ಪಂಡಿತರಿಗೆ ಸಮಾನನು. ಶಾಸ್ತ್ರಮರ್ಯಾದೆಯು ಹೀಗಿರುವುದರಿಂದ ಅಂತಹ ಸುಗುಣಸಂಪತ್ತಿಯುಳ್ಳ ಮಹಾತ್ಮರು ಯಾರೋ ಇಲ್ಲಿಗೆ ಬಂದು ಭುಜಿಸುತ್ತಿರಬಹುದು. ಆದರಿಂದಲೇ ಅಂತವನ ಪ್ರತಿಯೊಂದು ಕಬಳವೂ ಲಕ್ಷಾಂತರ ಮಂದಿಯ ಸಂತರ್ಪಣೆಗೆ ಸಮವಾಗಿ ತೂಗಿ, ಘಂಟೆಯು ಧ್ವನಿಸುತ್ತಿರುವುದು.

ಈಮಾತನ್ನು ಕೇಳಿ, ಯುಧಿಷ್ಠಿರನು ಆತುರದಿಂದ ಆಗಲೇ ಹೊರಟು ಬಂದು ನೋಡುವಾಗ್ಗೆ ಶುಕಯೋಗಿಯು ಭೋಜನ ಮಾಡುತ್ತಿದ್ದನು. ರಾಜನು ಆ ಮಹರ್ಷಿಗೆ ತನ್ನ ಅಪಚಾರವನ್ನು ಕ್ಷಮಿಸಬೇಕೆಂದು ಸಮಾಧಾನವಾಕ್ಯಗಳನ್ನು ಹೇಳಿ, ಆತನ ಮಹಿಮೆಯನ್ನು ಬಹಳವಾಗಿ ಕೊಂಡಾಡಿದನು.

ಈ ರೀತಿಯಲ್ಲಿ ದಿನಂಪ್ರತಿ ಹಲವುಲಕ್ಷ ಜನರಿಗೆ ವಿವಿಧ ಭಕ್ಷ್ಯಗಳಿಂದ ಕೂಡಿದ ಚತುರ್ವಿಧಾನ್ನಗಳಿಂದ ಸಂತರ್ಪಣೆ ಮಾಡಿಸುತ್ತಾ, ಭೂತತೃಪ್ತಿಯನ್ನು ಮಾಡುತ್ತಾ ಬಂದನು. ರಾಜಸೂಯ

ಕ್ರತುವಿನ ಆರಂಭದಿನಕ್ಕೆ ಮುಂಚೆಯೇ ಸದಸ್ಯರನ್ನು ವರಿಸುವ ಕೆಲಸವು ನಡೆಯಿತು.

ಆಗ ವೇದವ್ಯಾಸ ಮಹರ್ಷಿಯು ಮೂರ್ತಿಮಂತರಾಗಿ ಹೆಸರುಗೊಂಡ ಋತ್ವಿಕ್ಕುಗಳನ್ನೆಲ್ಲಾ ಕುಳ್ಳಿರಿಸಿಕೊಂಡು, ಸಾಮವೇದ ಸ್ವರೂಪನಾದ ಸುಸಾಮನೆಂಬ ಬ್ರಾಹ್ಮಣೋತ್ತಮನನ್ನು ಉದ್ಗಾತೃವಾಗಿಯೂ, ಬ್ರಹ್ಮನಿಷ್ಠನಾದ ಯಾಜ್ಞ್ಯವಲ್ಕ್ಯಮಹರ್ಷಿಯನ್ನು ಅಧ್ವರ್ಯುವಾಗಿಯೂ, ವಸುಪುತ್ರನಾದ ಪೈಲಮುನಿಯನ್ನೂ, ಪುರೋಹಿತನಾದ ಧೌಮ್ಯನನ್ನೂ ಹೋತೃಗಳಾಗಿಯೂ, ವೇದಜ್ಞರಾಗಿಯೂ, ಸದಾಚಾರ ಸಂಪನ್ನರಾಗಿಯೂ ಇರುವ ಕೆಲವು ಮಹರ್ಷಿಗಳನ್ನು ಋತ್ವಿಕ್ಕುಗಳಾಗಿಯೂ, ಸದಸ್ಯರಾಗಿಯೂ ನಿಯಮಿಸಿ, ಯಜ್ಞದ ಮುಖ್ಯಾಧಿಕಾರವಾದ ಬ್ರಹ್ಮತ್ವವನ್ನು ಮಹರ್ಷಿಗಳ ಪ್ರಾರ್ಥನೆಯಂತೆ ತಾನೇ ಅಂಗೀಕರಿಸಿದನು.

ಯಜ್ಞಕುಂಡದ ಅಂತರ್ವೇದಿಯ ಬಳಿಯಲ್ಲಿ ಶೋಧಿಸಿದ ಸಮಿತ್ತುಗಳ ಹೊರೆಗಳೂ, ದರ್ಭೆಹುಲ್ಲಿನ ಕಟ್ಟುಗಳೂ, ತುಪ್ಪ, ಚರು, ಪುರೋಡಾಶ, ತಿಲ ಮುಂತಾದ ಹೋಮದ್ರವ್ಯಗಳೂ ಬೇಕಾದಷ್ಟು ಸಿದ್ಧವಾದುವು. ಋತ್ವಿಕ್ಪುರೋಹಿತಾದಿ ಬ್ರಾಹ್ಮಣರೆಲ್ಲರೂ ಅಂತರ್ವೇದಿಯ ಮಂಟಪದಲ್ಲಿ ಆಸೀನರಾಗಿದ್ದರು. ಮಹಾರಾಜರುಗಳೂ, ರಾಜಬಂಧುಗಳೂ, ಬಹಿರ್ವೇದಿಯ ಮಂಟಪದಲ್ಲಿ ಕುಳಿತಿದ್ದರು.

ಯುಧಿಷ್ಠಿರನು ಪತ್ನೀಸಹಿತನಾಗಿ ರಾಜಸೂಯಯಾಗ ಮಾಡುವೆನೆಂದು ಸಂಕಲ್ಪಮಾಡಿ ಕೈಗೆ ಕಂಕಣವನ್ನು ಕಟ್ಟಿಕೊಂಡು ವಿಧ್ಯುಕ್ತರೀತಿಯಲ್ಲಿ ಮೈಗೆ ನವನೀತವನ್ನು ತೊಡೆದುಕೊಂಡು ಅಭ್ಯಂಜನಸ್ನಾನಮಾಡಿ, ಪೀತಾಂಬರದ ಮಡಿಯುಟ್ಟು, ಊರ್ಧ್ವಪುಂಡ್ರಗಳನ್ನು ಧರಿಸಿಕೊಂಡು, ಕೃಷ್ಣಾಜಿನವನ್ನು ಹೊದೆದುಕೊಂಡು,

ಹಸ್ತಾಗ್ರದಲ್ಲಿ ಜಿಂಕೆಯ ಕೊಂಬನ್ನು ಹಿಡಿದುಕೊಂಡು, ಯಾಗಶಾಲೆಗೆ ಪ್ರವೇಶಿಸಿದನು. ಆಷ್ಟರಲ್ಲಿ ಬ್ರಾಹ್ಮಣರು ಸ್ವಸ್ತಿವಾಚನೆಯ ಮೂಲಕ ಪುಣ್ಯಾಹಮಂತ್ರಗಳನ್ನು ಜಪಿಸಿದರು. ನಾನಾವಿಧ ಮಂಗಳವಾದ್ಯಗಳು ಘೋರ್ಗರೆಯುತ್ತಿದ್ದುವು. ಮಹರ್ಷಿಗಳೆಲ್ಲರೂ ಬಂದು ಸೇರಿದರು. ಆಕಾಶದಲ್ಲಿ ಇಂದ್ರಾದಿ ದೇವತೆಗಳು ವಿಮಾನಗಳಲ್ಲಿ ಕುಳಿತು ನೋಡುತ್ತಿದ್ದರು. ಯೂಪಸ್ತಂಭವು ನೆಡಲ್ಪಟ್ಟಿತು. ಅರಣಿಯ ಮರದ ತುಂಡುಗಳನ್ನು ಕಡೆದು ಅಗ್ನಿಯನ್ನು ತೆಗೆದುಕೊಂಡು ಹೋಮಕುಂಡದಲ್ಲಿ ಪ್ರತಿಷ್ಠಾಪಿಸಿ, ವೇದಮಂತ್ರಗಳಿಂದ ಆಯಾ ದೇವತೆಗಳ ಹೆಸರಿನಲ್ಲಿ ಅಗ್ನಿಮುಖವಾಗಿ ಆಹುತಿಕೊಡುತ್ತಾ ಬಂದರು. ಓಂಕಾರಸ್ವಾಹಾಕಾರ ಸ್ವಧಾಕಾರವಷಟ್ಕಾರ ಶಬ್ದಗಳು ಭೂನಭೋಂತರವನ್ನೆಲ್ಲಾ ವ್ಯಾಪಿಸಿದುವು. ಹೋಮದಹೊಗೆಯು ಮೇರುಪರ್ವತವನ್ನು ಕರಿಯಮೋಡಗಳು ಮುಚ್ಚಿದಂತೆ ಆಕಾಶವನ್ನೆಲ್ಲಾ ಮುಚ್ಚಿತು. ಈ ಹೊಗೆಯಿಂದ ಸೂರ್ಯಮಂಡಲವು ಕಿಲುಬು ಹತ್ತಿದ ಕನ್ನಡಿಯಂತೆ ಮಸುಕಾಯಿತು. ಈ ರೀತಿಯಲ್ಲಿ ಏಳುದಿನಗಳ ತನಕ ಅವಿಚ್ಛಿನ್ನವಾಗಿ ಹೋಮವು ನಡೆಯುತ್ತಲೇ ಇದ್ದಿತು.

ಸಭೆಯಲ್ಲಿ ಕುಳಿತಿರುವವರು ಹೊತ್ತನ್ನು ಸುಮ್ಮನೆ ಕಳೆಯುವುದುಹೇಗೆ ? ತಮ್ಮ ತಮ್ಮ ವೃತ್ತಿಗಳಿಗೆ ಅನುಗುಣವಾದ ವಿವಾದಗಳಲ್ಲಿ ಕಾಲವಿನಿಯೋಗಮಾಡುತ್ತಿದ್ದರು. ಶಾಸ್ತ್ರಜ್ಞರಾದ ಬ್ರಾಹ್ಮಣರ ಗುಂಪಿನಲ್ಲಿ ತರ್ಕ, ವ್ಯಾಕರಣ, ವೇದಾಂತ, ಮೀಮಾಂಸೆಗಳನ್ನು ಕುರಿತು ಅದು ಹಾಗೆ, ಇದುಹೇಗೆ, ಅದುಹಾಗಲ್ಲ. ಮುಂತಾಗಿ ಚರ್ಚಿಸಿ ಪೂರ್ವಪಕ್ಷ ಸಿದ್ಧಾಂತಗಳಲ್ಲಿ ಹೊತ್ತು ಕಳೆಯುತ್ತಿದ್ದರು. ರಾಜರುಗಳಲ್ಲಿ ಅನೇಕರು ರಾಜ್ಯಭಾರಕ್ರಮ, ಕಾರ್ಯನಿರ್ವಹಣೆ, ಪರರಾಯರನ್ನು ನಿಗ್ರಹಿಸುವರೀತಿ, ಯುದ್ಧದ ವಿಧಾನಗಳು ಮುಂ

ತಾದ ರಾಜಕೀಯ ವಾರ್ತೆಗಳಲ್ಲಿ ಹೊತ್ತುಕಳೆಯುತ್ತಿದ್ದರು. ವೈಶ್ಯರು ಲಾಭನಷ್ಟಗಳ ಪರಿಣಾಮಗಳನ್ನೂ, ದ್ವೀಪಾಂತರಸಂಚಾರ ವಿಷಯವನ್ನೂ, ವ್ಯಾಪಾರಧರ್ಮಗಳನ್ನೂ ಕುರಿತು ಮಾತನಾಡಿಕೊಳ್ಳುತ್ತಿದ್ದರು. ಇತರಜನರು ತಮ್ಮತಮ್ಮ ವೃತ್ತಿಗಳಿಗೆ ಅನುಗುಣವಾದ ವಿಷಯಗಳನ್ನೂ ಚರ್ಚಿಸುತ್ತಾ, ಆಟಪಾಟಗಳನ್ನು ನೋಡಿಕೊಂಡು ವಿನೋದದಿಂದ ಕಾಲಹರಣ ಮಾಡುತ್ತಿದ್ದರು.

ಯಜ್ಞವು ಸಾಂಗವಾಗಿ ನೆರವೇರಿತು. ದೇವತೆಗಳು ಹವಿರ್ಭಾಗಗಳಿಂದಲೂ, ಬ್ರಾಹ್ಮಣರು ಮೃಷ್ಟಾನ್ನದಕ್ಷಿಣೆಗಳಿಂದಲೂ, ಮಹಾರಾಜರೂ, ಇತರಜನರೂ, ವಸ್ತ್ರಾಭರಣಾದಿ ಸನ್ಮಾನಗಳಿಂದಲೂ ತೃಪ್ತರಾದರು. ಕೇಳಿದವರ ಇಷ್ಟಾನುಸಾರವಾಗಿ ದಾನಧರ್ಮಗಳೂ ಭುಜಿಸುವವರ ಇಛ್ಛಾನುಗುಣವಾಗಿ ಊಟವುಪಚಾರಗಳೂ ನಡೆಯುತ್ತಿದ್ದುವು. ಯಾವಪ್ರಾಣಿಗಾದರೂ ಸ್ವಲ್ಪವೂ ಅಸಮಾಧಾನವಾಗದರೀತಿಯಲ್ಲಿ ತಕ್ಕ ಏರ್ಪಾಡುಗಳನ್ನೆಲ್ಲಾ ಮಾಡಿದ್ದುದರಿಂದ "ಈತನೇ ಧರ್ಮರಾಯನು, ಅಜಾತಶತ್ರುವೆಂಬ ಹೆಸರು ಇವನಿಗೆ ಸಾರ್ಥಕವಾಯಿತು. ಈ ಯಾಗವನ್ನು ಮಾಡಿದುದರಿಂದ ಇವನ ತಂದೆಯಾದ ಪಾಂಡುರಾಯನಿಗೆ ಸ್ವರ್ಗಲೋಕದಲ್ಲಿ ಉತ್ತಮಪದವಿಯು ಲಭಿಸುವುದರಲ್ಲಿ ಸಂಶಯವಿಲ್ಲ" ಎಂದು ಮಹರ್ಷಿಗಳೂ, ರಾಜಾಧಿರಾಜರೂ, ಇತರದೊಡ್ಡಮನುಷ್ಯರೂ ಆ ಯುಧಿಷ್ಠಿರನನ್ನು ಹೊಗಳುತ್ತಿದ್ದರು. ದೇವತೆಗಳು ಬಹುಸಂತೋಷದಿಂದ ಆತನಮೇಲೆ ಪುಷ್ಪವೃಷ್ಟಿಯನ್ನು ಸುರಿಸಿ ದೇವದುಂದುಭಿಯನ್ನು ಮೊಳಗಿಸಿದರು.

ಹಲವು ಕಲ್ಪಗಳಿಂದಲೂ ಜೀವಿಸಿಕೊಂಡಿದ್ದು ಸಮಸ್ತಕ್ರತುಗಳನ್ನೂ ಪ್ರತ್ಯಕ್ಷವಾಗಿ ನೋಡಿದ ರೋಮಶಮಾರ್ಕಂಡೇಯರೆಂಬ ಮಹರ್ಷಿಗಳಿಬ್ಬರೂ ಈ ಯಜ್ಞವನ್ನು ನೋಡಿ "ನಾವೂ ಅನೇಕ

ಕಲ್ಪಗಳನ್ನೂ ನೋಡಿದೆವು. ಈ ರೀತಿಯಾದ ಮಹಾಯಜ್ಞವು ಹಿಂದೆ ಯಾವಾಗಲೂ ನಡೆದುದೇ ಇಲ್ಲ’’ ಎಂದು ಆಶ್ಚರ್ಯದಿಂದ ತಲೆದೂಗಿ ಹೊಗಳುತ್ತಿದ್ದರು.

ಆಗ ಬ್ರಹ್ಮರ್ಷಿಯಾದ ನಾರದನು ತನ್ನ ಮನಸ್ಸಿನಲ್ಲಿ ‘‘ನನ್ನ ಉದ್ದೇಶವು ನೆರವೇರಿತು. ಈ ಯುಧಿಷ್ಠಿರನು ನಾನು ಹೇಳಿದಂತೆ ರಾಜಸೂಯಯಾಗವನ್ನು ಮಾಡಿ, ತಮ್ಮ ತಂದೆಯಾದ ಪಾಂಡುರಾಯನಿಗೆ ಸುಗತಿಯನ್ನುಂಟುಮಾಡಿದನು. ಇನ್ನೊಂದು ಕೆಲಸವು ಮಾತ್ರ ಉಳಿದಿದೆ. ಶ್ರೀಕೃಷ್ಣನು ಭೂಭಾರನಿವಾರಣೆಗೋಸ್ಕರವೇ ಇಲ್ಲಿ ಅವತರಿಸಿರುವನು. ಮದಾಂಧರಾಗಿಯೂ ದುಷ್ಟರಾಗಿಯೂ ಇರುವ ಕ್ಷತ್ರಿಯರನ್ನು ನಿಗ್ರಹಿಸಿದಹೊರತು ಭೂಮಿಯ ಭಾರವು ತಗ್ಗುವುದಿಲ್ಲ. ಸತ್ಯಸಂಕಲ್ಪನಾದ ಶ್ರೀಕೃಷ್ಣನು ಇದಕ್ಕೆ ಏನುಯೋಚನೆ ಮಾಡಿರುವನೋ ತಿಳಿಯದು. ಆತನ ಲೀಲಾವಿಭೂತಿಯನ್ನು ಬಲ್ಲವರಿಲ್ಲ. ಮುಂದೆ ಏನುಮಾಡುವನೋ ನೋಡೋಣ.’’ ಎಂದು ಚಿಂತಿಸುತ್ತಾ ಆ ಪರಮಾತ್ಮನನ್ನು ಧ್ಯಾನಿಸುತ್ತಿದ್ದನು.



# ಐದನೆಯ ಸಂಧಿ.

ಸೂ|| ರಾಜಸೂಯಯಾಗವು ಮುಗಿದಮೇಲೆ ಶ್ರೀಕೃಷ್ಣನಿಗೆ ಅಗ್ರ ಪೂಜೆಮಾಡಿದರು. ಆಗ ಶಿಶುಪಾಲನು ಶ್ರೀಕೃಷ್ಣನು ಪೂಜಾರ್ಹನಲ್ಲವೆಂದು ನಿಂದಿಸಲು ಭೀಷ್ಮನು ಶ್ರೀಕೃಷ್ಣನ ಮಹಿಮೆಗಳನ್ನು ವರ್ಣಿಸಿದನು.

ಈ ರೀತಿಯಲ್ಲಿ ಏಳುದಿನಗಳತನಕ ಯಜ್ಞೇಶ್ವರನಿಗೆ ಆಹುತಿಗಳನ್ನು ಕೊಟ್ಟು, ವಿಧ್ಯುಕ್ತವಾದ ಹೋಮಗಳನ್ನು ಮಾಡಿ ಮುಗಿಸಿದರು. ಆಬಳಿಕ ಕುರುವೃದ್ಧನಾದ ಭೀಷ್ಮನು ಯುಧಿಷ್ಠಿರನನ್ನು ನೋಡಿ "ಎಲೈ ರಾಯನೇ, ಈ ಮಹರ್ಷಿಗಳೂ, ರಾಜಾಧಿರಾಜರೂ ಇತರ ಮಹಾಜನಗಳೂ ಇಲ್ಲಿಗೆಬಂದು ಬಹುದಿನಗಳಿಂದ ನಿನ್ನ ಆತಿಥ್ಯವನ್ನು ಪಡೆಯುತ್ತಿದ್ದಾರೆ. ಈ ಯಾಗಾಂತ್ಯದಲ್ಲಿ ಈ ಸಭಾಸದರಿಗೆ ಅವರವರ ಯೋಗ್ಯತಾನುಗುಣವಾಗಿ ಸತ್ಕರಿಸಿ ಕಳುಹಬೇಕಾದುದು ನಮ್ಮ ಕರ್ತವ್ಯವು. ಆದುದರಿಂದ ಇವರುಗಳನ್ನು ಯಥಾಯೋಗ್ಯವಾಗಿ ಸನ್ಮಾನಿಸಬೇಕಾಗಿದೆ." ಎಂದನು. ಆಗ ಯುಧಿಷ್ಠಿರನು ಪಿತಾಮಹನನ್ನು ನೋಡಿ ಇಂತೆಂದನು.

ಯುಧಿ.—ಆರ್ಯನೇ, ನಿನ್ನ ಮಾತು ವಿಹಿತವಾಗಿದೆ. ಈ ನೆರೆದ ಸಭೆಯಲ್ಲಿ ಮೊದಲು ಯಾರಿಗೆ ಸತ್ಕಾರಮಾಡಬೇಕೆಂಬುದನ್ನು ತಿಳಿದು ಹೇಳಿದರೆ ಅದರಂತೆ ಪೂಜಿಸಿ, ಬಳಿಕ ಇತರರನ್ನು ಅವರವರ ಯೋಗ್ಯತಾನುಸಾರವಾಗಿ ಮನ್ನಿಸಬಹುದು.

ಭೀಷ್ಮ.—ಎಲೈರಾಯನೇ, ನೀನು ತಿಳಿದೂ ತಿಳಿದೂ ಹೀಗೆ ಕೇಳುತ್ತಿರುವೆ! ರಾತ್ರಿಕಾಲದಲ್ಲಿ ನಕ್ಷತ್ರಮಂಡಲ ಮಧ್ಯದಲ್ಲಿ ಚಂದ್ರನು ವಿರಾಜಮಾನನಾಗಿರುವಾಗ ಆಕಾಶದಲ್ಲಿ ಹೆಚ್ಚು ಪ್ರಕಾಶ

ವುಳ್ಳುದು ಯಾವುದೆಂದು ಕೇಳಬೇಕೆ? ಅದರಂತೆಯೇ ಸಮಸ್ತಲೋಕಗಳಿಗೂ ಕರ್ತನಾಗಿ ಜಗತ್ಪಾಲಕನಾಗಿರುವ ಪರಮಾತ್ಮಸ್ವರೂಪನಾದ ಶ್ರೀಕೃಷ್ಣನೇ ಪ್ರತ್ಯಕ್ಷವಾಗಿ ಈ ಸಭೆಯಲ್ಲಿ ಕುಳಿತಿರುವಾಗ ಆತನನ್ನು ಬಿಟ್ಟು, ಉಳಿದ ಜನರಿಗೆ ಮರ್ಯಾದೆಯು ಸಲ್ಲುವುದೆ?

ನೀನು ಶ್ರೀಕೃಷ್ಣನಿಗೆ ಎಲ್ಲರಿಗಿಂತಲೂ ಮೊದಲು ಅಗ್ರಪೂಜೆಯನ್ನು ಮಾಡಿ, ಬಳಿಕ ಮಾನವಕೋಟಿಯಲ್ಲಿ ಸೇರಿದ ಸಾಮಾನ್ಯರನ್ನು ಯಥಾಯೋಗ್ಯವಾಗಿ ಸತ್ಕರಿಸು.

ಭೀಷ್ಮನಾಡಿದ ಈ ಮಾತನ್ನು ಕೇಳಿ ವ್ಯಾಸ, ನಾರದ, ರೋಮಶ ಮೊದಲಾದ ಸಮಸ್ತ ಮಹರ್ಷಿಗಳೂ ಈ ಭೀಷ್ಮನ ನುಡಿಯೇ ಸತ್ಯವು. ಈ ಸಭೆಯಲ್ಲಿ ವಸುದೇವಪುತ್ರನಾದ ಶ್ರೀಕೃಷ್ಣಸ್ವಾಮಿಯೇ ಸರ್ವವಿಷಯದಲ್ಲಿಯೂ ಶ್ರೇಷ್ಠನಾಗಿರುವುದರಿಂದ ಈ ಮಹಾನುಭಾವನಿಗೇನೇ ಅಗ್ರಪೂಜೆ ಮಾಡಬಹುದೆಂದು ಏಕವಾಕ್ಯತೆಯಿಂದ ಹೇಳಿದರು.

ಆಗ ರತ್ನಖಚಿತವಾದ ಮಂಚದಮೇಲೆ ಶ್ರೇಷ್ಠವಾದ ಪೀತಾಂಬರವನ್ನು ಹಾಸಿ, ತಟ್ಟಿಬಟ್ಟಲು ಮೊದಲಾದ ಪೂಜೋಪಕರಣಗಳನ್ನೆಲ್ಲಾ ಸಿದ್ಧಪಡಿಸಿದರು. ಮಾದ್ರೀಪುತ್ರನಾದ ಸಹದೇವನು ಅಣ್ಣನ ಅಪ್ಪಣೆಪಡೆದು ಶ್ರೀಕೃಷ್ಣನಿಗೆ ಕೈಗೊಟ್ಟು, ಆತನನ್ನು ಕರೆದುತಂದು, ರತ್ನಪೀಠದಮೇಲೆ ಕುಳ್ಳಿರಿಸಿದನು. ಸುವರ್ಣಮಯವಾದ ತಟ್ಟೆಯಲ್ಲಿ ಆ ಸ್ವಾಮಿಯ ಪಾದಗಳನ್ನಿರಿಸಿ, ಬ್ರಾಹ್ಮಣರು ವೇದಘೋಷಮಾಡುತ್ತಿರಲು ಕಲಶದಲ್ಲಿರುವ ಗಂಗೋದಕದಿಂದ ಆತನ ಪಾದಗಳನ್ನು ತೊಳೆದು, "ಇಂದಿಗೆ ಧನ್ಯರಾದೆವು. ನಮ್ಮ ಜನ್ಮಗಳು ಸಫಲವಾದುವು," ಎಂದು ಆ ಪಾದೋದಕವನ್ನು ಭಕ್ತಿಯಿಂದ ತನ್ನ ಸಿರಸ್ಸಿನಮೇಲೆ ಪ್ರೋಕ್ಷಿಸಿಕೊಂಡು, ಸಹೋದರರಿಗೂ ಪ್ರೋ

ಕ್ಷಿಸಿದನು. ಬಳಿಕ ಅರ್ಘ್ಯಾದಿ ಷೋಡಶೋಪಚಾರಗಳಿಂದ ಶ್ರೀಕೃಷ್ಣನ ಸತ್ಕಾರವು ನಡೆಯಿತು. ಆವೇಳೆಯಲ್ಲಿ ಮಂಗಳವಾದ್ಯಗಳು ಘೋಷಿಸುತ್ತಿದ್ದುವು. ದೇವತೆಗಳು ಆನಂದದಿಂದ ಆಸ್ಥಾನದ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ಸಾಕ್ಷಾತ್ಪರಮಾತ್ಮಸ್ವರೂಪನಾದ ಶ್ರೀಕೃಷ್ಣನನ್ನು ಪೂಜಿಸಿದುದರಿಂದ ಪಾಂಡವರು ಮಾಡಿದಯಾಗವು ಸಫಲವಾಯಿತೆಂದು ಸಭೆಯವರು ಜಯಧ್ವನಿಮಾಡಿದರು. ಪಾಂಡವರ ಸಂತೋಷಾತಿಶಯವನ್ನು ನೋಡಿ ಕೌರವರು ಒಳಗೊಳಗೆ ಅಸೂಯೆಯಿಂದ ಕುದಿಯುತ್ತಿದ್ದರು. ರಾಜರಲ್ಲಿ ಕೆಲವರು ಪಾಂಡವರಲ್ಲಿ ತಮಗಿರುವ ಸ್ನೇಹದಿಂದಲೂ, ಕೆಲವರು ಶ್ರೀಕೃಷ್ಣನಭಯದಿಂದಲೂ, ಕೆಲವರು ಧರ್ಮದೃಷ್ಟಿಯಿಂದಲೂ, ಕೆಲವರು ಈ ವೇಳೆಯಲ್ಲಿ ತಾವು ಮಾತನಾಡಿದರೂ ತಮ್ಮ ಮಾತು ನಡೆಯುವುದಿಲ್ಲವೆಂಬ ಯೋಚನೆಯಿಂದಲೂ ಒಬ್ಬರಮುಖವನ್ನೊಬ್ಬರು ನೋಡುತ್ತಾ ಸುಮ್ಮನೆ ಕುಳಿತಿದ್ದರು. ಆಗ ಚೇದಿರಾಜನಾದ ಶಿಶುಪಾಲನೂ, ಧಾರ್ತರಾಷ್ಟ್ರನಾದ ದುರ್ಯೋಧನನೂ ತಮ್ಮನ್ನು ಬಿಟ್ಟು ಶ್ರೀಕೃಷ್ಣನಿಗೆ ಅಗ್ರಪೂಜೆಮಾಡಿದನೆಂಬ ಅಸೂಯೆಯಿಂದ ರೋಷಾವಿಷ್ಟರಾದರು. ಸಾಧುಗಳನ್ನು ನೋಡಿ ದುರ್ಜನರೂ, ಪತಿವ್ರತೆಯರನ್ನು ಕಂಡು ದುಷ್ಟಸ್ತ್ರೀಯರೂ ಮತ್ಸರಿಸುವುದು ಸಹಜವೇ ಅಲ್ಲವೆ? ಹಾಗೆಯೇ ಧರ್ಮರಾಯನು ಸನ್ಮಾರ್ಗದಲ್ಲಿ ನಡೆದುದನ್ನು ಕಂಡು ಆ ದುಷ್ಟರು ಆತನಲ್ಲಿ ಹಗೆಗೊಂಡರು.

ಸ್ವಾಭಿಮಾನವೂ ಹೆಚ್ಚಾದ ಅಹಂಕಾರವೂ ಉಳ್ಳ ಆ ಶಿಶುಪಾಲನು ತನ್ನ ಕಣ್ಣುಗಳನ್ನು ಕೆಂಪಾಗಿ ಮಾಡಿಕೊಂಡು ರೋಷಾವೇಶದಿಂದ ಅಜ್ಞಾನಪರವಶನಾಗಿ ಎದ್ದುನಿಂತು, ಸಭಿಕರಮುಂದೆ ಹೀಗೆ ತನ್ನ ವಾಗ್ಬಾಣಗಳನ್ನು ಸುರಿಸತೊಡಗಿದನು.

ಶಿಶು.—ಏನಿದು ಅನ್ಯಾಯ! ಎಂತಹ ಹುಚ್ಚುಕೆಲಸಮಾಡಿದಿರಿ? ಎಲಾ ಕುನ್ನಿಯಾದ ಸಹದೇವಾ! ನಿನಗೆ ಬುದ್ಧಿಯು ಸ್ವಲ್ಪವಾದರೂ ಇಲ್ಲವೊ? ಈ ಸಭೆಯಲ್ಲಿ ಬ್ರಹ್ಮರ್ಷಿಗಳೂ, ರಾಜರ್ಷಿಗಳೂ, ಮಹಾಮಹಾ ವಿದ್ವಾಂಸರೂ, ಬಂದು ಸೇರಿರುವರು. ಇವರಲ್ಲಿ ಯೋಗ್ಯರಾದವರನ್ನು ಆರಿಸಿ ಅಂಥವರಿಗೆ ಅಗ್ರಪೂಜೆಮಾಡುವುದು ನಿಮಗೆ ಧರ್ಮವು. ನೀನು ಹಾಗೆಮಾಡದೆ ಈ ಗೊಲ್ಲನಾದ ನಂದನಂದನನನ್ನು ಸಿಂಹಾಸನದಮೇಲೆ ಕುಳ್ಳಿರಿಸಿ, ಇವನಿಗೆ ಏತಕ್ಕೆ ಮೊದಲು ಪೂಜೆಮಾಡಿದೆ? ಈ ಪೋರನು ಏತರಲ್ಲಿ ದೊಡ್ಡವನು? ಎಲ್ಲರಿಗಿಂತಲೂ ಮೊದಲು ಸತ್ಕಾರಕ್ಕೆ ಇವನು ಅರ್ಹನೆ? ಇವನನ್ನು ಮೊದಲುಮನ್ನಿಸಿದುದರಿಂದ ಮಹಾತ್ಮರಿಗೆಲ್ಲಾ ನೀವೇ ಅವಮಾನ ಮಾಡಿದಂತೆ ಆಯಿತಲ್ಲವೆ? ಛೀ ಹುಚ್ಚಾ! ನೀನಂತು ಅರಿಯದ ಹುಡುಗನು. ನಿನಗೆ ಬುದ್ಧಿ ಸಾಲದು. ನಿಮ್ಮ ಹಿರಿಯರು ಈ ಕೃತ್ಯವನ್ನು ಹೇಗೆ ಅನುಮೋದಿಸಿದರು? ನಿನಗೆ ವಿಚಾರಶಕ್ತಿಯು ಸ್ವಲ್ಪವಾದರೂ ಇಲ್ಲವಲ್ಲಾ! ಇದರಿಂದ ನಿಮ್ಮ ಯಾಗಕ್ರಮವು ಸುತರಾಂ ಸಮರ್ಪಕವಾಗಿಲ್ಲವೆಂದು ತೋರುತ್ತದೆ. ನೀವು ಕ್ರಿಯಾಭ್ರಷ್ಟರಾಗಿ ಹೋದಿರಿ.

ಸಭೆಯಕಡೆನೋಡಿ! ಮಹಾಮಹಾ ಕೀರ್ತಿಪ್ರತಿಷ್ಠೆಗಳನ್ನು ಪಡೆದ ಮಹಾರಾಜರಿರಾ! ಮಹರ್ಷಿಗಳಿರಾ! ಈ ಅಗ್ರಪೂಜೆಯು ನಿಮಗೆಲ್ಲಾ ಹೇಗೆ ಸಮ್ಮತವಾಯಿತು? ಈ ಕಪಟಿಯಾದ ಕೃಷ್ಣನ ವೃತ್ತಾಂತವನ್ನು ನೀವು ಅರಿಯಿರಾ? ಇವನು ಯದುಕುಲದಲ್ಲಿ ಹುಟ್ಟಿದವನು. ಇವನ ಪೂರ್ವಿಕರು ಮೊದಲೇ ಶಾಪಗ್ರಸ್ತರಾಗಿ ಸಿಂಹಾಸನವನ್ನು ಏರುವುದಕ್ಕೆ ಅನರ್ಹರಾಗಿ ಬಿಟ್ಟರು. ಅದೂ ಇರಲಿ. ಇವನು ಹುಟ್ಟಿದಾಗಲೇ ಸ್ಥಾನಭ್ರಷ್ಟನಾಗಿ ಗೊಲ್ಲನಮನೆಗೆ ತರಲ್ಪ

ಟ್ಟು, ದನಾಕಾಯುವವರ ಜತೆಯಲ್ಲಿ ಬೆಳೆದನು. ಕರುಗಳನ್ನು ಮೇಯಿಸಿಕೊಂಡು, ಗೋಪಾಲಕರೊಂದಿಗೆ ಆಡುತ್ತಾ, ಕಪಟವೃತ್ತಿಯಿಂದ ಹೇಯಗಳಾದ ಅನೇಕ ದುಷ್ಕೃತ್ಯಗಳನ್ನು ಮಾಡಿದನು. ಇಂತಹ ದುರಾತ್ಮನಿಗೆ ನಿಮ್ಮೆಲ್ಲರ ಎದುರಿಗೆ ಈ ಯುಧಿಷ್ಠಿರನು ಮೊದಲಲ್ಲಿ ಸತ್ಕಾರಮಾಡಿದುದು ನಿಮ್ಮೆಲ್ಲರಿಗೂ ಅವಮಾನಮಾಡಿದಂತೆ ಆಗಲಿಲ್ಲವೆ ? ಇದನ್ನು ಕಂಡುಕಂಡು. ನೀವು ಹೇಗೆ ಸಹಿಸಿಕೊಂಡಿರುವಿರಿ ?

(ಭೀಷ್ಮನಕಡೆ ತಿರುಗಿ) ಎಲಾಮುದುಕಾ, ನೀನುವಯಸ್ಸಿನಲ್ಲಿ ದೊಡ್ಡವನಾಗಿದ್ದರೂ ಜ್ಞಾನದಲ್ಲಿ ಹುಡುಗರಿಗಿಂತಲೂ ಕಡೆಯಾಗಿ ಹೋದೆಯಲ್ಲಾ! ಯುಕ್ತಾಯುಕ್ತಗಳನ್ನು ತಿಳಿದು, ನಿಜವಾದ ಮಾತನಾಡುತ್ತೀಯೆ ಎಂದು ನಂಬಿ, ಯುಧಿಷ್ಠಿರನು ನಿನ್ನ ಯೋಚನೆ ಕೇಳಿದುದಕ್ಕೆನೀನು ಸರಿಯಾಗಿ ತಿಳಿದು ಹೇಳದೆ, ಈ ಗೊಳಿಗನಲ್ಲಿ ಶಿಷ್ಟತೆಯನ್ನು ಕಲ್ಪಿಸಿ, ಇವನಿಗೆ ಮೊದಲನೆಯ ಮರ್ಯಾದೆಯನ್ನು ಮಾಡಿಸಿದೆಯಾ ? ಈ ಹುಡುಗನು ಬಾಲ್ಯದಲ್ಲಿ ಮಾಡಿದ ಅಕೃತ್ಯಗಳು ನಿನಗೆ ಗೊತ್ತಿಲ್ಲದೆ ಹೋದುವೆ? ಅರುಳುಮರುಳಾಗಿರುವ ನಿನಗೆ ಬುದ್ಧಿ ಕೆಟ್ಟುಹೋದುದು ಸಹಜವೆ. ಅದುಹಾಗಿರಲಿ. ನೀನುತಾನೇ ಯೋಗ್ಯನಾಗಿದ್ದೀಯಾ ? ನಿನ್ನ ಪೂರ್ವ ವೃತ್ತಾಂತವನ್ನು ನಾನರಿಯೆನೆ? ನಪುಂಸಕನಾದ ನೀನು ಕಾಶೀರಾಯನ ಹುಡುಗಿಯರನ್ನು ಬಲಾತ್ಕಾರದಿಂದ ತಂದು ನಿನ್ನ ತಮ್ಮನಿಗೆ ಮದುವೆ ಮಾಡಿಸಿದಾಗ ಅವರಲ್ಲಿ ಒಬ್ಬಳು ನಿನ್ನನ್ನೇ ಬಯಸಲಿಲ್ಲವೆ? ಅವಳನ್ನು ನೀನು ತಿರಸ್ಕರಿಸಿದುದರಿಂದ ದೃಢಪ್ರತಿಜ್ಞಳಾದ ಆ ಅಂಬೆಯು ನಿನ್ನಹಾಗೆಯೇ ಬ್ರಹ್ಮಚಾರಿಣಿಯಾಗಿ ಬಿಟ್ಟಳಲ್ಲಾ ! ಪೌರುಷವುಳ್ಳವನೆಂದು ಹೇಳಿಕೊಳ್ಳುವ ನೀನು ತಮ್ಮನ ಹೆಂಡಿರಲ್ಲಿ ಪುತ್ರೋತ್ಪಾ

ದನ ಮಾಡಲು ಶಕ್ತನಾಗಿದ್ದರೂ ಶಾಸ್ತ್ರವಿಧಿಯನ್ನುಲ್ಲಂಘಿಸಿ, ಅವರನ್ನು ಪರಪುರುಷರವಶಕ್ಕೆ ಕೊಟ್ಟಾಗಲೇ ನಿನ್ನ ನಪುಂಸಕತ್ವವು ಲೋಕಕ್ಕೇ ತಿಳಿದುಹೋಯಿತು. ಎಲೈ ಮರುಳೇ, ಈ ಸಭೆಯಲ್ಲಿ ಗೌಳಿಗನಿಗಿಂತಲೂ ಯೋಗ್ಯತೆಯಲ್ಲಿ ಅಧಿಕರಾದ ಎಂತೆಂತಹ ಮಹನೀಯರು ಬಂದು ಸೇರಿರುವರು? ನಾರದಾದಿ ಬ್ರಹ್ಮರ್ಷಿಗಳು ಎಷ್ಟೋ ಮಂದಿ ಸಭೆಯನ್ನಲಂಕರಿಸಿಲ್ಲವೆ? ಈ ರಾಜಮಂಡಲಿಯಕಡೆ ದೃಷ್ಟಿ ಕೊಟ್ಟು ನೋಡು. ನನ್ನಮಾತು ಹಾಗಿರಲಿ. ಈ ಮಹಾರಾಜರಲ್ಲ ಕೆಲವರು ಪರಮೇಶ್ವರನ ಸಮಪಙ್ತ್ಯಲ್ಲಿ ಕುಳಿತುಕೊಳ್ಳಲು ಅರ್ಹರೆನಿಸಿರುವರು. ಇನ್ನುಕೆಲವರು ಬ್ರಹ್ಮನ ಅರ್ಧಾಸನವನ್ನು ಸೇರಲು ತಕ್ಕಯೋಗ್ಯತೆಪಡೆದಿರುವರು. ಮತ್ತು ಅನೇಕ ರಾಜರು ಇಂದ್ರಪದವಿಯನ್ನು ಪಡೆಯಲಿಕ್ಕೆ ತಕ್ಕವರು. ಇಂತಹ ಮಹನೀಯರನ್ನೆಲ್ಲಾ ಕಡೆಗಣಿಸಿ, ಅಧಮನಾದ ಈ ಕೃಷ್ಣನಿಗೆ ನೀನು ಅಗ್ರಪೂಜೆಯನ್ನು ಹೇಗೆ ಮಾಡಿಸಿದೆ? ಛೀ ಛೀ ಬಿಡು. !

(ಧರ್ಮರಾಯನ ಕಡೆ ನೋಡಿ) ಎಲೈ ಯುಧಿಷ್ಠಿರನೆ, ನೀನು ಹೆಸರಿನಿಂದಧರ್ಮರಾಯನೆನಿಸಿದ್ದರೂ ಈಗಮಾಡಿಸಿದ ಈ ಕೃತ್ಯದಿಂದ ನಿನ್ನ ಆ ಹೆಸರಿಗೆ ಭಂಗವನ್ನು ತಂದುಕೊಂಡೆಯಲ್ಲಾ ! ಹೀಗೆ ಮಾಡುವುದು ನಿನಗೆ ಧರ್ಮವೇ? ಅಗ್ರಪೂಜೆಗೆ ಅರ್ಹನು ಎಂತವರೆಂದು ತಿಳಿದಿರುವೆ? ಸ್ನಾತಕ ವ್ರತವನ್ನು ಮಾಡಿದವನು, ಋತ್ವಿಜನು ಆಚಾರ್ಯನು, ಗುರುವು, ಮಹಾರಾಯನು ಇಂತವರು ಮಾತ್ರವೇ ಪೂಜಾರ್ಹರೆಂದು ನೀನು ಅರಿಯೆಯಾ? ಈಗೊಲ್ಲನು ಈ ಗುಂಪಿನಲ್ಲಿ ಯಾವುದಕ್ಕೆ ಸೇರತಕ್ಕವನೆಂದು ತಿಳಿದು ಇವನನ್ನು ಸತ್ಕರಿಸುವುದಕ್ಕೆ ಸಮ್ಮತಿಸಿದೆ? ಇವನು ಎಲ್ಲರಿಗಿಂತಲೂ ಹಿರಿಯನೆಂದು ಇವನನ್ನು ಪೂಜಿಸಿದೆಯಾ ? ಇವನ ತಂದೆಯಾದ ವಸುದೇವನು ಇವನಿಗಿಂತ

ವಯಸ್ಸಿನಲ್ಲಿ ದೊಡ್ಡವನೆಂದು ನಿನಗೆ ತಿಳಿಯದೆ ಹೋಯಿತೆ? ಇವನು ನಿನ್ನ ಬಂಧುವೆಂದು ಯೋಚಿಸಿದೆಯಾ? ನಿಮ್ಮ ಮಾವನಾದ ದ್ರುಪದರಾಯನು ನಿಮಗೆ ಇವನಿಗಿಂತ ಹೆಚ್ಚಿದ ಬಂಧುವಲ್ಲವೆ? ಆತನಿಗೆ ಅಗ್ರಪೂಜೆಯನ್ನು ಏತಕ್ಕೆ ಮಾಡಿಸಬಾರದಾಗಿತ್ತು? ಈ ಗೊಲ್ಲನು ನಿನಗೆ ಗುರುವೆಂದು ಇವನನ್ನೂ ಸತ್ಕರಿಸಿದೆಯಾ? "ಶಾಪಾದಪಿ ಶರಾದಪಿ" ಎಂಬಂತೆ ಕುಮಾರವರ್ಗಕ್ಕೆಲ್ಲಾ ಅಸ್ತ್ರವಿದ್ಯಾಭ್ಯಾಸ ಮಾಡಿಸಿ, ಧನುರ್ವಿದ್ಯಾ ಘಾಲಲೋಚನನೆಂದು ಹೆಸರು ಪಡೆದಿರುವ ದ್ರೋಣಾಚಾರ್ಯನೇ ಇಲ್ಲಿ ಕುಳಿತಿರುವಾಗ ಇವನು ಹೇಗೆ ಗುರುವೆನಿಸುವನು? ಅದೂ ಹಾಗಿರಲಿ. ಈ ಸದಸ್ಸಿನಲ್ಲಿ ಬ್ರಹ್ಮತ್ವಕ್ಕೆ ಕುಳಿತಿರುವ ವೇದವ್ಯಾಸ ಮಹರ್ಷಿಗಳಿಗಿಂತ ಇವನು ಪೂಜ್ಯನೆಂದು ಹೇಗೆ ಭಾವಿಸಿದೆ? ಎಲೈ ರಾಯನೆ, ನಿನ್ನ ಬುದ್ಧಿಯೆಲ್ಲಿಗೆ ಹೋಯಿತು? ನಿಮ್ಮ ಜ್ಜನಾದ ಈ ಭೀಷ್ಮನನ್ನಾದರೂ ಮೊದಲು ಪೂಜಿಸಬಾರದಾಗಿತ್ತೆ? ನಿನ್ನ ವಿದ್ಯಾಗುರುವಾಗಿಯೂ, ಗೌತಮಪುತ್ರನಾಗಿಯೂ ಇರುವ ಕೃಪಾಚಾರ್ಯನ ಹೆಸರು ನಿನ್ನ ನೆನಪಿಗೆ ಬರಲಿಲ್ಲವೊ? ಅದೂ ಇರಲಿ. ಇವನು ಧೀರನಾದುದರಿಂದ ಅಗ್ರಪೂಜೆ ಮಾಡಿಸಿದೆನೆಂದು ಹೇಳುವೆಯಾ? ನಿಮ್ಮ ಗುರುಪುತ್ರನಾದ ಅಶ್ವತ್ಥಾಮನಿಗಿಂತ ಇವನು ಧೀರನೆ? ಅದೂ ಹೋಗಲಿ, ಈ ಕೃಷ್ಣನೇ ವೀರನೆಂದು ಭಾವಿಸಿರಬಹುದು, ಜಗದ್ವಿಖ್ಯಾತವಿಕ್ರಮನಾದ ಕರ್ಣನ ಹೆಸರೇ ನಿನಗೆ ಮರೆತು ಹೋಯಿತೆ? ಈ ಕೃಷ್ಣನು ನಿನ್ನ ತಮ್ಮನಾದ ಅರ್ಜುನನ ಸ್ನೇಹಿತನೆಂದು ಹೇಳಬಹುದು, ಆ ಅರ್ಜುನನಿಗೆ ಇವನಿಗಿಂತ ಪರಮ ಮಿತ್ರನಾಗಿ ಗಂಧರ್ವರಾಜನಾದ ಚಿತ್ರರಥನನ್ನು ಪೂಜಿಸಿದ್ದರೆ ನಿನ್ನನ್ನು ಯಾರು ಆಕ್ಷೇಪಿಸುತ್ತಿದ್ದರು? ಇವನು ಮಹಾರಾಜನೆಂದು ಈ ಗೊಲ್ಲಗನಿಗೆ ಅಗ್ರಪೂಜೆಮಾಡಿಸಿದೆಯಾ? ನನ್ನನ್ನು ಬಿಟ್ಟರೂ ಈ

ಸಭೆಯಲ್ಲಿ ವಂದ್ಯರಾದ ರಾಜಾಧಿರಾಜರು ಎಷ್ಟೋಮಂದಿ ಇರಲಿಲ್ಲವೇ ? ಇಗೋನೋಡು, ನಿಮ್ಮ ಸೋದರಮಾವನಾದ ಶಲ್ಯನು, ಬಾಹ್ಲಿಕನು, ಭಗದತ್ತನು, ದುರ್ಯೋಧನನು, ದಂತವಕ್ತ್ರನು ಮೊದಲಾದ ಪ್ರಸಿದ್ಧರಾಜರುಗಳು ಅಸಂಖ್ಯಾತರಾಗಿ ಕುಳ್ಳಿರುವರಲ್ಲಾ ! ಇಂತಹ ಮಹನೀಯರನ್ನೆಲ್ಲಾ ಬಿಟ್ಟುಬಿಟ್ಟು ನೀಚನಾದ ಈಕೃಷ್ಣನಿಗೆ ಮೊದಲು ಸತ್ಕಾರಮಾಡಿಸಿ ಶ್ರೇಷ್ಠವಾದ ಈ ಯಜ್ಞವನ್ನೂ ಹಾಳುಮಾಡಿದೆಯಲ್ಲ ! ಅಗ್ನಿಪೂತವಾದ ಹವಿಸ್ಸನ್ನು ನಾಯಿಗೆ ಹಾಕಿದಂತೆ ಗೌರವವಾದ ಅಗ್ರಪೂಜಾಮರ್ಯಾದೆಯನ್ನು ಈ ಜಾತಿಭ್ರಷ್ಟನ ಪಾಲುಮಾಡಿ ಕೆಡಿಸಿದೆಯಲ್ಲ ! ನಿನಗೆ ಇದು ತರವಲ್ಲವು.

(ಶ್ರೀಕೃಷ್ಣನ ಕಡೆಗೆ ತಿರುಗಿ) ಎಲಾ ಗೋಪಾಲಬಾಲ, ಗೋಪಿಕಾಲೋಲ, ದುಶ್ಶೀಲಾ, ಈ ಯುಧಿಷ್ಠಿರನೇನೋ ಅಜ್ಞನು, ನಿನ್ನನ್ನು ಮೊದಲು ಸತ್ಕರಿಸಬೇಕೆಂದು ಇವನಿಗೆ ಉಪದೇಶಮಾಡಿದ ಭೀಷ್ಮನೂ ಒಬ್ಬ ಹುಚ್ಚನೇ. ಇವರು ನಿನ್ನನ್ನು ಅಗ್ರಪೂಜೆಗೆ ಬಾರೆಂದು ಕರೆದಮಾತ್ರದಿಂದಲೇ ನಿನ್ನ ಯೋಗ್ಯತೆಯನ್ನ ತಿಳಿದುಕೊಳ್ಳದೆ ಈ ಸತ್ಕಾರ್ಯವನ್ನ ನೀನು ಹೇಗೆ ಪರಿಗ್ರಹಿಸಿದೆ ? "ಅರಿಯದ ಜನರ ಗುಂಪಿನಲ್ಲಿ ಗಾಜೇಮಾಣಿಕ್ಯವೆನಿಸುವುದು" ಎಂಬನಾಣ್ನುಡಿಯಂತೆ ಗೊಲ್ಲದೊಡ್ಡಿಯಲ್ಲಿ ನೀನು ಹಿರಿಯನೆನಿಸಿಕೊಂಡಮಾತ್ರದಿಂದಲೇ ನೀನು ಈ ರಾಜಸಭೆಯಲ್ಲಿಯೂ ಮಾನ್ಯನಾಗಬಲ್ಲೆಯಾ? ಕುಲದಲ್ಲಿಯೂ, ಬಲದಲ್ಲಿಯೂ, ರಾಜ್ಯದಲ್ಲಿಯೂ, ಐಶ್ವರ್ಯದಲ್ಲಿಯೂ, ಸೇನಾಬಲದಲ್ಲಿಯೂ, ಇತರ ಸದ್ಗುಣಗಳಲ್ಲಿಯೂ ನಿನಗಿಂತಲೂ ಎಷ್ಟೋ ಪಾಲು ಉತ್ತಮರೆನಿಸಿಕೊಂಡಿರುವ ಹಲವು ಮಂದಿ ರಾಜರ್ಷಿಗಳು ಬಂದು ನೆರೆದಿರುವ ಈಮಹಾ ಸಭೆಯಲ್ಲಿ ಬಾಲನಾದ ನಿನಗೆ ಮನ್ನಣೆಯು ಸಲ್ಲುವುದೇ ? ನೀನು ಹುಟ್ಟಿದ್ದೆಲ್ಲಿ ? ಶಾಪಗ್ರಸ್ತವಾದ

ಯದುಕುಲದಲ್ಲಿ ಅಲ್ಲವೆ? ನೀನು ಹೇಳಿದ ಸ್ಥಳವು ಯಾವುದು? ದನಾ ಮೇಯಿಸುವ ಗೊಲ್ಲರಪಾಳ್ಯ—ನಿನ್ನ ವಾಸಸ್ಥಳವನ್ನು ನೋಡಿದರೆ ಸಮುದ್ರಮಧ್ಯದ ಸಣ್ಣನಡುಗಡ್ಡೆ. ಎಲಾ ಪೋರಾ! ಜರಾಸಂಧಾದಿ ವೀರರ ಎದುರಿಗೆ ನಿನ್ನ ಶೌರ್ಯವು ಸಾಗದೆ, ಹೇಡಿಯಾಗಿ ನೀನು ಓಡಿಹೋಗಿ ಅಡಗಿಕೊಂಡುದನ್ನು ಮರೆತುಬಿಟ್ಟೆಯಾ? ಇಂತಹ ಮೂರ್ಖರು ಮಾಡುವ ಯಜ್ಞದಲ್ಲಿ ಸತ್ಕಾರಕ್ಕೆ ಗೋಪೀಜಾರನಾದ ನೀನೇ ಅರ್ಹನಾದೆ! ಸರಿಸರಿ. ಇದು ಒಳ್ಳೆ ಯಜ್ಞ—ಹೇಡಿಯಾದ ಧರ್ಮರಾಯನು ಈ ಯಜ್ಞಕ್ಕೆ ತಕ್ಕರಾಜನು—ನಪುಂಸಕನಾದ ಈ ಗಂಗೆಯ ಮಗನು ಯಜ್ಞಕ್ಕೂ ರಾಜನಿಗೂ ತಕ್ಕ ಉಪದೇಶಕರ್ತನು—ಗೊಲ್ಲನಾಗಿ ದುರ್ಮಾರ್ಗನಾದ ನೀನು ಈ ಯಜ್ಞಕ್ಕೂ ರಾಜನಿಗೂ ಉಪದೇಶಕನಿಗೂ ತಕ್ಕಂತಹ ಪೂಜ್ಯನು. ಇವೆಲ್ಲವೂ ಒಂದಕ್ಕೊಂದು ಸರಿಯಾಗಿಯೇ ಕೂಡಿಸಿದಂತೆಯೇ ಆಯಿತು; ಇದು ನಮ್ಮಂತಹ ರಾಜರ ಗೌರವಕ್ಕೆ ತಕ್ಕ ಸ್ಥಳವೇ ಅಲ್ಲ.

(ಭೀಮನ ಕಡೆಗೆ ತಿರುಗಿ) ಎಲಾ ಹೊಟ್ಟೇಬಾಕಾ! ನೀನು ಮಹಾಬಲಶಾಲಿಯಾಗಿ ಭೀಮಸೇನನೆಂದು ಹೆಸರಿಟ್ಟುಕೊಂಡಿರುವೆ. ಹಾರುವನ ವೇಷದಿಂದ ಗಿರಿವ್ರಜಕ್ಕೆ ಹೋಗಿ, ಕಳ್ಳದಾರಿಯಿಂದ ಅರಮನೆಗೆ ನುಗ್ಗಿ, ವೀರನಾದ ಜರಾಸಂಧನನ್ನು ಕೊಂದಾಗಲೇ ನಿನ್ನ ಸಾಹಸವು ಗೊತ್ತಾಯಿತು. ಕಪಟಮಾರ್ಗಪ್ರವರ್ತಕರಾದ ನೀವು ಇಂತಹ ಯಾಗವನ್ನೇಕೆ ಮಾಡಿದಿರಿ? ಛೀ ಛೀ!! ಇಂತಹ ತುಚ್ಛವಾದ ಯಜ್ಞಕ್ಕೆ ನಾವು ಬಂದುದೇ ದೊಡ್ಡ ತಪ್ಪು.

(ಸಭೆಯ ಕಡೆ ನೋಡಿ) ಆಹಾ! ಎಂತಹ ಅವಿವೇಕ! ಬಲಶಾಲಿಯಾದ ಆ ಜರಾಸಂಧನೇ ನಿಜವಾಗಿ ರಾಜಸೂಯ ಯಾಗವನ್ನು ಮಾಡಿದವನೆಂದು ಹೇಳಬಹುದು. ಅಸಂಖ್ಯಾತರಾದ ರಾಜರನ್ನು

ಜಯಿಸಿ ತನ್ನ ಸೆರೆಮನೆಯಲ್ಲಿ ಹಾಕಿ, ದೊಡ್ಡ ಯಜ್ಞ ಮಾಡಿದವನು ಅವನೇ. ಅಂತಹ ಶೂರನನ್ನೂ ಮೋಸದಿಂದ ಕೊಲ್ಲಿಸಬೇಕೆಂದು ಈ ಭೀಮಾರ್ಜುನರನ್ನು ಕರೆದೊಯ್ದ ಕೃಷ್ಣನ ಯೋಗ್ಯತೆ ಏನೆಂದು ಹೇಳೋಣ. ತನ್ನತಾಯಿಯ ಅಣ್ಣನನ್ನೇ ತನ್ನ ಕೈಯಿಂದ ಕೊಂದು ಬಂದ ದ್ರೋಹಿಯು ಇವನು. ನನ್ನ ಮದುವೆಗೆಂದು ಗೊತ್ತು ಮಾಡಿದ್ದ ಭೀಷ್ಮಕರಾಜನ ಮಗಳಾದ ರುಕ್ಮಿಣಿಯನ್ನು ಕಳ್ಳತನದಿಂದ ಎತ್ತಿಕೊಂಡು ಹೋಗಿ ರಾಕ್ಷಸವಿವಾಹ ಮಾಡಿಕೊಂಡ ಘಾತುಕನು. ತನಗೆ ಮೊಲೆಯುಣಿಸಬಂದವಳ ಪ್ರಾಣವನ್ನು ಹೀರಿದ ಕೃಷ್ಣನು, ಗೋಪಿಕಾ ಸ್ತ್ರೀಯರ ಪಾತಿವ್ರತ್ಯ ಭಂಗಮಾಡಿದ ಜಾರಾಗ್ರಣಿಯು, ಈ ತುಡುಗನೂ ಮತ್ತು ತನ್ನಣ್ಣನಿಗೆ ಮದುವೆಯಾಗಲಿಕ್ಕೆ ಮುಂಚೆಯೇ ರಾಕ್ಷಸಿಯನ್ನು ಕೈಹಿಡಿದ ಹೊಟ್ಟೆಬಾಕನಾದ ಭೀಮನೂ ಈಸಭೆಗೆ ಕಳಂಕಪ್ರಾಯರಲ್ಲವೆ! ಆಹಾ! ಎಂತಹ ಅವಮಾನ !!!

ಈ ಪ್ರಕಾರವಾಗಿ ದುರಾತ್ಮನಾದ ಶಿಶುಪಾಲನು ಮದ್ಯಪಾನ ಮಾಡಿ ಮೈಮರೆತವನಂತೆ ರೋಷಪರವಶತೆಯಿಂದ ತನ್ನ ಮನಸ್ಸು ಬಂದ ಹಾಗೆಲ್ಲಾ ಶ್ರೀಕೃಷ್ಣಾದಿಗಳನ್ನೆಲ್ಲಾ ನಿಂದಿಸಿ ಮಾತನಾಡುತ್ತಾ ಬಂದನು. ಮಿಥ್ಯಾಪವಾದವನ್ನು ಕೇಳಿಕೊಂಡು ಶೂರರ ಸೈರಿಸುವರೆ! ಪ್ರತಿಯೊಬ್ಬನಿಗೂ ಆತ್ಮಗೌರವದ ಮೇಲೆ ದೃಷ್ಟಿಯಿಲ್ಲದೆ ಇರದು. ಈ ಜಡುನುಡಿಗಳನು ಕೇಳಿದೊಡನೆಯೇ ಪರಾಕ್ರಮಿಯಾದ ಭೀಮಸೇನನು ರೋಷಾರುಣಿತನೇತ್ರನಾಗಿ ಈ ದುರಾತ್ಮನ ತಲೆಯನ್ನು ಈಗಲೇ ಒಡೆದು ಯಾಗಕ್ಕೆ ಬಲಿಕೊಡುವೆನೆಂದು ತನ್ನ ಘೋರವಾದ ಗದಾದಂಡವನ್ನು ತೆಗೆದುಕೊಂಡು ಎದ್ದುಬಂದನು. ಕೃತವರ್ಮಾದಿ ಯದುವೀರರೆಲ್ಲರೂ ಧನುರ್ಬಾಣಗಳನ್ನು ಧರಿಸಿ ನಿಂತು ಆ ಶಿಶುಪಾಲನನ್ನು ನೋಡಿ “ಎಲಾ ಮೂಳ! ನೀನು

ಬಗುಳುತ್ತಿರುವೆ. ಸಾಕುನಿಲ್ಲಿಸು. ಜಗತ್ಸ್ವಾಮಿಯಾದ ದೇವದೇವನನ್ನು ನಿಂದಿಸುವ ನಿನ್ನ ನಾಲಿಗೆಯನ್ನು ಸೀಳಿ, ನಿನ್ನ ರಕ್ತಮಾಂಸಗಳಿಂದ ಶಾಕಿನೀದೇವತೆಗೆ ಔತಣ ಮಾಡಿಸುವೆನೆಂದು ಹೇಳಿ, ಯುದ್ಧಕ್ಕೆ ಸಿದ್ಧರಾದರು. ಸಹದೇವನು ಅತ್ಯಾಗ್ರಹದಿಂದ ಸಭೆಯಲ್ಲಿದ್ದವರನ್ನು ನೋಡಿ ಇಂತೆಂದನು.

ಅಶೇಷ ಮಹಾಜನರೂ ಕೇಳತಕ್ಕದ್ದು, ಅಜಾತ ಶತ್ರುವಾದ ಧರ್ಮರಾಯನು ಧರ್ಮಮಾರ್ಗದಿಂದಲೇ ಈ ಯಾಗವನ್ನು ಮಾಡಿದನು. ಸತ್ಯಪಾಲನೆಗೋಸ್ಕರ ತನ್ನ ಗುರುವನ್ನೂ ಲಕ್ಷ್ಯಮಾಡದೆ, ಸೋಲಿಸಿ, ಲೋಕವು ಹೊಗಳುವಂತೆ ಬ್ರಹ್ಮಚರ್ಯವನ್ನು ಪಾಲಿಸುತ್ತಿರುವ ಉಭಯಕುಲಪಿತಾಮಹನಾದ ಈದೇವವ್ರತನ ಆಜ್ಞೆಯಂತೆ ಪರಮಾತ್ಮನಾದ ಶ್ರೀಕೃಷ್ಣನಿಗೆ ನಮ್ಮಣ್ಣನ ಸಮ್ಮತಿಯಿಂದ ನಾನೇ ಅಗ್ರಪೂಜೆಯನ್ನು ಮಾಡಿದೆನು, ಈ ಸ್ವಾಮಿಯು ಪ್ರಕೃತಿವಿದೂರನು, ಜಗನ್ಮಾನ್ಯನು, ನಿರ್ಲಿಪ್ತನು, ನಿರ್ದೋಷಿಯು, ಮಹಾಮಹಿಮನಾದ ಈ ದೇವದೇವನನ್ನು ಈ ಸಭೆಯಲ್ಲಿ ಸಾಕ್ಷಾತ್ತಾಗಿ ಮೊದಲು ಸತ್ಕರಿಸುವ ಭಾಗ್ಯವು ಲಭಿಸಿದುದರಿಂದ ನಾವೆಲ್ಲರೂ ಕೃತಾರ್ಥರಾದೆವು. ಈತನ ಪೂಜೆಯಿಂದ ನಮ್ಮ ಯಜ್ಞವು ಸಾರ್ಥಕವಾಯಿತು. ಈ ಪರಮಾತ್ಮಸ್ವರೂಪನಾದ ವಾಸುದೇವನಿಗೆ ನಾವು ಮಾಡಿದ ಸತ್ಕಾರವು ಅನುಚಿತವೆಂದು ವಿರೋಧಿಸತಕ್ಕವರಿದ್ದರೆ ಎದ್ದು ಬರಲಿ, ಈ ಸ್ವಾಮಿಯನ್ನು ನಿಂದಿಸಿದ ದುರಾತ್ಮನಾದ ಈ ಶಿಶುಪಾಲನನ್ನು ಮೊದಲು ಕೆಡಹಿ, ಅವನ ಅನುಯಾಯಿಗಳಾದ ದುಷ್ಟರನ್ನು ಮರ್ದಿಸಿ, ಅವರ ತಲೆಯಮೇಲೆ ಈ ನನ್ನ ಎಡಗಾಲನ್ನಿಟ್ಟು ಮೆಟ್ಟುವೆನು. ಈ ಮಾತು ನಿಜವೆಂದು ತಿಳಿಯಿರಿ.

ಹೀಗೆ ಹೇಳಿ ತನ್ನ ಕಾಲಿನಿಂದ ನೆಲವನ್ನೊದೆಯುತ್ತಿದ್ದನು.

ಗದಾಪಾಣಿಯಾದ ಭೀಮಸೇನನ ಪ್ರತಾಪಕ್ಕೆ ಅಂಜಿಕೊಂಡು ಶಿಶುಪಾಲನು "ಶ್ರೀಕೃಷ್ಣನಿಗೆ ಅಗ್ರಪೂಜೆ ಮಾಡಿದುದರಿಂದ ರಾಜರ ಗೌರವಕ್ಕೆ ಹಾನಿಯುಂಟಾಯಿತು" ಎಂಬ ನೆವವನ್ನು ಇಟ್ಟುಕೊಂಡು, ಇಂತಹ ಕಡೆ ನಾವಿರುವುದು ಸಲ್ಲದೆಂದು ಸಭೆಯಿಂದ ಎದ್ದು ಹೊರಟನು. ಅಲ್ಲಿ ಕುಳಿತಿದ್ದ ರಾಜರಲ್ಲಿ ಅನೇಕರು ಒಬ್ಬರ ಮುಖವನ್ನೊಬ್ಬರು ನೋಡುತ್ತಾ, ಏನೂ ಮಾತನಾಡಲಾರದೆ ಮೌನವಾಗಿ ಕುಳಿತಿದ್ದರು. ಕೆಲವರು ಶಿಶುಪಾಲನ ಪಕ್ಷವನ್ನು ವಹಿಸಿ ಅವನನ್ನೇ ಹಿಂಬಾಲಿಸಿ ಹೋಗುತ್ತಿದ್ದರು. ಈ ರೀತಿಯಾಗಿ ಸಭೆಯಲ್ಲಿ ಎರಡು ಪಂಗಡವಾಗಿ, ಪರಸ್ಪರ ಯುದ್ಧವು ನಡೆಯುವ ಸಂಭವವುಂಟಾಯಿತು. ಇದನ್ನು ನೋಡಿ ಯುಧಿಷ್ಠಿರನು ತನ್ನ ಮನಸ್ಸಿನಲ್ಲಿ ಚಿಂತಿಸಿ, "ಹಾ ಹಾ! ಇದೇನು? ಪ್ರಮಾದಕ್ಕೆ ಬಂತು? ಇದುವರೆಗೆ ಯಾವ ಗದ್ದಲವೂ ಇಲ್ಲದೆ ಸಮಾಧಾನದಿಂದ ನಡೆದ ಯಾಗವು ಈಗ ಹೀಗೆ ವಿಪರೀತವಾಗಿ ಪರಿಣಮಿಸುವುದಲ್ಲಾ! ಉತ್ಸವಕ್ಕೆ ಬಂದ ರಾಜರು ಹೀಗೆ ಅಸಮಾಧಾನದಿಂದ ಹೊರಟು ಹೋಗುವುದು ಶ್ರೇಯಸ್ಕರವಲ್ಲ. ಇವರಿಗೆ ಸಮ್ಮತಿ ಹೇಳಿ ನೋಡೋಣ," ಎಂದು ತತ್‌ಕ್ಷಣವೇ ಎದ್ದು ಬಂದು ಆ ಶಿಶುಪಾಲನ ಕೈಹಿಡಿದು ತಡೆದು ನಿಲ್ಲಿಸಿ ಅವನೊಡನೆ ಇಂತೆಂದನು.

ಎಲೈ ಚೇದಿರಾಜನೇ, ಇದೇನು! ಹೀಗೆ ಕೋಪಿಸಿಕೊಂಡು ಹೊರಡಬಹುದೆ? ಕಾಮಾದಿ ಅರಿಷಡ್ವರ್ಗವನ್ನು ಗೆಲ್ಲಲಾರದ ಅರಸನು ರಾಜ್ಯವನ್ನು ಗೆದ್ದು ಆಳಬಲ್ಲನೆ? ಕೋಪವು ಪರಮಶತ್ರುವು. ಸಿಟ್ಟನ್ನು ಬಿಟ್ಟುಬಿಡು. ನಿನಗೆ ಅಜ್ಞಾನದಿಂದಲೋ ಭ್ರಾಂತಿಯಿಂದಲೋ, ದುಷ್ಕೃತ್ಯ ವಿಶೇಷದಿಂದಲೋ ಜಗದೀಶ್ವರನಾದ ಶ್ರೀಕೃಷ್ಣನ ವಿಷಯವಾಗಿ ದುರಭಿಪ್ರಾಯವು ಹುಟ್ಟಿರುವಂತೆ ಕಾಣುತ್ತಿದೆ. ನಿನ್ನ ಬಾ

ಯಿಂದ ಇಂತಹ ಅವಾಚ್ಯ ಶಬ್ದಗಳು ಹೊರಡಬಹುದೆ? ಮಿಂಚಿಹೋದುದಕ್ಕೆ ಚಿಂತಿಸಿ ಫಲವಿಲ್ಲವು. ಈಗಲಾದರೂ ನೀನು ಸಮಾಧಾನವನ್ನು ತಂದುಕೊಂಡು ಇದುವರೆಗೂ ನೀನು ಆಡಿದ ಮಾತುಗಳಿಗಾಗಿ ಪಶ್ಚಾತ್ತಾಪಪಡು. ಈ ಮಹಾಸಭೆಯಲ್ಲಿ ನಮಗಿಂತಲೂ ಪ್ರಾಜ್ಞರಾದ ರಾಜರು ಎಷ್ಟೋಮಂದಿ ಇಲ್ಲವೆ? ದಿವ್ಯಜ್ಞಾನಿಗಳಾದ ಮಹರ್ಷಿಗಳು ಎಷ್ಟು ಮಂದಿ ಬಂದು ಸೇರಿರುವರು. ನೋಡು. ಇವರಲ್ಲಿ ನಿನ್ನಂತೆ ಯಾವನಾದರೂ ಶ್ರೀಕೃಷ್ಣನಿಗೆ ಮಾಡಿದ ಅಗ್ರಪೂಜೆಯು ಸರಿಯಲ್ಲವೆಂದು ಹೇಳಿದರೇ ? ನಾವು ಮಾಡಿದ ಸತ್ಕಾರವು ಸರ್ವಸಮ್ಮತವಾಗಿರುವಾಗ ನೀನೊಬ್ಬನು ಮಾತ್ರ ಇದನ್ನು ಅಲ್ಲಗಳೆದು, ಈದೇವದೇವನನ್ನು ನಿಂದಿಸಿ, ಏತಕ್ಕೆ ಪಾಪ ಕೂಪದಲ್ಲಿ ಬೀಳುವೆ? ನೀನು ಹೀಗೆ ದುಡುಕಿ ಈ ಸಭೆಯಿಂದ ಎದ್ದುಹೋಗುವುದು ಸರಿಯಲ್ಲ. ಈ ಸ್ವಾಮಿಯ ಮಹಿಮೆಯ ವಿಷಯದಲ್ಲಿ ನಿನಗೇನಾದರೂ ಸಂಶಯಗಳಿದ್ದರೆ ನಿನಗಿಂತಲೂ ಹಿರಿಯರಾದ ಮಹಾತ್ಮರನ್ನು ಕೇಳಿ ತಿಳಿದುಕೋ.

ಈ ಪ್ರಕಾರ ಹೇಳಿ ಧರ್ಮರಾಯನು ಶಿಶುಪಾಲನ ಕೈಹಿಡಿದು ಕರೆದುಕೊಂಡು ಬಂದು, ಕುಳ್ಳಿರಿಸಿದನು. ಆಗ ಭೀಷ್ಮನು ಯುಧಿಷ್ಠರನನ್ನು ನೋಡಿ, ಇಂತೆಂದನು.

ಭೀಷ್ಮ—ಎಲೈ ರಾಯನೇ, ಈ ಶಿಶುಪಾಲನಿಗೆ ನೀನು ಇಷ್ಟು ಸಮಾಧಾನ ಹೇಳುವುದೇತಕ್ಕೆ ? ಇವನೊಬ್ಬನು ಕೋಪಿಸಿಕೊಂಡು ಹೋದರೆ ಅವನಿಂದ ಈ ಸಭೆಗೆ ಉಂಟಾಗುವ ಕೊರತೆ ಏನು ? ಮಹಾತ್ಮರು ಸೇರಿರುವ ಈ ಸಭೆಯಲ್ಲಿ ಇವನಂತಹ ಸ್ವಾಭಿಮಾನಿಗಳೂ, ದೈವದ್ವೇಷಿಗಳೂ ಇರಬಾರದು. ಇವನು ಹೊರಟು ಹೋದರೆ ಹೋಗಲಿ. ಚಿಂತಿಸಬೇಡ, ಬಿಡು. ಕಳ್ಳನು ಚಂದ್ರನನ್ನು ನಿಂದಿಸಿದರೆ ಅದರಿಂದ ಅಮೃತಕಿರಣನಾದ ಆ ಚಂದ್ರನಿಗೆ ಕೊರತೆಯೆ ? ನರಿಯ ಕೂ

ಗಿಗೆ ಸಿಂಹವು ಹೆದರುವುದೆ? ಜಗತ್ಕಾರಣನಾದ ಶ್ರೀಕೃಷ್ಣನು ಈ ದುರುಳನ ನಿಷ್ಠುರವಾಕ್ಯಗಳನ್ನು ಕೇಳಿ ಸೈರಿಸಿಕೊಂಡಿರುವನೆ? ನೀವೆಲ್ಲರೂ ನೋಡುತ್ತಾ ಸುಮ್ಮನೆ ಕುಳಿತುಕೊಂಡಿರಿ. ಈ ಸ್ವಾಮಿಯೇ ಜಗನ್ನಾಥನು. ಇವನೇ ಸರ್ವಮಾನ್ಯನು. ಪಂಡಿತರಿಗೆಲ್ಲಾ ಪಂಡಿತನು. ವೀರರಿಗೆಲ್ಲಾ ವೀರನು. ತುಂಟರಿಗೆಲ್ಲಾ ತುಂಟನು. ಈ ಮಹಾಪುರುಷನು ದುಷ್ಟನಿಗ್ರಹಾರ್ಥವಾಗಿಯೇ ಈ ಭೂಲೋಕದಲ್ಲಿ ಅವತರಿಸಿರುವುದರಿಂದ ಶಿಶುಪಾಲನಂತಹ ಮೂರ್ಖರಿಗೆ ತಕ್ಕ ಬುದ್ಧಿ ಕಲಿಸುವುದು ಈತನ ಕರ್ತವ್ಯವಾಗಿದೆ. ಈ ಮಹಾತ್ಮನ ಲೀಲಾವಿಭೂತಿಯಿಂದಲೇ ಈ ಸಮಸ್ತ ಜಗದ್ವ್ಯಾಪಾರಗಳೂ ನಡೆಯುತ್ತಲಿರುವುವು. ಈತನ ಇಚ್ಛೆಯಿಲ್ಲದೆ ಒಂದು ಹುಲ್ಲುಕಡ್ಡಿಯುಕೂಡ ಕದಲದು. ನೀನು ನೀಚನಾದ ಈ ಶಿಶುಪಾಲನನ್ನು ಪ್ರಾರ್ಥಿಸಬೇಕಾಗಿಲ್ಲ. ಸುಮ್ಮನೆ ಬಂದು ಕುಳಿತುಕೋ.

ಯುಧಿ—ಅರ್ಜುನನೇ, ನಿನ್ನ ಮಾತು ನಿಜವೇ. ಆದರೂ ಜೀವಿಗಳು ಭಗವನ್ಮಹಿಮೆಯನ್ನರಿಯದೆ ಭ್ರಮಪ್ರಮಾದಾದಿಗಳಿಂದಲೋ, ಜನ್ಮಾಂತರದುಷ್ಕೃತ್ಯದಿಂದಲೋ ಆ ದೇವದೇವನನ್ನು ನಿಂದಿಸಿದರೆ ಹೋದಹಾಗೆಯೇ ಅವರನ್ನು ಬಿಡಬಹುದೆ? ನಮ್ಮ ಯಾಗಕ್ಕೆ ಬಂದಿರುವ ಈ ರಾಜನಿಗೂ ಸಮಾಧಾನವಾದ ಮಾತುಗಳನ್ನಾಡಬೇಕಾದುದೇ ನಮ್ಮ ಧರ್ಮವು. ಈತನಿಗೆ ಮಾತ್ರವೇ ಅಲ್ಲ. ಈ ಸಭಿಕರಿಗೆಲ್ಲಾ ತಿಳಿಯುವಂತೆ ಜಗದ್ವಂದ್ಯನಾದ ಶ್ರೀಕೃಷ್ಣಪರಮಾತ್ಮನ ಮಹಿಮೆಗಳನ್ನು ವಿಸ್ತರಿಸಿ ಹೇಳಬೇಕೆಂದು ಪ್ರಾರ್ಥಿಸುತ್ತೇನೆ. ಈ ಯಾಗಕ್ಕೆ ದಯಮಾಡಿಸಿರುವವರೆಲ್ಲರೂ ಭಗವಚ್ಚರಿತೆಗಳನ್ನು ಕೇಳಿ ಧನ್ಯರಾಗಲಿ.

ಈ ಮಾತನ್ನು ಕೇಳಿ ಭೀಷ್ಮನು 'ಹಾಗೆಯೇ ಆಗಲಿ' ಎಂದು

ಒಪ್ಪಿ, ಪಾದಪ್ರಕ್ಷಾಳನೆ ಮಾಡಿಕೊಂಡು ಬಂದು, ಶುದ್ಧಾಚಮನವನ್ನು ಮಾಡಿ, ಆ ಪರಮಾತ್ಮನನ್ನು ಭಕ್ತಿಪೂರ್ವಕವಾಗಿ ತನ್ನ ಮನಸ್ಸಿನಲ್ಲಿ ಧ್ಯಾನಿಸಿ ಎದ್ದುನಿಂತು ಇಂತೆಂದನು.

ಸಭಿಕರಿರಾ, ದಯಮಾಡಿ ಲಾಲಿಸಬೇಕು. ಈ ಶ್ರೀಕೃಷ್ಣ ಪರಮಾತ್ಮನು ಭೂಭಾರನಿವಾರಣೆಗೋಸ್ಕರವೇ ಅವತರಿಸಿದ ಆದಿನಾರಾಯಣನೆಂದು ತಿಳಿಯಿರಿ. ವೇದಶಾಸ್ತ್ರಾದಿಗಳೆಲ್ಲವೂ ಈತನ ಮಹಿಮೆಗಳನ್ನು ಸಮಗ್ರವಾಗಿ ತಿಳಿಯಲಾರದೆ ಪೇಚಾಡುತ್ತಿವೆ. ಸನಕಸನಂದನಾದಿ ಬ್ರಹ್ಮರ್ಷಿಗಳು ಕೂಡ ಈ ಪರಾತ್ಪರ ವಸ್ತುವನ್ನು ಹೊಗಳಿ ಹೊಗಳಿ ಕೊನೆಗಾಣದೆ ಇನ್ನೂ ವಿಚಾರ ಮಾಡುತ್ತಲೇ ಇದ್ದಾರೆ. ಅಲ್ಪಜ್ಞನಾದ ನಾನು ಅನಂತಕಲ್ಯಾಣಗುಣಪರಿಪೂರ್ಣನಾದ ಈ ಜಗದೀಶನ ಮಹಿಮೆಗಳನ್ನು ವರ್ಣಿಸಲು ಶಕ್ತನಲ್ಲ. ಆದರೂ ನಮ್ಮ ಯುಧಿಷ್ಠಿರನ ಪ್ರಾರ್ಥನೆಯಂತೆ ನನಗೆ ತಿಳಿದಮಟ್ಟಿಗೆ ಶ್ರೀಕೃಷ್ಣಪರಮಾತ್ಮನ ಮಹಿಮೆಗಳಲ್ಲಿ ಕೆಲವನ್ನು ಸಂಕ್ಷೇಪವಾಗಿ ಶ್ರುತಪಡಿಸುತ್ತೇನೆ.

ವಿಶ್ವಾತ್ಮಕನಾದ ಈ ಪರಬ್ರಹ್ಮನು ಆದ್ಯಂತರಹಿತನು, ಅಪ್ರಮೇಯನು, ಸಚ್ಚಿದಾನಂದಮಯನು. ಈತನು ಅಣುವಿಗಿಂತ ಅಣುವಾಗಿಯೂ, ಮಹತ್ತಿಗಿಂತ ಮಹತ್ತಾಗಿಯೂ ಇರುವನು. ಈತನು ತನ್ನ ರಜೋಗುಣದಿಂದ ಲೋಕಗಳನ್ನು ಸೃಷ್ಟಿಸಿ ಬ್ರಹ್ಮಸ್ವರೂಪನೆನಿಸುವನು. ಸತ್ವಗುಣದಿಂದ ಲೋಕವನ್ನು ರಕ್ಷಿಸುತ್ತಾ ವಿಷ್ಣುವೆನಿಸಿರುವನು. ತಮೋಗುಣದಿಂದ ಎಲ್ಲವನ್ನೂ ಲಯಮಾಡುತ್ತಾ ರುದ್ರನೆಂಬ ಹೆಸರನ್ನು ಪಡೆದಿರುವನು. ಹೀಗೆ ಗುಣತ್ರಯಾತ್ಮಕನಾಗಿದ್ದರೂ ಪರಬ್ರಹ್ಮಸ್ವರೂಪನಾದ ಈತನು ನಿರ್ಗುಣನೆನಿಸಿರುವನು. ಅಂದರೆ ಪ್ರಕೃತಿ ಸಂಬಂಧದೋಷವು ಲೇಶವಾದರೂ ಇಲ್ಲದವನಾಗಿರು

ವನು. ತಾವರೇ ಎಲೆಯಮೇಲೆ ನಿಂತಿರುವ ಜಲಬಿಂದುವಿನಂತೆ ಈ ಮಹಾತ್ಮನು ಸಮಸ್ತವಸ್ತುಗಳಲ್ಲಿಯೂ ವ್ಯಾಪಿಸಿಕೊಂಡಿದ್ದರೂ ನಿರ್ಲಿಪ್ತನಾಗಿರುವನು. ಈ ಲೋಕದ ಜನರು ನಾನು, ನನ್ನದು ಎಂಬ ಅಹಂಕಾರ ಮಮಕಾರಗಳಲ್ಲಿ ಸಿಕ್ಕಿ, ಅಜ್ಞಾನದಿಂದ ಅಕೃತ್ಯಕರಣಾದಿ ಮಹಾಪಾತಕಗಳನ್ನು ಮಾಡಿ, ಅವುಗಳ ಫಲವನ್ನು ಅನುಭವಿಸುತ್ತಾ, ಜನನಮರಣಗಳೆಂಬ ಪ್ರವಾಹ ರೂಪವಾದ ಸಂಸಾರದಲ್ಲಿ ಸಿಕ್ಕಿ, ತಡಿಗಾಣದೆ ತೊಳಲಿ ಬಳಲುತ್ತಿರುವರು. ಪ್ರಾಜ್ಞರು ಬಂಧಮೋಕ್ಷಗಳಿಗೂ, ಜ್ಞಾನಾಜ್ಞಾನಗಳಿಗೂ ಪರಮಾತ್ಮನಾದ ದೇವರೇ ಕಾರಣನೆಂದು ತಿಳಿದು ನಿಶ್ಚಲಭಕ್ತಿಯಿಂದ ಈ ಭಗವಂತನನ್ನಾರಾಧಿಸಿ, ಆತನ ಕೃಪಾಕಟಾಕ್ಷಕ್ಕೆ ಪಾತ್ರರಾಗಿ, ಸಂಸಾರಬಂಧದಿಂದ ಮುಕ್ತರಾಗುವುದಲ್ಲದೆ, ಮನಸ್ಸಮಾಧಾನವನ್ನೂ, ನಿತ್ಯ ಸುಖವನ್ನೂ ಪಡೆಯುವರು. ಸಮಸ್ತಜಗತ್ತುಗಳಿಗೂ ಈ ಪರಮಾತ್ಮನೇ ಕಾರಣನಾಗಿದ್ದರೂ ಈತನು ಮಾತ್ರ ಮತ್ತಾವುದನ್ನೂ ಅವಲಂಬಿಸಿಲ್ಲ. ಈತನಿಗೆ ಸುಖದುಃಖಗಳಿಲ್ಲದುದರಿಂದ ದ್ವಂದ್ವಾತೀತನೆನಿಸಿರುವನು. ಈತನಿಗೆ ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಅವಸ್ಥೆಗಳೇ ಇಲ್ಲ. ಎಳ್ಳಿನಲ್ಲಿ ಎಣ್ಣೆಯೂ, ಕಟ್ಟಿಗೆಯಲ್ಲಿ ಅಗ್ನಿಯೂ ಅಡಗಿರುವಂತೆ ಈತನು ಸರ್ವಜ್ಞಚೈತನ್ಯಸ್ವರೂಪನಾಗಿಯೂ, ಸರ್ವವ್ಯಾಪಿಯಾಗಿಯೂ ಇರುವನು. ಸ್ಥೂಲದಲ್ಲಿಯೂ ಸೂಕ್ಷ್ಮದಲ್ಲಿಯೂ, ಒಳಗೂ ಹೊರಗೂ, ಸಮಸ್ತದಲ್ಲಿಯೂ ಈತನೇ ತುಂಬಿರುವುದರಿಂದ ಈತನಿಲ್ಲದ ಸ್ಥಳವೇ ಇಲ್ಲವು. ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಈತನೇ ಇರುವನು. ಸೂತ್ರಧಾರನು ನಾಟಕದಲ್ಲಿ ಬೊಂಬೆಗಳನ್ನು ಕುಣಿಸುತ್ತಿರುವಂತೆ ಜಗದ್ವ್ಯಾಪಾರಗಳೆಲ್ಲವೂ ಈ ಮಹಾತ್ಮನ ಪ್ರೇರಣೆಯಿಂದಲೇ ನಡೆಯುತ್ತಿರುವುವೆಂದು ಸಾಮಾನ್ಯವಾಗಿ ವ್ಯವಹಾರದಲ್ಲಿದ್ದರೂ ಈತನು

ಜೀವಿಗಳಿಗೆ ಅವರವರ ಯೋಗ್ಯತಾನುಗುಣವಾಗಿ ಕರ್ಮಸ್ವಾತಂತ್ರ್ಯವನ್ನು ಕೊಟ್ಟು, ಅವುಗಳ ಫಲಕ್ಕೆ ಅವರನ್ನೇ ಗುರಿಮಾಡುವನು. ಜೀವಿಯು ಭಗವಂತನಿಂದ ಅನುಗ್ರಹಿಸಲ್ಪಟ್ಟ ಬುದ್ಧಿಯಿಂದ ಯುಕ್ತಾಯುಕ್ತಗಳನ್ನು ತಿಳಿದುಕೊಂಡು, ತನ್ನ ಸ್ವಾತಂತ್ರ್ಯವನ್ನೂ ಸದ್ವಿನಿಯೋಗ ಮಾಡಿ, ಸತ್ಕಾರ್ಯದಲ್ಲಿ ಪ್ರವರ್ತಿಸಿದರೆ ಅದಕ್ಕೆ ತಕ್ಕ ಸುಖಸಂಪತ್ತುಗಳನ್ನು ದೈವಾನುಗ್ರಹದಿಂದ ಪಡೆಯುವನು. ಹಾಗೆ ನಡಿಸದೆ, ಜೀವಿಯು ತನ್ನ ಸ್ವಾತಂತ್ರ್ಯವನ್ನು ದುರ್ವಿನಿಯೋಗ ಮಾಡಿ, ಅಕೃತ್ಯಗಳನ್ನು ಮಾಡುತ್ತಾ ಬಂದರೆ ಅವುಗಳಿಗೆ ತಕ್ಕ ಶಿಕ್ಷೆಯನ್ನು ಅನುಭವಿಸುವನು.

"ಅತ್ಯುತ್ಕಟೈಃ ಪುಣ್ಯಪಾಪೈರಿಹೈವಫಲಮಶ್ನುತೇ"

ಹೆಚ್ಚಾದ ಪುಣ್ಯ ಪಾಪಗಳನ್ನು ಮಾಡಿದವರು ಇಹದಲ್ಲಿಯೇ ಅವುಗಳ ಫಲವನ್ನು ಹೊಂದುವರೆಂಬ ನಿಯಮದಂತೆ ಈ ಶಿಶುಪಾಲನು ತನ್ನ ಅಧಿಕಾರವನ್ನು ದುರುಪಯೋಗಪಡಿಸಿ, ಜ್ಞಾನವನ್ನು ಹೀನಮಾರ್ಗದಲ್ಲಿ ಬಿಟ್ಟು, ಸಾಕ್ಷಾತ್ಪರದೇವತಾಸ್ವರೂಪನಾದ ಶ್ರೀಕೃಷ್ಣನನ್ನು ನಿಂದಿಸಿ ಉತ್ಕಟವಾದ ದೈವದ್ರೋಹ ಮಾಡಿದುದರಿಂದ ಈ ಕ್ಷಣದಲ್ಲಿಯೇ ಈತನು ಭಗವಂತನ ಆಗ್ರಹಕ್ಕೆ ಗುರಿಯಾಗಿ ಶಿಕ್ಷಿಸಲ್ಪಡದೆ ಇರನು. ರಾತ್ರಿಕಾಲದಲ್ಲಿ ಅಜ್ಞಾನಿಯು ಕೃಷ್ಣ ಸರ್ಪವನ್ನು ನೋಡಿ ಇದು ಹಗ್ಗವೆಂದು ಭ್ರಾಂತಿಯಿಂದ ಹಿಡಿದುಕೊಂಡು ಅಪಾಯಕ್ಕೆ ಗುರಿಯಾಗುವಂತೆ ಇವನು ಅಜ್ಞಾನದಿಂದ ಸಾಕ್ಷಾದ್ದೇವದೇವನ ಸ್ವರೂಪವನ್ನು ತಿಳಿದುಕೊಳ್ಳದೆ ಹೀಗೆ ನಿಂದಿಸುತ್ತಿರುವುದರಿಂದ ಇವನು ಅದರ ಫಲವನ್ನನುಭವಿಸಲೇಬೇಕು. ಛಯವುಳ್ಳವನು ತನ್ನ ತಲೆಯನ್ನು ತಾನೇ ಕಡಿದುಕೊಂಡು ಕೈಯಲ್ಲಿ ಹಿಡಿದುಕೊಂಡಂತೆ ತೋರುವುದು ಕನಸಿನಲ್ಲಿ ಸಂಭವನೀಯವಾಗಿದ್ದರೂ ಈ ಶಿಶುಪಾಲನು

ಜಾಗ್ರದವಸ್ಥೆಯಲ್ಲಿಯೇ ತನ್ನ ತಲೆಯನ್ನು ತಾನೇ ಕಡಿದು ಕೈಯಲ್ಲಿ ಹಿಡಿದುಕೊಳ್ಳುವಂತೆ ಆಡುತ್ತಾನೆ. ಇದರ ಫಲವು ಇವನಿಗೆ ತಪ್ಪದು.

ಕಪಿಯು ಮಾಣಿಕ್ಯದ ಬೆಲೆಯನ್ನು ಹೇಗೆ ತಿಳಿಯುವುದು? ಆದರಂತೆ ಅಲ್ಪನಾದ ಈ ಶಿಶುಪಾಲನು ಅಗಾಧಮಹಿಮನಾದ ಪರಾತ್ಪರ ವಸ್ತುವಿನ ಮಹಿಮೆಯನ್ನು ತಿಳಿಯಬಲ್ಲನೆ? ತನಗೆ ತಿಳಿಯದಿದ್ದರೂ ಹೋಗಲಿ, ಹಿರಿಯರು ಹೇಳುವ ಆಪ್ತವಾಕ್ಯಗಳನ್ನಾದರೂ ಗ್ರಹಿಸಲಾರದೆ ಆ ಪರಮಾತ್ಮನನ್ನು ತಿರಸ್ಕಾರಬುದ್ಧಿಯಿಂದ ನಿಂದಿಸುತ್ತಲೇ ಇರುವನು. ಇದನ್ನು ನೋಡಿದರೆ ಇವನಿಗೆ ಕೊನೆಗಾಲವು ಸಮೀಪಿಸುತ್ತಿರುವಂತೆ ತೋರುತ್ತದೆ. ಈ ನೀಚನ ದುರ್ಗುಣಗಳನ್ನು ಹೇಳಿ ನಾಲಿಗೆಯನ್ನು ಅಪವಿತ್ರಗೊಳಿಸುವುದಕ್ಕಿಂತ ಪರಮಾತ್ಮನಾದ ಸ್ವಾಮಿಯ ಗುಣಕಥನವನ್ನು ಮಾಡಿ ಕೃತಾರ್ಥರಾಗೋಣ.

ಪ್ರಳಯ ಕಾಲದಲ್ಲಿ ಸಕಲಚರಾಚರ ವಸ್ತುಗಳೂ ಸೂಕ್ಷ್ಮಾವಸ್ಥೆಯನ್ನು ಹೊಂದಿ ವಿಸ್ಮೃತಿಯನ್ನು ಪಡೆದು, ಜಡವಾಗಿದ್ದಾಗ ಈ ಪರಮಾತ್ಮನು ಎಂದಿನಂತೆ ಸ್ಥಿರವಾಗಿ ಒಂದೇ ಸ್ಥಿತಿಯಲ್ಲಿರುವನು. ಸೃಷ್ಟಿಸ್ಥಿತಿಲಯಗಳಿಗೆ ಈ ಮಹಾತ್ಮನು ನಿತ್ಯನವನಲ್ಲ. ಸಚ್ಚೈತನ್ಯ ಸ್ವರೂಪನಾದ ಈ ದೇವನು ನರಜನ್ಮದಲ್ಲಿ ಹುಟ್ಟಿದ ಮಾತ್ರದಿಂದಲೇ ಈತನ ಮಹಿಮೆಗೆ ಯಾವ ಕುಂದೂ ಇಲ್ಲ. ಪಿಪೀಲಿಕಾದಿ ಬ್ರಹ್ಮಪರ್ಯಂತವೂ ಇರುವ ಸಮಸ್ತ ಪ್ರಾಣಿಗಳೂ ಈತನ ಸ್ವರೂಪವೇ ಅಲ್ಲದೆ ಬೇರೆ ಏನೂ ಇಲ್ಲವು. ಬ್ರಹ್ಮರುದ್ರೇಂದ್ರಾದಿ ಸಮಸ್ತ ದೇವತೆಗಳೂ ಈ ಪರಮಾತ್ಮನಿಂದಲೇ ಸೃಷ್ಟಿಸಲ್ಪಟ್ಟವರು, ಸೂರ್ಯಚಂದ್ರಾದಿ ಸಕಲಗ್ರಹಗಳನ್ನೂ, ಬ್ರಹ್ಮಾಂಡಗಳನ್ನೂ, ಈ ಲೋಕದಲ್ಲಿರುವ ಸಮಸ್ತ ಪರ್ವತ, ವನ, ನದಿ, ಸರೋವರಾದಿಗಳನ್ನು ಸೃಷ್ಟಿಸಿದವನು ಈ ದೇವದೇವನೇ. ಈ ಪರಮಪುರುಷನ ಮಹಿಮೆ

ಜ್ಞಾನಸ್ಥಾನವು. ಬಾಹುವೇ ಶೌರ್ಯಸ್ಥಾನವು. ತೊಡೆಗಳೇ ಲೋಕವ್ಯವಹಾರವನ್ನು ನಡಿಸತಕ್ಕ ಲಾಭಸ್ಥಾನವು. ಪಾದಗಳೇ ಕರ್ಮಸ್ಥಾನವು. ಆದುದರಿಂದಲೇ ಪುರುಷಸೂಕ್ತದಲ್ಲಿ ಬ್ರಾಹ್ಮಣಾದಿ ವರ್ಣಗಳು ಈ ಮಹಾತ್ಮನ ನಾಲ್ಕು ಅವಯವಗಳಿಂದ ಹುಟ್ಟಿದುವೆಂದು ಹೇಳಲ್ಪಟ್ಟಿದೆ. ಬ್ರಹ್ಮಜ್ಞಾನವೇ ಮುಖ್ಯವೃತ್ತಿಯಾಗಿ ಉಳ್ಳ ಬ್ರಾಹ್ಮಣರೂ, ದೇಶರಕ್ಷಣೆಗೆ ಅಗತ್ಯವಾದ ಕಾರ್ಯವೇ ಮುಖ್ಯೋದ್ದೇಶವಾಗಿ ವರ್ತಿಸುವ ಕ್ಷತ್ರಿಯರೂ, ದೇಶೋನ್ನತಿಗೆ ಸಹಕಾರಿಯಾದ ವ್ಯಾಪಾರಗಳನ್ನು ನಡಿಸುತ್ತಾ ಬರುವ ವೈಶ್ಯರೂ, ಕೃಷಿ, ಸೇವೆ ಮೊದಲಾದ ಸರ್ವಕಾರ್ಯಗಳನ್ನು ನಿರ್ವಹಿಸುವ ಶೂದ್ರರೂ ಈ ಪರಮಾತ್ಮನ ಶ್ರೇಷ್ಠಾವಯವಗಳಲ್ಲಿ ಸಂಭವಿಸಿದರೆಂದು ತಿಳಿಯತಕ್ಕದು. ಇಂತಹ ವರ್ಣವ್ಯವಸ್ಥೆಯೂ, ತತ್ತದಾಚಾರ ಧರ್ಮಗಳೂ ಯಾವ ದೇಶದಲ್ಲಿ ಸರಿಯಾಗಿ ನೆಲೆಗೊಂಡು ಅದರಂತೆ ಕಾರ್ಯಗಳು ನಡೆಯುತ್ತಾ ಬರುವುವೋ ಆ ದೇಶವು ಉನ್ನತಸ್ಥಿತಿಯಲ್ಲಿರುವುದೆಂಬುದಕ್ಕೆ ಸಂಶಯವಿಲ್ಲವು.

ಮಹಾಜನಗಳಿರಾ! ಯಾವ ಕಾಲದಲ್ಲಿ ಯಾವ ದೇಶದಲ್ಲಿ ಧರ್ಮಕ್ಷೀಣಕ್ಕೆ ಅವಕಾಶವುಂಟಾಗುವುದೋ ಆ ಕಾಲದಲ್ಲಿ ಅಂತಹ ಪ್ರದೇಶದಲ್ಲಿ ಪರಮಾತ್ಮಸ್ವರೂಪನಾದ ನಾರಾಯಣನು ಅವತರಿಸಿ ದುಷ್ಟರನ್ನು ನಿಗ್ರಹಿಸಿ, ಧರ್ಮಸಂಸ್ಥಾಪನೆ ಮಾಡುತ್ತಿರುವನು. ಮತ್ಸ್ಯಕೂರ್ಮಾದಿ ದಶಾವತಾರಗಳು ಮಾತ್ರವೇ ಆತನ ಲೀಲೆಯೆಂದು ತಿಳಿಯಬಾರದು. ಅನಂತಾವತಾರಗಳನ್ನೆತ್ತಿ ಆ ಮಹಾಪುರುಷನು ಸ್ಥೂಲಸೂಕ್ಷ್ಮರೂಪಗಳಿಂದ ಜಗದ್ವ್ಯಾಪಾರಗಳನ್ನು ನಡಿಸುತ್ತಾ ಧರ್ಮವನ್ನು ಉದ್ಧರಿಸುತ್ತಲಿರುವನು. ಆಪದ್ಬಾಂಧವನೂ, ಅನಾಥರಕ್ಷಕನೂ, ದಯಾಸಾಗರನೂ, ಭುಕ್ತಿಮುಕ್ತಿ ಪ್ರದಾಯಕನೂ ಆಗಿರುವ ಪರಮಾತ್ಮಸ್ವರೂಪನಾದ ಶ್ರೀಕೃಷ್ಣನ ದರ್ಶನದಿಂದ

ಲೂ, ಧ್ಯಾನದಿಂದಲೂ, ಸೇವೆಯಿಂದಲೂ, ನಾವು ಮಾಡಿದ ಪಾಪಗಳೆಲ್ಲವೂ ದಗ್ಧವಾಗಿ ಹೋಗುವುವು. ಈ ಸ್ವಾಮಿಗೆ ಶರಣಾಗತರಾಗಿ ಭಕ್ತಿಪೂರ್ವಕ ಆರಾಧಿಸುವವರೆಲ್ಲರೂ ಮುಕ್ತರಾಗುವರು.

ಪೂರ್ವ ಯುಗದಲ್ಲಿ ಕಾಲನೇಮಿಯೆಂಬ ರಾಕ್ಷಸನು ಮದಾಂಧನಾಗಿ ಸ್ವರ್ಗಲೋಕದ ಮೇಲೆ ದಂಡೆತ್ತಿ ಹೋಗಿ, ಇಂದ್ರಾದಿ ದಿಕ್ಪಾಲಕರನ್ನು ಹಿಡಿದು ಸೆರೆಯಲ್ಲಿ ಹಾಕಿ ತಾನೇ ತ್ರಿಲೋಕಾಧಿಪತ್ಯ ಮಾಡುತ್ತಾ ಲೋಕಕಂಟಕನಾಗಿದ್ದನು. ಆಗ ಈ ಸ್ವಾಮಿಯು ತನ್ನ ಚಕ್ರಾಯುಧದಿಂದ ಆ ದೈತ್ಯನನ್ನು ಸಂಹರಿಸಿ ಲೋಕರಕ್ಷಣೆ ಮಾಡಿದನು. ಆ ಕಾಲನೇಮಿಯೇ ಈ ಯುಗದಲ್ಲಿ ಕಂಸನೆಂಬ ಹೆಸರಿನಿಂದ ಹುಟ್ಟಿ, ಅಧರ್ಮಪ್ರವರ್ತಕನಾಗಿ, ಕೇಶಿ, ವತ್ಸ, ಧೇನುಕ, ಮೊದಲಾದ ದುಷ್ಟರಾಕ್ಷಸರನ್ನು ಸೇರಿಸಿಕೊಂಡು ಬಲು ದುಷ್ಟನೆನಿಸಿ ಮೆರೆಯುತ್ತಿದ್ದನು. ಭೂಭಾರನಿವಾರಣೆಗಾಗಿ ದೇವತೆಗಳ ಪ್ರಾರ್ಥನೆಯಂತೆ ಆ ಪರಬ್ರಹ್ಮನು ದೇವಕೀವಸುದೇವರ ಗರ್ಭದಲ್ಲಿ ಶ್ರೀಕೃಷ್ಣನೆಂಬ ಹೆಸರಿನಿಂದ ಅವತರಿಸಿ, ಅನಂತ ಮಹಿಮೆಗಳನ್ನು ತೋರಿಸಿದನು. ಇನ್ನೂ ಈತನು ಮಾಡಬೇಕಾದ ಕಾರ್ಯಗಳು ಎಷ್ಟಿವೆಯೋ ಪಾಮರರಾದ ನಮಗೆ ಅವು ತಿಳಿಯವು. ಇದುವರೆಗೆ ಈತನು ಮಾಡಿದ ಕೆಲಸಗಳಲ್ಲಿ ಕಂಸಾಸುರನ ಸಹಕಾರರಾದ ದುಷ್ಟರಾಕ್ಷಸರನ್ನೆಲ್ಲಾ ಮರ್ದಿಸಿದುದು ಲೋಕಹಿತಾರ್ಥವಾಗಿಯೇ ಹೊರತು ಅದರಲ್ಲಿ ಈ ಸ್ವಾಮಿಯ ಸ್ವಾರ್ಥವೇನೂ ಇಲ್ಲವು. ಇಂದ್ರನು ಅತಿವೃಷ್ಟಿಯಿಂದ ಗೋಕುಲಕ್ಕೆ ತೊಂದರೆಕೊಡಲು ಅವನ ಗರ್ವಭಂಗಕ್ಕಾಗಿ ಗೋವರ್ಧನ ಗಿರಿಯನ್ನು ಕಿರುಬೆರಳಿನಿಂದ ಎತ್ತಿ ಹಿಡಿದು, ಗೋವುಗಳನ್ನು ಗೋಪಾಲಕರನ್ನೂ ರಕ್ಷಿಸಿದನು. ಮತ್ತು ವಿಷಪೂರ್ಣವಾಗಿ ಕಾಡಿನಲ್ಲಿ ದನಗಳು ಕುಡಿಯಲಿಕ್ಕೆ ನೀರೇ ಇಲ್ಲದಂತೆ ಅನುಪಯೋಗವಾಗಿದ್ದ ಕಾಳಿಯನೆಂಬ

ಮಡುವಿನಲ್ಲಿ ನೆಲಸಿದ್ದ ಸರ್ಪಸಂತತಿಯನ್ನು ಓಡಿಸಿ, ಎಲ್ಲರಿಗೂ ಉಪಯೋಗವಾಗುವಂತೆ ಮಾಡಿದನು. ಶಾಪದಿಂದ ಅವಳಿ ಮರಗಳಾಗಿ ಬೆಳದಿದ್ದ ಗಂಧರ್ವರಿಗೆ ಶಾಪವಿಮೋಚನೆ ಮಾಡಿದನು. ತಾಯಿಯಾದ ಯಶೋದೆಗೆ ವಿರಾಡ್ರೂಪವನ್ನು ತೋರಿಸಿ, ತನ್ನ ಬಾಯಲ್ಲಿಯೇ ಚತುರ್ದಶ ಭುವನಗಳನ್ನೂ ನೋಡುವಂತೆ ಅನುಗ್ರಹಿಸಿದನು. ಈತನನ್ನು ಉಪಾಯದಿಂದ ಕೊಲ್ಲಸಬೇಕೆಂದು ದುರುಳನಾದ ಕಂಸನು ಮೋಸದಿಂದ ಕರೆಯಿಸಿದನು ಈ ಸ್ವಾಮಿಯು ಲೀಲಾಮಾತ್ರದಿಂದ ಅವನನ್ನು ನಿಗ್ರಹಿಸಿದನು. ತನಗೆ ಈಶ್ವರಾನುಗ್ರಹವಿರುವುದೆಂದು ಗರ್ವದಿಂದ ಮೆರೆಯುತ್ತಿದ್ದ ಬಾಣಾಸುರನನ್ನೂ ಭಂಗಿಸಿದನು. ಇಂತಹ ಸರ್ವಜನೋಪಕಾರಿಗಳಾದ ಈತನ ಕೆಲಸಗಳನ್ನು ಇಷ್ಟೇ ಎಂದು ತಿಳಿದುಹೇಳಲು ನಾನು ಶಕ್ತನಲ್ಲ.

ಲೋಕದಲ್ಲಿ ಯಾವ ವಿಷಯವನ್ನಾದರೂ ಸ್ವಾಭಾವಿಕವಾದ ಜ್ಞಾನದಿಂದ ತಿಳಿಯುವ ಮಹಾತ್ಮರೇ ಉತ್ತಮೋತ್ತಮರು. ಇಂಗಿತದಿಂದ ಗ್ರಹಿಸಿ ನಡೆಯುವವರು ಉತ್ತಮರು. ಕಿವಿಯಿಂದ ಕೇಳಿ ತಿಳಿಯುವವರು ಮಧ್ಯಮರು. ಕೇಳಿದರೂ ತಮ್ಮ ಕಣ್ಣುಗಳಿಂದ ಪ್ರತ್ಯಕ್ಷವಾಗಿ ಕಂಡ ಹೊರತು ಒಪ್ಪದೆ ಇರುವವರು ಅಧಮರು. ಓದಿಯೂ, ಕೇಳಿಯೂ, ಕಂಡೂ, ಕಣ್ಣಾರೆ ತಿಳಿದುಕೊಳ್ಳಲರಿಯದ ಈ ಶಿಶುಪಾಲನಂತಹ ಜಡಮತಿಗಳು ಅಧಮಾಧಮರೆಂದು ಹೇಳತಕ್ಕದು.

ಈಪ್ರಕಾರವಾಗಿ ಜ್ಞಾನಿಯಾದ ಭೀಷ್ಮನು ಭಗವಂತನ ಲೀಲಾವೈಭವಗಳನ್ನು ಹಲವು ಬಗೆಯಿಂದ ಬಣ್ಣಿಸಿ ಹೊಗಳುತ್ತಿದ್ದನು. ಆ ಮಹಾಸಭೆಯಲ್ಲಿದ್ದ ಸಮಸ್ತಜನರೂ ಭಕ್ತಿಪರವಶತೆಯಿಂದ ಪುಳುಕಿತಾಂಗರಾಗಿ ಭಗವನ್ಮಹಿಮೆಗಳನ್ನು ಸಾವಧಾನದಿಂದ ಕೇಳಿ, ಪರಬ್ರ

ಹ್ಮಸ್ವರೂಪನಾದ ಶ್ರೀಕೃಷ್ಣಸ್ವಾಮಿಯನ್ನು ಕಣ್ಣಾರೆನೋಡಿ, ಆನಂದಬಾಷ್ಪಗಳನ್ನು ಸುರಿಸುತ್ತಿದ್ದರು. ನಾರದಾದಿ ಮಹರ್ಷಿಗಳು ಜಯಶಬ್ದ ಪೂರ್ವಕ ಕರತಾಳಧ್ವನಿ ಮಾಡುತ್ತಿದ್ದರು. ದುರಾತ್ಮನಾದ ಶಿಶುಪಾಲನೊಬ್ಬನು ಮಾತ್ರ ಇದಕ್ಕೆ ವಿಪರೀತವಾದ ಸ್ಥಿತಿಯಲ್ಲಿದ್ದನು.

ಆಗ ಸಹದೇವನು ಮಂದಹಾಸದಿಂದ ಭೀಷ್ಮಾಚಾರ್ಯನ ಮುಖವನ್ನು ನೋಡಿ ಇಂತೆಂದನು :—ಆರ್ಯನೇ, ನೀನು ಸಮಸ್ತ ವೇದಸಾರವಾದ ಭಗವನ್ಮಹಿಮೆಯೆಂಬ ಅಮೃತರಸವನ್ನು ಕುಡಿಸುವುದಕ್ಕೆ ಬಂದರೂ ಕೂಡ "ಮರಣೋನ್ಮುಖರಿಗೆ ದಿವ್ಯೌಷಧವು ರುಚಿಸದೆ ನಿರುಪಯೋಗವಾಗಿ ಹೋಗುವಂತೆ" ಈ ಶಿಶುಪಾಲನಂತಹ ದುಷ್ಟರಿಗೆ ವಿಷಪ್ರಾಯವಾಗಿ ತೋರುವುದು ಸಹಜವಾಗಿದೆ. ಇಂತಹ ದುರ್ಮಾರ್ಗರಿಗೆ ದಂಡನೆಯೇ ತಕ್ಕಪ್ರಾಯಶ್ಚಿತ್ತವೆಂದು ತಿಳಿಯುತ್ತೇನೆ.

(ಸಭೆಯವರನ್ನು ನೋಡಿ) ಅಶೇಷಮಹನೀಯರಿಗೂ ಕೈಮುಗಿದು ಹೇಳುವೆನು. ಕೇಳಿರಿ, ಈಗೋಪಾಲಕೃಷ್ಣನೇ ಲೋಕಗಳ ಸೃಷ್ಟಿಸ್ಥಿತ್ಯಂತ ಕಾರಣನಾದ ಪರಮಾತ್ಮನೆಂದು ಇದುವರೆಗೆ ಸಿದ್ಧಾಂತಗೊಳಿಸಿದ ಆರ್ಯನ ಮಾತುಗಳೆಲ್ಲವನ್ನೂ ನೀವು ಗ್ರಹಿಸಿಯೇ ಇರುವಿರಿ. ಈ ಸ್ವಾಮಿಯೇ ನಮ್ಮ ಆಚಾರ್ಯನು, ಗುರುವು, ತಂದೆಯು ಮತ್ತು ದೇವರು. ಎಂದು ತಿಳಿದು ನಾವು ಇವನನ್ನು ಭಕ್ತಿಯಿಂದ ಮೊದಲಿನಲ್ಲಿಯೇ ಪೂಜಿಸಿದೆವು. ನಮ್ಮ ಜನ್ಮಾಂತರ ಸುಕೃತದಿಂದಲೋ, ಭಗವತ್ಪ್ರೇರಣೆಯಿಂದಲೋ, ತಮ್ಮಂತಹ ಮಹನೀಯರ ಉಪದೇಶ ಪ್ರಭಾವದಿಂದಲೋ, ನಾವು ಮಾಡಿದ ಈ ಯಾಗದ ಸತ್ಫಲದಿಂದಲೋ ಅಚಿಂತ್ಯಮಹಿಮನಾದ ಈ ಸ್ವಾಮಿಯನ್ನು ಸತ್ಕರಿಸುವ ಭಾಗ್ಯವು ನಮಗಾಯ್ತು, ಇದನ್ನು ಸಂದರ್ಶಿಸಿ ಕೃತಾರ್ಥರಾಗುವ ಪುಣ್ಯ

ವು ನಿಮಗೂ ಲಭಿಸಿತೆಂದು ತಿಳಿಯುತ್ತೇನೆ. ಇದುವರೆಗೆ ನಡೆದ ವಿಷಯಗಳನ್ನು ನೋಡಿಯೂ, ಭಗವನ್ಮಹಿಮೆಗಳನ್ನು ಕೇಳಿಯೂ, ಮನಸ್ಸಮಾಧಾನ ಪಡದೆ ಇರುವ ಈ ಶಿಶುಪಾಲನೇ ಆಗಲಿ ಇವನಂತೆ ದುರ್ಬುದ್ಧಿಯುಳ್ಳ ಮತ್ತಾವನೇ ಆಗಲಿ ಎದ್ದುಬಂದು ನನ್ನೊಡನೆ ಕಾದಲಿ. ಅಂತವನಿಗೆ ತಕ್ಕ ಪ್ರಾಯಶ್ಚಿತ್ತವನ್ನು ಈಗಲೇ ಮಾಡಿಬಿಡುವೆನು. ಇನ್ನೊಂದುಸಾರಿ ಒತ್ತಿ ಹೇಳುವೆನು ಎಲ್ಲರೂ ಕೇಳಿರಿ, (ಶಿಶುಪಾಲನನ್ನು ನೋಡುತ್ತಾ) ನಮ್ಮ ಉಪದೇಶ ವಾಕ್ಯಗಳಿಗೂ ನೀತಿಗೂ ಒಳಪಡದ ಈ ದುರಾತ್ಮನ ತಲೆಯನ್ನು ಈಗಲೇ ನನ್ನ ಎಡಗಾಲಿನಿಂದ ತುಳಿದು ಮೆಟ್ಟಿ ಹೀಗೆ ಒದೆಯುವೆನು.

ಈ ಪ್ರಕಾರವಾಗಿ ಹೇಳಿ ತನ್ನ ಕಾಲಿನಿಂದ ನೆಲವನ್ನು ಒದೆಯುತ್ತಿದ್ದನು. ಆಗ ಆ ಸಹದೇವನ ತಲೆಯಮೇಲೆ ಆಕಾಶದಿಂದ ಹೂವಿನ ಮಳೆ ಸುರಿಯಿತು. ಈತನ ಮಾತು ಸತ್ಯವೆಂದು ಮೂರುಸಾರಿ ಅಶರೀರವಾಣಿಯಾಯಿತು. ನಾರದಾದಿ ಮಹರ್ಷಿಗಳೆಲ್ಲರೂ ಪರಮಸಂತೋಷದಿಂದ ಜಯಧ್ವನಿ ಮಾಡುತ್ತಾ ಕೈಚಪ್ಪಾಳೆ ತಟ್ಟುತ್ತಿದ್ದರು. ಶಿಶುಪಾಲನ ಪಕ್ಷದ ಕೆಲವು ಅರಸರು ಮಾತ್ರ ದುಗುಡದಿಂದ ತಮ್ಮ ಮನಸ್ಸಿನ ದುಃಖವನ್ನು ಹೊರಪಡಿಸದೆ ಒಳಗೊಳಗೆ ಕುದಿಯುತ್ತಿದ್ದರು. ಶಿಶುಪಾಲನು ಎದೆಗುಂದದೆ ರೋಷಾವೇಶದಿಂದ ಯುದ್ಧ ಮಾಡಿಯೇ ನೋಡುವೆನು. ಆದುದಾಗಲಿ, ಎಂದು ಧೈರ್ಯದಿಂದ ಕಾದಲಿಕ್ಕೆ ಸಿದ್ಧನಾದನು.



# ಆರನೆಯ ಸಂಧಿ.

ಸೂ|| ದುರಾತ್ಮನಾದ ಶಿಶುಪಾಲನು ಜಗದೀಶ್ವರನಾದ ಶ್ರೀಕೃಷ್ಣ
ನನ್ನೆದುರಿಸಿ, ಆತನೊಂದಿಗೆ ಕಾದಿ ಮಡಿದನು.

ಶಿಶುಪಾಲನು ಪಾಂಡವರ ಮೇಲೆ ಯುದ್ಧ ಮಾಡಲು ಸಿದ್ಧನಾದುದನ್ನು ನೋಡಿ ಕೆಲವರು ರಾಜರು ಆತನ ಪಕ್ಷದಲ್ಲಿ ಸೇರಿ, ತಾವೂ ತಮ್ಮ ಚತುರಂಗ ಬಲವನ್ನು ಸಿದ್ಧ ಪಡಿಸಿಕೊಂಡರು. ಕೂಡಲೇ ಪಾಂಡವರ ಕಡೆ ಭೀಮಾದಿಗಳೂ, ಸಾತ್ಯಕಿ ಮೊದಲಾದ ಯದುವೀರರೂ, ಧೃಷ್ಟದ್ಯುಮ್ನಾದಿ ರಾಜರುಗಳೂ ತಮ್ಮ ತಮ್ಮ ಸೈನ್ಯಗಳೊಂದಿಗೆ ಕಾದಲಿಕ್ಕೆ ಸನ್ನದ್ಧರಾಗಿ ನಿಂತರು. ಇದನ್ನು ನೋಡಿ ಯುಧಿಷ್ಠಿರನು ಚಿಂತಿಸಿ ತನ್ನ ಮೂಗಿನ ಮೇಲೆ ಬೆರಳಿಟ್ಟುಕೊಂಡು, ಭೀಷ್ಮಾಚಾರ್ಯನನ್ನೂ ನೋಡಿ ಇಂತೆಂದನು.

ಯುಧಿ.—ಆರ್ಯನೇ, ರಾಜಮಂಡಲಿಯೆಲ್ಲವೂ ಎರಡು ಪಕ್ಷವಾಗಿ ಯುದ್ಧಕ್ಕೆ ಸಿದ್ಧವಾಗಿ ನಿಂತಿದೆ. ನಮ್ಮ ಸ್ವಾಮಿಯಾದ ಶ್ರೀಕೃಷ್ಣನ ನಿಂದೆಯನ್ನು ಕೇಳಿ ವ್ಯಸನ ಪಡುತ್ತೇನೆ. ಯಜ್ಞವು ಪೂರ್ಣವಾಗದೆ ಮಧ್ಯದಲ್ಲಿ ಇದೊಂದು ವಿಘ್ನವು ಒದಗಿತಲ್ಲಾ ! ಈಗ ಏನು ಮಾಡಬೇಕೆಂಬುದು ತೋರದೆ ನನ್ನ ಮನಸ್ಸು ಕಳವಳಗೊಂಡಿದೆ. ಪೂಜ್ಯರಾದ ನೀವು ಈ ಸಂದರ್ಭದಲ್ಲಿ ತಕ್ಕ ಯೋಚನೆ ಮಾಡಿ ನಮಗೆ ಅಪವಾದಬಾರದಂತೆ ಕಾಪಾಡಬೇಕೆಂದು ಪ್ರಾರ್ಥಿಸುತ್ತೇನೆ.

ಭೀಷ್ಮ.—ಎಲೈರಾಜನೆ ! ಏತಕ್ಕೆ ಹೆದರುತ್ತೀಯೆ ? ಗೂಗೆಯು ಮರಿಗಳು ಹಗಲು ಹೊತ್ತು ಚಿಕ್ಕಿನ ಮೇಲೆ ಬಿದ್ದು ಜೀವಿಸಬ

ಲ್ಲವೆ? ಮಂಜಿನ ಹಿಂಡು ಸಹಸ್ರಗಲಲ್ಲಿ ಪ್ರಕಾಶಿಸುತ್ತಿರುವ ಸೂರ್ಯನನ್ನು ಏನು ಮಾಡಬಲ್ಲುದು? ಕೋಪಗೊಂಡ ಸಿಂಹವನ್ನು ನಾಯಿಗಳು ಅಂಜಿಸಲಾದೀತೆ? ಈ ಕ್ಷುದ್ರಶಿಶುಪಾಲಾದಿಗಳು ಜಗನ್ನಾಯಕನಾದ ಸ್ವಾಮಿಯ ಎದುರಿಗೆ ನಿಂತು ನಿರ್ವಹಿಸಬಲ್ಲರೆ? ಚಿಂತಿಸಬೇಡ. ನಮ್ಮ ಸ್ವಾಮಿಯು ಈ ಬಡಅರಸುಗಳನ್ನೋಡಿಸಿ ದುಷ್ಟನಾದ ಶಿಶುಪಾಲನನ್ನು ನಿಗ್ರಹಿಸದೆ ಇರನು. ಈ ನೀಚರ ಶೌರ್ಯವು ಶ್ರೀಕೃಷ್ಣನ ಎದುರಿಗೆ ನಡೆಯುವುದಿಲ್ಲ.

ಈ ಮಾತನ್ನು ಕೇಳಿ ಚೇದಿರಾಜನಾದ ಶಿಶುಪಾಲನು ಕೋಪದಿಂದ ಭೀಷ್ಮನ ಕಡೆ ನೋಡಿ ಇಂತೆಂದನು.

ಎಲಾ ನಪುಂಸಕನಾದ ಗಾಂಗೇಯನೇ, ವೀರಾಗ್ರಣಿಯಾದ ನನ್ನನ್ನು ನಿಂದಿಸಿ ಮಾತನಾಡುತ್ತಿರುವೆಯಾ? ಜಂಬಗಾರನಾದ ನೀನು ಬರಿಯ ಬಣಹರಟೆಯವನೇ ಹೊರತು ಕಾರ್ಯಶೂರನಲ್ಲ. ಗೋವಳರ ಹಿರಿಯನಾದ ಈ ಪೋರನನ್ನು ಹೊಗಳಿ ಹೊಗಳಿ, ಉಬ್ಬಿಹೋಗುತ್ತಿದ್ದೀಯೆ. ನಿನಗೆ ನಾಚಿಕೆ ಎಂಬುದು ಸ್ವಲ್ಪವೂ ಇಲ್ಲವೆಂದು ತಿಳಿಯುತ್ತೇನೆ. ಯಾವ ಗುಣಗಳಿಂದ ಈ ಕೃಷ್ಣನು ಎಲ್ಲರಿಗಿಂತಲೂ ದೊಡ್ಡವನೆಂದು ಸ್ಥಾಪಿಸುತ್ತೀಯೆ? ರಾಜಾಧಮರಾದ ಯಾದವರು ಎಂದಿಗೂ ಪೂಜಾರ್ಹರಾಗಲಾರರು. ಬಿಡು ಬಿಡು. ಏತರ ಮಾತುಗಳಾಡುವೆ! ಈ ನೀಚನನ್ನು ಬಣ್ಣಿಸುವುದನ್ನು ನಿಲ್ಲಿಸು. ಇನ್ನು ಹೆಚ್ಚಾಗಿ ಬಗುಳಿದರೆ ನಿನ್ನ ನಾಲಿಗೆಯನ್ನೂ ಕೊಯ್ದುಬಿಡುವೆನು. ನೀನು ಮುದುಕನು. ದುರ್ವ್ಯಸನಿ. ತೊಂಡಿನ ತಾರುಮನೆ. ಕುಲಹೀನರಿಗೆ ಆಶ್ರಯನು. ಹೀಗೆ ಭಂಡನಾದ ನಿನ್ನ ಪುಂಡನ್ನಡಗಿಸಿದ ಬಳಿಕ ಉಳಿದವರನ್ನು ವಿಚಾರಿಸಿಕೊಳ್ಳುತ್ತೇನೆ.

ಸಭಿಕರ ಕಡೆ ತಿರುಗಿ ಮಹಾರಾಜರುಗಳಿರಾ, ಈಗೊಲ್ಲನ

ಪೂರ್ವಸ್ಥಿತಿಯನ್ನು ಕೇಳಿಲ್ಲವೇನೋ ? ಸ್ವಲ್ಪಮಟ್ಟಿಗೆ ವಿವರಿಸುವೆನು ಕೇಳಿರಿ. ಇವನು ಚಿಕ್ಕಂದಿನಲ್ಲಿ ತನಗೆ ಮೊಲೆಯೂಡಿಸಿದ ಅಬಲೆಯ ಪ್ರಾಣವನ್ನು ಹಿಂಡಿದ ಗಂಡಸು, ಬಂಡಿಯನ್ನು ಕಾಲಲ್ಲಿ ಪುಡಿ ಮಾಡಿದ ಶೂರನು, ಅವಳಿ ಮರಗಳನ್ನು ಮುರಿದ ವೀರನು, ತನ್ನ ಮೇಲೆ ಬಿದ್ದ ಕತ್ತೆ, ಎತ್ತು, ಮುಂತಾದ ಬಡಪ್ರಾಣಿಗಳನ್ನು ಕೊಂದ ಸಾಹಸಿಗನು. ಇವನು ಒಂದು ಹಕ್ಕಿಯನ್ನು ಮುರಿದ ಮಾತ್ರದಿಂದ ಶೂರಾಗ್ರಣಿಯೆನಿಸಬಲ್ಲನೆ? ಇವನು ಬೀಸುವ ಗಾಳಿಯನ್ನು ನಿಲ್ಲಿಸಿದನಂತೆ ! ಒಂದು ಕರುವಿನ ಕಾಲು ಹಿಡಿದು ಒಗೆದನಂತೆ ! ಹಾವಿನಮೇಲೆ ನಿಂತು ಕುಣಿದನಂತೆ ! ಗೊಲ್ಲದೊಡ್ಡಿಯಲ್ಲಿ ಇವನೇ ದೊಡ್ಡಗೌಡನಂತೆ ! ಸಣ್ಣ ಗುಡ್ಡವನ್ನು ಎತ್ತಿ ಕೊಡೆ ಹಿಡಿದನಂತೆ ! ಇಂದ್ರನ ಬಲಿಗಾಗಿ ಇಟ್ಟ ಕೂಳನ್ನೆಲ್ಲಾ ಒಬ್ಬನೇ ತಿಂದು ಬಿಟ್ಟನಂತೆ ! ಆಹಾ!! ಇವನು ಒಬ್ಬ ಅಗಸನನ್ನು ಕೊಂದು ದೊರೆಯ ಮಡಿ ವಸ್ತ್ರಗಳನ್ನು ಕಸಿದು ಕೊಂಡನಂತೆ! ಹೂವಾಡಿಗಿತ್ತಿಯಿಂದ ಗಂಧಪುಡಿಯನ್ನು ಕಿತ್ತುಕೊಂಡು ಅವಳ ಮೈಯ ಡೊಂಕನ್ನು ತಿದ್ದಿದನಂತೆ! ಕಂಸನ ಆನೆಯನ್ನು ಕೊಂದನಂತೆ? ಮಲ್ಲರನ್ನು ಮುರಿದನಂತೆ! ಇವೆಲ್ಲಾ ಎಷ್ಟರ ಘನಕಾರ್ಯಗಳು? ಸಲಹಿದೊಡೆಯನ ಪ್ರಾಣ ತೆಗೆದ ದ್ರೋಹಿಯನ್ನು ಹೊಗಳಬಹುದೆ? ಇವನ ತಾಯಿಯು ಆ ಕಂಸನ ಸಾಕ್ಷಾತ್ಸಹೋದರಿಯಲ್ಲವೆ? ಅಂತಹ ಸೋದರಮಾವನನ್ನೇ ಕೊಂದವನನ್ನು ಯೋಗ್ಯನೆಂದೆಣಿಸುವಿರಾ? ಇಂತಹ ಅಯೋಗ್ಯವಾದ ಕೃತ್ಯಗಳನ್ನಾಚರಿಸಿದ ಈ ಪಾಪಿಯು ಜಗತ್ಕರ್ತನಾದಾನೆ?

ಮರಳಿ ಭೀಷ್ಮನ ಕಡೆ ತಿರುಗಿ—ಎಲಾ ಭೀಷ್ಮಾ ! ನೀನು ಹಿರಿಯನೆಂದು ಹೊಗಳುತ್ತಿರುವ ಈ ಪುಂಡನು ಎಷ್ಟು ಮಂದಿ ಗೋಪಿಕಾಸ್ತ್ರೀಯರ ಪಾತಿವ್ರತ್ಯ ಭಂಗಮಾಡಿರುವನೋ ಹೇಳ

ಬಲ್ಲೆಯಾ ? ಅದನ್ನು ಹೇಳಲಿಕ್ಕೆ ನೀನು ನಾಚಿಕೊಂಡೆಯಾ ? ಈ ಹೇಡಿಯು ಜರಾಸಂಧನ ಭಯದಿಂದ ಓಡಿಹೋಗಿ, ಸಮುದ್ರಮಧ್ಯದಲ್ಲಿ ಅಡಗಿಕೊಂಡುದನ್ನು ಹೇಳಲುಮರೆತು ಬಿಟ್ಟೆಯಾ? ಇವನು ಭೀಮಾರ್ಜುನರೊಂದಿಗೆ ಮಾರುವೇಷದಿಂದ ಮಗಧರಾಜ್ಯಕ್ಕೆಹೋಗಿ ಕಳ್ಳದಾರಿಯಲ್ಲಿ ಅರಮನೆಗೆ ನುಗ್ಗಿದುದನ್ನೂ, ಕಪಟದಿಂದ ಜರಾಸಂಧನನ್ನು ಕೊಂದುದನ್ನೂ ಹೇಳುವುದಕ್ಕೆ ನಿನಗೆ ಬಾಯಿ ಬಾರದೆ ಹೋಯಿತೇನೋ ? ಸಾಕುನಿಲ್ಲಿಸು. ಈ ದ್ರೋಹಿಯ ಪೂರ್ವೋತ್ತರ ಹೇಳಲಿಕ್ಕೆ ನನಗೆ ಸಂಕೋಚವಾಗುತ್ತದೆ, ಸಾಕಪ್ಪಾ ! ಸಾಕು.

ಆಗ ಭೀಷ್ಮನು ಸಭಿಕರನ್ನು ನೋಡಿ, ಮಹನೀಯರೇ, ಈ ಶಿಶುಪಾಲನು ವೀರನೇ ಆಗಿರಬಹುದು. ಆದರೂ ಈತನು ದೈವದ್ರೋಹಿಯಾಗಿ ಆಡುತ್ತಿರುವ ಮಾತುಗಳನ್ನು ಕೇಳಲಿಕ್ಕೆ ನನಗೆ ತಲೆ ನೋಯುವುದು. ಈ ನೀಚನು ಸ್ವಾಮಿಯ ಮೇಲೆ ಹೊರಿಸುವ ನಿಂದಾವಾಕ್ಯಗಳೆಲ್ಲವೂ ಆದೇವದೇವನಿಗೆ ಭೂಷಣವೇ ಹೊರತು ಕಳಂಕವನ್ನು ತರುವವುಗಳಲ್ಲ, ದಯಮಾಡಿ ಕೇಳಿರಿ, ಜಗನ್ನಿಯಾಮಕನಾದ ಭಗವಂತನು ಈ ಭೂಮಿಯಲ್ಲಿ ಅವತರಿಸಿದುದು ದುಷ್ಟನಿಗ್ರಹಾರ್ಥವಾಗಿಯೇ ಅಲ್ಲದೆ ಇವರಲ್ಲಿ ಸ್ವಾಮಿಗೆ ಸ್ವಾರ್ಥವೇನಿರುವುದು? ಈ ನೀಚನಾದ ಶಿಶುಪಾಲನು ಆರೋಪಿಸಿದ ದೋಷಗಳನ್ನೆಲ್ಲಾ ವಿಮರ್ಶಿಸೋಣ, ದುಷ್ಟನಾದ ಕಂಸನು ಶಿಶುವಾದ ಕೃಷ್ಣನೆಲ್ಲಿರುವನೆಂಬುದು ತಿಳಿಯದೆ, ದೇಶದಲ್ಲಿರುವ ಎಳಗೂಸುಗಳನ್ನೆಲ್ಲಾ ಕೊಂದು ಬಿಡಬೇಕೆಂದು ಆಜ್ಞೆ ಮಾಡಿದನು ! ಇದೆಂತಹ ಅನ್ಯಾಯ ! ಆ ಕಂಸನ ಅಪ್ಪಣೆಯಿಂದ ಪೂತನಿಯೆಂಬ ರಾಕ್ಷಸಿಯು ಎದೆಗೆ ವಿಷವನ್ನು ಬಳಿದುಕೊಂಡು, ಆ ಸಂಚಿನಿಂದ ಸ್ವಾಮಿಯನ್ನು ಕೊಲ್ಲಬಂದಳು. ಅಂತಹ ದ್ರೋಹಿಣಿಯನ್ನು ಕೊಲ್ಲದೆ ಬಿಟ್ಟಿದ್ದರೆ ಲೋಕಾನುಗ್ರಹವಾಗು

ವುದು ಹೇಗೆ? ಆದುದರಿಂದಲೇ ವಿಷದ ಮೊಲೆಯುಣಿಸಬಂದ ರಾಕ್ಷಸಿಯನ್ನು ನಿಗ್ರಹಿಸಬೇಕಾಯಿತು. ಶಕಟಾಸುರನು ತೊಟ್ಟಿಲಲ್ಲಿ ಮಲಗಿದ್ದ ಸ್ವಾಮಿಯನ್ನು ಕೊಲ್ಲಬಂದುದರಿಂದ ಆ ಬಂಡಿಯನ್ನು ಕಾಲಲ್ಲಿ ಒದೆದು ಆ ದುಷ್ಟನನ್ನು ಮಡುಹಿದನು. ಹೀಗೆಯೇ ಕಾಡಿನಲ್ಲಿ ಇವನನ್ನು ಕೊಲ್ಲಬಂದ ವತ್ಸ, ಧೇನುಕ, ಬಕ, ಅಘ, ಮುಂತಾದ ದುರುಳರಿಗೆ ತಕ್ಕ ಶಿಕ್ಷೆಮಾಡಿ ಗೋಕುಲವನ್ನು ರಕ್ಷಿಸಿದನು, ಕಾಳೀಯ ಮಡುವಿನ ನೀರು ಸರ್ಪವಿಷದಿಂದ ಪಾನಕ್ಕೆ ಅನರ್ಹವಾಗಿ ಹೋಗಿದ್ದುದರಿಂದ ಆ ಸರ್ಪವನ್ನು ಮೆಟ್ಟಿ ಸಮುದ್ರಕ್ಕೆ ಕಳುಹಿ ಜಲವನ್ನು ಪರಿಶುದ್ಧ ಮಾಡಿದನು, ಬ್ರಹ್ಮನು ಈ ಸ್ವಾಮಿಯ ಮಹಿಮೆಯರಿಯದೆ, ಗೋಗೋಪಬಾಲರನ್ನೆಲ್ಲಾ ಕದ್ದೊಯ್ಯಲು ವಿಶ್ವಮೂರ್ತಿಯಾದ ನಮ್ಮೊಡೆಯನು ಪಶುಗಳ, ಮತ್ತು ಪಶುಪಾಲಕರ ರೂಪವನ್ನೆಲ್ಲಾ ತಾನೇ ಧರಿಸಿ, ಬ್ರಹ್ಮಸೃಷ್ಟಿಯನ್ನೇ ಮರೆಯಿಸಿ ಬಿಡಲು, ಆ ಬ್ರಹ್ಮನು ಕೆಲವುದಿನ ನೋಡಿ, ಗರ್ವವನ್ನ ಬಿಟ್ಟು, ಸ್ವಾಮಿಯ ಬಳಿಗೆ ಬಂದು ಕ್ಷಮಾಪಣೆಬೇಡಿ, ಅವುಗಳನ್ನು ಆತನ ಸನ್ನಿಧಿಯಲ್ಲಿ ಒಪ್ಪಿಸಿದನು. ನಂದರ ಪಾಳ್ಯವನ್ನೇ ಮುಳುಗಿಸಿ ಬಿಡಬೇಕೆಂದು ಅವಿಚ್ಛಿನ್ನವಾಗಿ ಮಳೆಸುರಿಸಿದ ಇಂದ್ರನ ಗರ್ವವನ್ನು ಭಂಗಿಸುವುದಕ್ಕೆ ಈತನು ಗೋವರ್ಧನ ಗಿರಿಯನ್ನು ಸಪ್ತರಾತ್ರಗಳ ತನಕ ಕಿರುಬೆರಳಿನಲ್ಲಿ ಎತ್ತಿ ಕೊಡೆಹಿಡಿದು ಸಮಸ್ತ ಗೋಪಾಲಕರನ್ನೂ ರಕ್ಷಿಸಿದನು, ಶ್ರೀಕೃಷ್ಣನ ಅಗಾಧ ಮಹಿಮೆಯನ್ನು ದುರಹಂಕಾರಿಯಾದ ಈ ಅಜ್ಞನು ಬಲ್ಲನೆ ? ಹೀಗೆಯೇ ಶ್ರೀಕೃಷ್ಣನು ನಡಿಸಿದ ಪ್ರತಿ ಒಂದು ಕಾರ್ಯಕ್ಕೂ ಕಾರಣಗಳು ಪುರಾಣಗಳಲ್ಲಿ ಪ್ರಸಿದ್ಧವಾಗಿಯೇ ಇವೆ. ಅಲ್ಪಜ್ಞರಾದ ಜನರಿಗೆ ಈ ಮಹಾತ್ಮನ ಅಗಾಧ ಮಹಿಮೆಗಳು ಹೇಗೆ ತಿಳಿವಾವು! ನಾಯಿಬಗುಳಿದರೆ ಚಂದ್ರನಿಗೆ ಕೊರತೆಯೆ? ಇವನು

ಮನಸ್ಸು ಬಂದಂತೆ ಬದರಲಿ, ಷಾಡ್ಗುಣ್ಯಪರಿಪೂರ್ಣನಾದ ಸ್ವಾಮಿಗೆ ಇದರಿಂದ ಯಾವ ಕೊರತೆಯೂ ಇಲ್ಲ.

ಈ ರೀತಿಯಾಗಿ ಹೇಳಿದ ಭೀಷ್ಮನ ವಾಕ್ಯಗಳನ್ನು ಕೇಳಿ ನಾರದಾದಿಮಹರ್ಷಿಗಳೆಲ್ಲರೂ ಸ್ವಾಮಿಯ ಅನಂತಸುಗುಣಗಳನ್ನು ವರ್ಣಿಸುತ್ತಾ ಶಿಶುಪಾಲನ ನಿಂದಾವಾಕ್ಯಗಳಲ್ಲಿ ತಿರಸ್ಕಾರಭಾವವನ್ನು ತೋರುತ್ತಲಿದ್ದರು. ಶಿಶುಪಾಲನು ಮಾತ್ರ ಈ ಮಾತುಗಳಿಂದ ಸಮಾಧಾನಗೊಳ್ಳದೆ, ಮರಳಿ ಮರಳಿ, ಶ್ರೀಕೃಷ್ಣನನ್ನೂ ಪಾಂಡವರನ್ನೂ ನಿಂದಿಸತೊಡಗಿದುದಲ್ಲದೆ ಭೀಮನನ್ನು ನೋಡಿ ಎಲಾ ಕಪಟಿ! ಮಗಧರಾಜನಾದ ಜರಾಸಂಧನನ್ನು ಕೊಲ್ಲಲಿಕ್ಕೆ ಬಡಬ್ರಾಹ್ಮಣವೇಷದಿಂದ ಏಕೆ ಹೋದೆ! ರಾಕ್ಷಸಿಯಾದ ಹಿಡಿಂಬಿಯನ್ನು ಕಾಮದಿಂದ ಮದುವೆಮಾಡಿಕೊಳ್ಳಲಿಕ್ಕೋಸ್ಕರ ನಿರಪರಾಧಿಯಾದ ಅವಳ ಅಣ್ಣನನ್ನು ಏಕೆ ಕೊಂದೆ? ಹೊಟ್ಟೆಬಾಕನಾದ ನೀನು ಬಕನಪಾಲಿನ ಬಂಡಿಯ ಆಹಾರವನ್ನೆಲ್ಲಾ ತಿನ್ನಲು ಹೊಟ್ಟೆಯನ್ನು ಎಷ್ಟು ದೊಡ್ಡದಾಗಿ ಮಾಡಿಕೊಂಡೆ ? ಎಂದು ಒಂದೊಂದಾಗಿ ನಿಂದಾರೋಪಕವಾದ ವಾಗ್ಬಾಣಗಳಿಂದ ಚುಚ್ಚುತ್ತಿದ್ದನು.

ಇಂತಹ ಮೂರ್ಖತನದ ಮಾತುಗಳನ್ನು ಕೇಳಿ ಪರಾಕ್ರಮಿಯಾದ ಭೀಮನಿಗೆ ಕೋಪವು ಉಕ್ಕಿಬಂತು. ಆತನ ಕಣ್ಣುಗಳಿಂದ ರೋಷಾಗ್ನಿಯ ಕಿಡಿಗಳುದುರುತ್ತಿದ್ದುವು. ನಿಶ್ವಾಸ ವಾಯುವಿನಿಂದ ಕರಿಯ ಬಣ್ಣದ ಹೊಗೆಯು ಹೊರಡುತ್ತಿದ್ದಿತು. ಈ ಹೊಗೆಯಿಂದ ಆತನು ಕೊರಳಲ್ಲಿ ಧರಿಸಿದ್ದ ಏಕಾವಳಿಯ ಸರದ ಮುತ್ತುಗಳು ಕಂದಿಹೋದುವೋ ಎಂಬಂತೆ ತೋರುತ್ತಿದ್ದಿತು. ಆಗಲಾ ವೀರನು ಕೋಪೋದ್ರೇಕದಿಂದ ಎದ್ದು, ತಾನು ಉಟ್ಟಿದ್ದ ದೋತ್ರದ ನೆರಿಗನ್ನು ಸಮಿಸಿಕೊಳುತ್ತಾ ತನ್ನ ಕೈಯಲ್ಲಿ ಖಡ್ಗವನ್ನು ತೆಗೆದುಕೊಂಡು,

ದುರುಳನಾದ ಶಿಶುಪಾಲನನ್ನು ಈಗಲೇ ಕಡಿದುಬಿಡುವೆನೆಂದು ಹೊರ ಟನು. ಸಾತ್ಯಕಿ ಸಾಂಬ ಕೃತವರ್ಮಾದಿ ಯದುವೀರರೂ, ಪಾಂ ಚಾಲ ಕೇಕಯಾದಿ ರಾಜರೂ ಯುದ್ಧಸನ್ನದ್ಧರಾಗಿ ಭೀಮಸೇನನ ಹಿಂದೆಯೇ ನಡೆದರು. ಇದನ್ನು ಕಂಡು ಭೀಷ್ಮಾಚಾರ್ಯನು ತತ್ಕ್ಷ ಣವೇ ಆ ಭೀಮನನ್ನು ತಡೆದು, ಆತನ ಕೈಯಲ್ಲಿದ್ದ ಖಡ್ಗವನ್ನು ಕಿತ್ತುಕೊಂಡು ಆತನನ್ನು ನೋಡಿ ಇಂತೆಂದನು.

ಭೀಷ್ಮ.—ಅಯ್ಯಾ ವೀರನೇ, ಇದೇನು ದುಡುಕುತನ ! ಆ ತುರ ಪಡಬೇಡ, ಸಮಾಧಾನವನ್ನು ತಂದುಕೋ, ಈ ಮಹಾಯ ಜ್ಞದಲ್ಲಿ ದೊಡ್ಡಯುದ್ಧಕ್ಕೆ ಅವಕಾಶಕೊಟ್ಟು, ರಾಜರನ್ನು ಕೊಂದ ರೆ ನಿಮ್ಮ ಯಜ್ಞದ ಫಲವು ಕೈಸೇರುವುದೆ ? ಸ್ವಲ್ಪಸೈರಿಸು.

ಶಿಶು.—ಎಲೈ ಭೀಷ್ಮನೇ, ಈ ಭೀಮನನ್ನು ಏತಕ್ಕೆ ತಡೆಯು ತ್ತಿದ್ದಿಯೆ? ಬಿಡು ಬಿಡು. ಈ ಕುನ್ನಿಯು ನನ್ನನ್ನೇನುಮಾಡುವನು ? ಈ ಭೀಮನನ್ನೇ ಮೊದಲು ಕಡಿದು ಹೋಮಕುಂಡದಲ್ಲಿ ಕೆಡಹಿ, ಯಜ್ಞೇಶ್ವರನಿಗೆ ಆಹುತಿಕೊಡುವೆನು. ಈ ದುರುಳನ ಕರುಳಿನ ದಂಡೆಯನ್ನು ಜಯವಧುವಿನ ತುರುಬಿನಲ್ಲಿ ಮುಡಿಸುವೆನು. ದಕ್ಷನ ಯಜ್ಞವನ್ನು ಹಾಳುಮಾಡಿದ ಸಾಕ್ಷಾದೀಶ್ವರನಂತೆ ಈ ಯಜ್ಞವನ್ನು ಧ್ವಂಸಮಾಡುವುದಕ್ಕೆ ಬಂದಿರುವ ಪ್ರಲಯರುದ್ರನೇ ನಾನೆಂದು ತಿಳಿ.

ಭೀಮ.—ಆರ್ಯನೇ, ನನ್ನನ್ನೇಕೆ ತಡೆದು ಕಾರ್ಯವನ್ನು ಕೆಡಿ ಸುವೆ ? ಬಿಡು. ದರ್ಪಜ್ವರಪೀಡಿತನಾದ ಈ ಕುಪುತ್ರನಿಗೆ ಕಾಲ ಮೃತ್ಯುವಾಗಿ ಇವನನ್ನು ನಿಗ್ರಹಿಸದೆ ಬಿಡೆನು.

ಭೀಷ್ಮ.—ಎಲೈ ಬಾಲನಾದ ಭೀಮನೇ ನಿಮ್ಮ ಜ ಮಂತ್ರ ಣದಂತೆ ಅತಿಥಿಗಳಾಗಿ ಬಂದಿರುವ ಈ ರಾಜರನ್ನು ಸತ್ಕರಿಸಿ ಮನ್ನಿಸದೆ ಹೀಗೆ ದುಡುಕಿ, ಕಾಳಗಮಾಡಿ ದುರ್ಜನರೆನ್ನಿಸಿಕೊಳ್ಳಬಹುದೆ ?

ದುಷ್ಟನಿಗ್ರಹಾರ್ಥವಾಗಿಯೇ ಅವತರಿಸಿರುವ ಯಜ್ಞಸ್ವರೂಪನಾದ ಸ್ವಾಮಿಯು ಈ ಸಭೆಯಲ್ಲಿ ಸಾಕ್ಷಾತ್ತಾಗಿ ದಯಮಾಡಿಸಿರುವುದರಿಂದ ಈ ಶ್ರೀಕೃಷ್ಣನೇ ದುಷ್ಟರಿಗೆ ತಕ್ಕ ಶಿಕ್ಷೆಮಾಡಿ ಬಿಡುವನು: ಈ ಕೆಲಸದಲ್ಲಿ ಪ್ರವರ್ತಿಸಬೇಡ.

ಭೀಮ.—ಪೂಜ್ಯನೇ, ನಮ್ಮ ಅತಿಥಿಗಳಾಗಿ ಬಂದಿರುವ ರಾಜರಗೊಡನೆಗೆ ನಾನು ಹೋಗತಕ್ಕವನೇ ಅಲ್ಲ. ಪಾಪ! ಈ ಅರಸುಗಳು ನಮಗೆ ಯಾವ ಅನ್ಯಾಯ ಮಾಡಿದರು? ಇವರನ್ನು ಸತ್ಕರಿಸುವುದಕ್ಕೆ ಸಿದ್ಧರಾಗಿಯೇ ಇರುವೆವು. ಆದರೆ ಮದಾಂಧನಾದ ಈ ಶಿಶುಪಾಲನು ಜಗತ್ಕಾರಣನಾದ ಸ್ವಾಮಿಯನ್ನು ನಿಂದಿಸಿದ ಮಾತುಗಳನ್ನು ಕೇಳಿ ಸಹಿಸಲಾರದೆ ಇದ್ದೇನೆ ಇವನ ಗರ್ವಕ್ಕೆ ತಕ್ಕ ಪ್ರತೀಕಾರ ಮಾಡದೆ ಬಿಡೆನು.

ಭೀಷ್ಮ.—ಭೀಮಾ. ಈ ಶಿಶುಪಾಲನ ಪೂರ್ವೋತ್ತರವನ್ನು ನೀನರಿಯೆ. ನೀನು ಶೂರನೇ ನಿಜವು. ಆದರೂ ನಿನ್ನ ಶೌರ್ಯ ಪ್ರಕಟನೆಗೆ ಇದು ಕಾಲವಲ್ಲವು. ಯಾವಕಾಲದಲ್ಲಿ—ಯಾವಸ್ಥಳದಲ್ಲಿ—ಯಾರನ್ನು—ಯಾವರೀತಿಯಿಂದ ಸೃಷ್ಟಿಸ್ಥಿತಿಲಯಗಳಿಗೆ ಗುರಿಪಡಿಸಬೇಕೋ ಅದನ್ನು ಗುಣತ್ರಯಾತ್ಮಕನಾದ ಈ ಸ್ವಾಮಿಯು ಮಾತ್ರವೇ ಬಲ್ಲನು. ಕಾರ್ಯಕಾರಣಗಳನ್ನು ವಿಚಾರ ಮಾಡುವ ಶಕ್ತಿಯು ಮನುಷ್ಯರಾದ ನಮಗೆ ಇಲ್ಲ. ಈ ಶಿಶುಪಾಲನ ವೃತ್ತಾಂತವನ್ನು ಹೇಳುವೆನು ಕೇಳು.

ಶ್ರೀಮಹಾವಿಷ್ಣುವಿನ ದಿವ್ಯಸ್ಥಾನವಾದ ವೈಕುಂಠದಲ್ಲಿ ಜಯವಿಜಯರೆಂಬವರಿಬ್ಬರು ದ್ವಾರಪಾಲಕರಾಗಿದ್ದರು. ಅವರು ತಾಮಸಪ್ರವಿಷ್ಟರಾಗಿ ಒಂದಾನೊಂದು ದಿನ ಸ್ವಾಮಿಯ ಸಂದರ್ಶನಾರ್ಥವಾಗಿ ಅಲ್ಲಿಗೆ ಬಂದ ಸನಕಸನಂದರೆಂಬ ಭಕ್ತಾಗ್ರಣಿಗಳನ್ನು ಒಳಕ್ಕೆ

ಬಿಡದೆ ತಡೆದು ಬಿಟ್ಟರು. ಭಾಗವತೋತ್ತಮರಾದ ಆ ಮಹರ್ಷಿಗಳು ಇದನ್ನು ಕಂಡು ಈ ದುರಹಂಕಾರಿಗಳು ಸತ್ವಮಯನಾದ ಸ್ವಾಮಿಯ ಸಾನ್ನಿಧ್ಯದಲ್ಲಿರಲು ಅರ್ಹರಲ್ಲವೆಂದು ತಿಳಿದು, ಅವರಿಗೆ ಬುದ್ಧಿ ಕಲಿಸುವುದಕ್ಕೋಸ್ಕರ "ಎಲೈ ದ್ವಾರಪಾಲರಿರ! ನಿಮ್ಮ ಗುಣಗಳಿಂದ ನೀವು ಈ ದಿವ್ಯಸ್ಥಳದಲ್ಲಿರಲು ತಕ್ಕವರಾಗಿಲ್ಲ, ನೀವು ಭೂಲೋಕದಲ್ಲಿ ರಾಕ್ಷಸರಾಗಿ ಹುಟ್ಟಿರಿ," ಎಂದು ಶಾಪವನ್ನು ಕೊಟ್ಟರು. ಬಳಿಕ ಆ ಋಷಿಗಳು ಒಳಕ್ಕೆ ಹೋಗಿ, ಭಗವತ್ಸಂದರ್ಶನ ಮಾಡಿಕೊಂಡು ಹಿಂದಿರುಗಿ ಹೋದರು.

ದ್ವಾರಪಾಲಕರಾದ ಜಯವಿಜಯರು ಮುನಿಶಾಪ ಭೀತರಾಗಿ ಶ್ರೀಮನ್ನಾರಾಯಣನಲ್ಲಿ ಹೋಗಿ, ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ಆಗ ಸ್ವಾಮಿಯು ಕರುಣಿಸಿ, "ಮಹಾತ್ಮರ ಶಾಪವು ತಪ್ಪಲಾರದು. ಮೂರುಜನ್ಮಗಳಲ್ಲಿ ನೀವು ರಾಕ್ಷಸರಾಗಿ ಹುಟ್ಟಿರಿ. ನಾನು ಭೂಮಿಯಲ್ಲಿ ಅವತರಿಸಿ ನಿಮ್ಮನ್ನು ಕೊಂದುಬರುವೆನು. ಬಳಿಕ ನಿಮ್ಮ ಶಾಪ ವಿಮೋಚನೆಯಾಗಿ, ಇಲ್ಲಿಗೆ ಬಂದು ಸೇರಬಹುದು." ಎಂದು ಅನುಗ್ರಹಿಸಿದನು. ಆ ಜಯವಿಜಯರು ಮೊದಲನೆಯ ಜನ್ಮದಲ್ಲಿ ಹಿರಣ್ಯಾಕ್ಷ ಹಿರಣ್ಯಕಶಿಪುಗಳೆಂಬ ಹೆಸರಿನಿಂದ ಹುಟ್ಟಿ ತಮ್ಮ ಅಸುರಕೃತ್ಯಗಳಿಂದ ಲೋಕಕಂಟಕರಾಗಿದ್ದರು. ಆ ಸ್ವಾಮಿಯು ವರಾಹನೃಸಿಂಹರೂಪಗಳಿಂದ ಅವತರಿಸಿ, ಆ ದುಷ್ಟರನ್ನು ನಿಗ್ರಹಿಸಿ, ಆ ಜನ್ಮವನ್ನು ಬಿಡಿಸಿದನು. ಎರಡನೆಯ ಜನ್ಮದಲ್ಲಿದ ಅವರು ರಾವಣ ಕುಂಭಕರ್ಣರೆನಿಸಿ ಹುಟ್ಟಿ, ಪರಬ್ರಹ್ಮಸ್ವರೂಪನಾದ ಶ್ರೀರಾಮಚಂದ್ರನಿಂದ ವಧಿಸಲ್ಪಟ್ಟರು. ಈಗ ಮೂರನೆಯ ಜನ್ಮದಲ್ಲಿ ಆ ವಿಜಯನೇ ಈ ಶಿಶುಪಾಲನಾಗಿ ಹುಟ್ಟಿದ್ದಾನೆ. ಮಹಾವಿಷ್ಣುವು ಶ್ರೀಕೃಷ್ಣನಾಗಿ ಅವತರಿಸಿರುವುದು ಇಂತಹ ದುಷ್ಟನಿಗ್ರ

ಹಾರ್ಥವಾಗಿಯೇ ಅಲ್ಲವೆ! ಆದುದರಿಂದ ಈ ಶಿಶುಪಾಲನನ್ನು ಕೊಲ್ಲತಕ್ಕವರು ಯಾರೆಂಬುದನ್ನು ಯೋಚಿಸಿನೋಡಪ್ಪಾ!

ಭೀಮ.—ಆರ್ಯನೇ, ಈ ಶಿಶುಪಾಲನ ಪೂರ್ವವೃತ್ತಾಂತವ ತಿಳಿದು ನನ್ನ ಮನಸ್ಸಿನ ಸಂಶಯವು ನಿವೃತ್ತಿಯಾಯಿತು. ಭಗವದಿಚ್ಛಾನುಸಾರ ನಡೆಯಬೇಕಾದ ಕೆಲಸಕ್ಕೆ ಮನುಷ್ಯ ಪ್ರಯತ್ನಗಳೂ ಸಾಧಕಗಳಾಗಬಹುದು. ಈ ದುರಾತ್ಮನಿಗೆ ಸ್ವಾಮಿಯಮೇಲೆ ಇಷ್ಟು ಆಗ್ರಹವುಂಟಾಗುವುದಕ್ಕೆ ಕಾರಣಗಳೇನೆಂಬುದನ್ನು ತಿಳಿಯಲಪೇಕ್ಷಿಸುತ್ತೇನೆ.

ಭೀಷ್ಮ.—ಮಗುವೇ ಕೇಳು, ದಮಘೋಷನೆಂಬರಾಜನಿಗೆ ಸಾತ್ವತಿಯೆಂಬ ರಾಣಿಯಲ್ಲಿ ಈ ಶಿಶುಪಾಲನು ಹುಟ್ಟಿದನು. ಆ ಸಾತ್ವತಿಯು ದೂರದವಳಲ್ಲ. ಶ್ರೀಕೃಷ್ಣನಿಗೆ ಸಾಕ್ಷಾತ್ತಾಗಿ ಸೋದರತ್ತೆಯೆಂದು ತಿಳಿ. ಈ ಶಿಶುಪಾಲನು ಹುಟ್ಟಿದಾಗಲೇ ವಿಕಾರ ರೂಪದಿಂದ ನಾಲ್ಕು ತೋಳುಗಳೂ, ಮೂರು ಕಣ್ಣುಗಳೂ ಉಳ್ಳವನಾಗಿಯೇ ಜನಿಸಿದನು. ಹುಟ್ಟಿದ ಕೂಡಲೇ ಇವನು ಸಾಮಾನ್ಯಶಿಶುಗಳಂತೆ ಅಳದೆ ಕತ್ತೆಯಂತೆ ಕಿರಚಿಕೊಂಡನು. ರಾಕ್ಷಸರೂಪಿಯಾದ ಈ ಅಪಲಕ್ಷಣದ ಶಿಶುವನ್ನು ಕಂಡೂ, ಇವನ ವಿಕಾರಧ್ವನಿಯನ್ನು ಕೇಳಿಯೂ, ಇವನ ತಾಯಿತಂದೆಗಳು ಅಸಹ್ಯಗೊಂಡು, ಈ ಮಗುವನ್ನು ಹೊರಕ್ಕೆ ಬಿಸುಡಬೇಕೆಂದು ಆಲೋಚಿಸಿದರು. ಆಗ ಅಶರೀರವಾಣಿಯು ಅವರನ್ನು ನೋಡಿ, "ದಂಪತಿಗಳಿರಾ! ಹೆದರಬೇಡಿರಿ. ಬಲಶಾಲಿಯಾಗಿಯೂ, ಭಾಗ್ಯವಂತನಾಗಿಯೂ ಆಗತಕ್ಕ ಈ ಮಗುವನ್ನೇಕೆ ಪರಿತ್ಯಜಿಸುವಿರಿ? ಇದನ್ನು ಕೈಬಿಡದೆ ಕಾಪಾಡಿರಿ. ಈಗ ಇವನು ಸಾಯುವುದಿಲ್ಲ." ಎಂದಿತು. ಅದಕ್ಕಾ ದಮಘೋಷನು "ಎಲೈ ಅಶರೀರವಾಣಿಯೇ, ವಿಕಾರಸ್ವರೂಪಿಯಾದ ಈ ಶಿಶುವನ್ನು

ಸಾಕುವುದು ಹೇಗೆ? ಈಗ ಇದು ಸಾಯುವುದಿಲ್ಲವೆಂದು ಹೇಳಿದೆಯ ಲ್ಲವೆ? ಇದಕ್ಕೆ ಮರಣವು ಹೇಗೆ ಸಂಭವಿಸುವುದು ?" ಎಂದು ಕೇಳಿದನು. ಅದಕ್ಕಾವಾಣಿಯು "ಎಲೈರಾಯನೇ, ಈ ಕೂಸನ್ನು ನೋಡುವುದಕ್ಕೆ ಬರುವವರಲ್ಲಿ ಯಾರು ಎತ್ತಿಕೊಂಡರೆ ಇದರ ಹೆಚ್ಚು ತೋಳುಗಳೂ, ಮೂರನೆಯ ಕಣ್ಣೂ ಅಡಗಿ ಹೋಗುವುವೋ ಆ ಮಹಾತ್ಮನ ಕೈಯಿಂದ ಇವನು ಸಾಯುವನೇ ಹೊರತು ಮತ್ತೊಬ್ಬ ರಿಂದಲೂ ಇವನಿಗೆ ಮರಣಭಯವಿಲ್ಲವು. ನೀವು ಚಿಂತಿಸದೆ ಇದನ್ನು ಕಾಪಾಡಿರಿ" ಎಂದು ಹೇಳಿತು.

ಇವನ ತಾಯಿತಂದೆಗಳು ತತ್ಕಾಲದಲ್ಲಿ ಚಿಂತೆಯನ್ನುಳಿದು ಶಿಶು ವನ್ನು ಸಾಕುತ್ತಾ ಬಂದರು. ಅದ್ಭುತಸ್ವರೂಪದ ಆ ಶಿಶುವನ್ನು ನೋ ಡಲು ದೇಶದೇಶಗಳಿಂದಲೂ ರಾಜರುಗಳು ಬರುತ್ತಿದ್ದರು. ಇವನ ತಾಯಿಯು ಮಗುವನ್ನು ನೋಡಬಂದವರ ಕೈಯಲ್ಲೆಲ್ಲಾ ಇದನ್ನು ಕೊಡುತ್ತಾ ಇದ್ದಳು. ಶಿಶುವಿನ ತೋಳೂ ಕಣ್ಣುಗಳೂ ಅಡಗಲೇ ಇಲ್ಲ. ಪೂರ್ವದಂತೆಯೇ ಇದ್ದುವು. ಯದುವಲ್ಲಭನಾದ ಶ್ರೀಕೃಷ್ಣ ನೂ ತನ್ನ ಸೋದರತ್ತೆಯ ಮಗುವನ್ನು ನೋಡಬೇಕೆಂದು ಬಂದನು. ಸಾತ್ವತಿಯು ತನ್ನ ಮಗುವನ್ನು ಶ್ರೀಕೃಷ್ಣನ ಕೈಗೆ ಕೊಟ್ಟಳು. ಆತನು ಅದನ್ನೆತ್ತಿ, ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡನು. ಕೂಡಲೇ ಹೆಚ್ಚಿನ ಕಣ್ಣೂ, ಹೆಚ್ಚಿನ ಎರಡು ತೋಳುಗಳೂ ಒಳ ಗೇನೇ ಅಡಗಿಹೋದುವು. ಇದನ್ನು ಕಂಡು ಆಕೆಯು ಬಹಳವಾಗಿ ಚಿಂತಿಸಿ, ಶ್ರೀಕೃಷ್ಣನನ್ನು ಕುರಿತು ಇಂತೆಂದಳು.

ಸಾತ್ವತಿ.—ತಮ್ಮಾ ಕೃಷ್ಣಾ! ಈಗ ನನಗೆ ಅತ್ಯಾಶ್ಚರ್ಯವೂ ಪರಮದುಃಖವೂ ಉಂಟಾಗಿದೆ, (ಆಕಾಶವಾಣಿಯನ್ನು ತಿಳಿಸಿ) ಅಯ್ಯಾ! ಆಕಾಶವಾಣಿಯಂತೆ ಈ ಕೂಸಿನ ಪ್ರಾಣಾಪಾಯವು ನಿನ್ನ

ಅಂಗಸ್ಪರ್ಶದಿಂದ ಹೋಗಿ, ಸಾಮಾನ್ಯಶಿಶುವಾದುದು ಸಂತೋಷವಾಯಿತು. ಆವಾಣಿಯಂತೆ ಒಂದುಭಾಗವು ಸತ್ಯವಾದುದರಿಂದ ಇದರಂತೆಯೇ ಈ ಕೂಸಿನ ಪ್ರಾಣಕ್ಕೆ ನೀನೇ ಅಂತಕನೆಂಬುದು ನಿಜವು. ಈಗ ಈ ಕೂಸಿನ ಪ್ರಾಣಗಳು ನಿನ್ನ ಕೈಯಲ್ಲಿಯೇ ಇರುತ್ತವೆ. ನನಗೆ ಪುತ್ರದಾನವನ್ನು ಕೊಟ್ಟು ಈ ಮಗುವನ್ನು ರಕ್ಷಿಸು.

ಕೃಷ್ಣ.—ಅತ್ತೇ, ನಿನ್ನ ಮಗನು ವಿಕಾರರೂಪವನ್ನು ಕಳೆದುಕೊಂಡದ್ದು ನನಗೂ ಸಂತೋಷವೇಸರಿ. ಕಾರಣವಿಲ್ಲದೆ ಇವನ ತಂಟೆಗೆ ನಾನು ಹೋಗುವುದಿಲ್ಲವಮ್ಮಾ.

ಸಾತ್ವತಿ.—ಕೃಷ್ಣಯ್ಯಾ, ಅಶರೀರವಾಕ್ಯದಂತೆ ಇವನಿಗೆ ನೀನೇ ಮೃತ್ಯುವೆಂದು ತಿಳಿಯುತ್ತೇನೆ. ಇವನು ನಿನ್ನ ವಿಷಯದಲ್ಲಿ ಏನಾದರೂ ತಪ್ಪು ಮಾಡಿದಾಗ್ಯೂ ನೀನು ಆಗ್ರಹಗೊಳ್ಳದೆ, ನನ್ನ ಮೇಲಣ ವಿಶ್ವಾಸದಿಂದ ಇವನನ್ನು ಶಿಕ್ಷಿಸದೆ ರಕ್ಷಿಸಬೇಕೆಂಬುದೇ ನನ್ನ ಪ್ರಾರ್ಥನೆಯು.

ಕೃಷ್ಣ.—ಅಮ್ಮಾ, ಅತ್ತೆಯಾದ ನೀನು ನನಗೆ ಇಷ್ಟು ಉಪಚಾರ ಹೇಳಬೇಕೆ? ಇವನು ಮಾಡುವ ನೂರು ತಪ್ಪುಗಳನ್ನಾದರೂ ಕ್ಷಮಿಸುವೆನು. ನೀನು ಚಿಂತಿಸಬೇಡ.

ಈ ಮಾತು ಕೇಳಿ ಆಕೆಗೆ ಬಹುಸಂತೋಷವಾಯಿತು. ಒಬ್ಬ ಮನುಷ್ಯನು ಒಂದೇವ್ಯಕ್ತಿಯ ವಿಷಯದಲ್ಲಿ ನೂರುತಪ್ಪುಗಳು ಮಾಡಲಾರನೆಂತಲೂ, ಇದರಿಂದ ತನ್ನ ಮಗನಿಗೆ ಶ್ರೀಕೃಷ್ಣನ ದೆಸೆಯಿಂದ ಮೃತ್ಯುಭಯವಿಲ್ಲವೆಂತಲೂ ಸಾತ್ವಿಕಸ್ವರೂಪಳಾದ ಆ ಸಾತ್ವತಿಗೆ ಧೈರ್ಯವುಂಟಾಗಿ ಶ್ರೀಕೃಷ್ಣನನ್ನು ಹರಸಿ ಮನ್ನಿಸಿದಳು. ತನ್ನ ಮಗನನ್ನೂ ಪ್ರೀತಿಯಿಂದ ಸಾಕುತ್ತಾ ಬಂದಳು.

ಎಲೈಧೀಮನೆ, ಈ ಶಿಶುಪಾಲನ ಪೂರ್ವವೃತ್ತಾಂತವನ್ನು

ನಿನಗೋಸ್ಕರ ಹೇಳಿದ್ದೇನೆ. ದುರಾತ್ಮನಾದ ಈ ಶಿಶುಪಾಲನು ಮಾಡು ವ ತಪ್ಪುಗಳನ್ನೆಲ್ಲಾ ಶ್ರೀಕೃಷ್ಣನು ಲೆಕ್ಕ ಮಾಡುತ್ತಲೇ ಬಂದಿರು ವನು. ಇವನ ತಪ್ಪುಗಳು ನೂರು ಭರ್ತಿಯಾಗುವತನಕ ಈ ಸ್ವಾಮಿ ಯು ತನ್ನ ವಾಗ್ದಾನದಂತೆ ಸೈರಿಸಿಕೊಂಡಿರಬೇಕಾಗಿದೆ. ಅದು ಮು ಗಿದ ಮೇಲೆ ಈ ನೀಚನನ್ನು ಶಿಕ್ಷಿಸುವುದು ಸ್ವಾಮಿಯ ಕಾರ್ಯವೇ ಆಗಿರುವುದರಿಂದ ಇವನ ಮರಣವು ಯಾರಿಂದ ಆಗಬೇಕಾಗಿದೆಯೋ ಯೋಚಿಸು, ನೀನು ಈ ವೇಳೆಯಲ್ಲಿ ಕೋಪಿಸದೆ ಶಾಂತಿಯನ್ನ ವಲಂಬಿಸು.

ಈ ಮಾತುಗಳನ್ನು ಕೇಳುತ್ತಾ ಬಂದ ಹಾಗೆಲ್ಲಾ ದುರಾತ್ಮ ನಾದ ಶಿಶುಪಾಲನಿಗೆ ವಿಧಿಪ್ರೇರಣೆಯಿಂದ ಕೋಪವು ಹೆಚ್ಚುತ್ತಾ ಬಂದಿತು. ಆಗ ಭೀಷ್ಮನನ್ನು ನೋಡಿ ಇಂತೆಂದನು.

ಶಿಶು.—ಎಲಾಭಟ್ಟಾ, ನೀನು ಈ ಕಳ್ಳನನ್ನು-ಪಟಿಂಗನನ್ನು- ಗೊಲ್ಲನನ್ನು-ಕಪಟಿಯನ್ನು ಇದುವರೆಗೂ ಹೊಗಳಿದುದು ಸಾಲದೆ? ಇನ್ನೆಷ್ಟು ಬಣ್ಣಿಸುತ್ತೀಯೆ ? ಸಾಕು. ನಿಲ್ಲಿಸು. ನೀನುವಯಸ್ಸಿನಲ್ಲಿ ಇಷ್ಟುಮುದುಕನಾಗಿದ್ದರೂ ಸ್ವಲ್ಪವೂ ಬದ್ಧಿಯಿಲ್ಲದವನಾಗಿ ಕಾಣು ತ್ತೀಯೆ. ಪೂರ್ವಕಾಲದಲ್ಲಿ ಬಿಲದಲ್ಲಿ ವಾಸ ಮಾಡುವ ಜಾತಿಗೆ ಸೇರಿದ ಭೂಲಿಂಗವೆಂಬ ಪಕ್ಷಿಯು ಮಲಗಿದ್ದ ಸಿಂಹದ ಬಾಯಲ್ಲಿ ಸಿಕ್ಕಿ ಮಡಿದಂತೆ ನೀನು ನನ್ನ ಕೈಗೆ ಸಿಕ್ಕಿ ಈಗಲೇ ಸಾಯುವೆ. ಆ ಕಥೆಯನ್ನು ಹೇಳುವೆನು, ಕೇಳು.

ಒಂದು ಕಾಡಿನಲ್ಲಿ ಬಿಲವಾಸಿಯಾದ ಒಂದು ಪಕ್ಕಿ ಇತ್ತು. ಅದು ನಿತ್ಯವೂ ಮರದಮೇಲೆ ಏರಿ ಕುಳಿತು, ಹಕ್ಕಿಗಳನ್ನೆಲ್ಲಾ ಕೂಗಿ "ಸಹೋದರರಿರಾ, ಏತಕ್ಕೆ ಕಷ್ಟಪಟ್ಟು ಬಹುದೂರ ತಿರುಗುವಿರಿ ? ಅನೃಷ್ಟವಿಷ್ಟವೆ ನನ್ನ ನನ್ನ ಬಾಯಿಯ ಆಹಾರವು ಸಾವು ಇನ್ನಲ್ಲಿಗೇ ಸೇ

ಬಂದು ಬೀಳುತ್ತಿರುವುದು. ವಿನೋದದಿಂದ ಸಂಭಾಷಿಸುತ್ತಾ ಸುಖ ವಾಗಿ ಕಾಲ ಕಳೆಯೋಣ ಬನ್ನಿರಿ,'' ಎಂದು ನಿನ್ನಂತೆ ಧರ್ಮಶ್ರವಣ ಮಾಡುತ್ತಾ ಇದ್ದಿತು. ಅದರ ಆಹಾರಕ್ಕೆ ತಕ್ಕಷ್ಟು ಹುಳುಹುಪ್ಪಟೆ ಗಳು ಸಿಕ್ಕುತ್ತಲಿದ್ದುದರಿಂದ ಅದಕ್ಕೆ ಜೀವನದ ಚಿಂತೆ ಇರಲಿಲ್ಲ. ಅದು ಒಂದುದಿನ ಬಾಯ್ದೆರೆದುಕೊಂಡು ಮಲಗಿದ್ದ ಸಿಂಹವನ್ನು ನೋಡಿ ''ಇಗೋ ಈ ಸಿಂಹವು ಬಾಯಿತೆರೆದುಕೊಂಡು ಮಲಗಿದೆ. ಇದು ತಿಂದುಳಿದ ಮೃಗದ ಮಾಂಸವು ಬಾಯಲ್ಲಿಯೇ ಕಾಣಿಸುತ್ತಲಿದೆ. ಈ ಮಾಂಸವೆಲ್ಲಾ ನನ್ನ ಸ್ವಾಧೀನವೇ ಆಗುವುದು'' ಎಂದು ಹಿಗ್ಗುತ್ತಾ ಆ ಸಿಂಹದ ಬಾಯಲ್ಲಿ ಕೊಕ್ಕನ್ನಿಟ್ಟು, ಅಲ್ಲಿದ್ದ ಮಾಂಸವನ್ನು ಸೆಕ್ಕಿ ತಿನ್ನುತ್ತಾ ಬಂದಿತು. ನಿದ್ದೆಯಲ್ಲಿದ್ದ ಸಿಂಹಕ್ಕೆ ಇದು ಗೋಚರವಾಗ ಲಿಲ್ಲ. ಆ ಭೂಲಿಂಗ ಪಕ್ಷಿಯು ತನ್ನ ಹಸಿವು ತೀರುವಷ್ಟು ತಿಂದರೂ ತೃಪ್ತಿಪಡದೆ, ಜಿಹ್ವಾಚಾಪಲ್ಯದಿಂದ ಮೃದುವಾಗಿದ್ದ ಆ ಸಿಂಹದ ನಾಲಿಗೆಯನ್ನು ಕುಟುಕತೊಡಗಿತು. ಆಗ ಮೃಗರಾಜನಿಗೆ ಎಚ್ಚರ ವಾಯಿತು. ತತ್ಕ್ಷಣವೇ ಆ ಹಕ್ಕಿಯನ್ನು ಕ್ರೂರವಾದ ಹಲ್ಲುಗ ಳಿಂದ ಅಗಿದು ನುಂಗಿಬಿಟ್ಟಿತು. ಅದರಂತೆ ಆ ಪಕ್ಷಿಪ್ರಾಯನಾದ ನೀನು ಸಿಂಹದಂತೆ ಇರುವ ನನ್ನನ್ನು ಕೆಣಕಿ ನಿನಗೆ ಸಂಭವಿಸುವ ವಿಪ ತ್ತನ್ನರಿಯದೆ ನಿಂದಿಸಿ, ಈ ಖೂಳನಾದ ಗೊಲ್ಲನನ್ನು ಹೊಗಳುತ್ತಲಿ ರುವೆ. ಇಂತಹ ನಿನ್ನನ್ನು ಈಗಲೇ ಬಲಿತೆಗೆದುಕೊಳ್ಳದೆ ಬಿಡೆನು.

ಎಂದು ಗರ್ಜಿಸಿದನು.'

ಇದನ್ನೆಲ್ಲಾ ನೋಡಿ ಆ ಸಭೆಯಲ್ಲಿ ಕುಳಿತಿದ್ದ ವ್ಯಾಸಾದಿಮ ಹರ್ಷಿಗಳೆಲ್ಲರೂ ತಮ್ಮಲ್ಲಿ ಚಿಂತಿಸಿ ಇಂತೆಂದರು.—

ಜ್ಞಾನವೃದ್ಧನಾಗಿಯೂ, ವಯೋವೃದ್ಧನಾಗಿಯೂ, ಸತ್ಯ ವಾದಿಯಾಗಿಯೂ ಇರುವ ಈ ಭೀಷ್ಮನು ಸಾಮಾನ್ಯನಲ್ಲವು. ಶ್ರೀ

ಕೃಷ್ಣನ ಕೈಯಿಂದಲೇ ಈ ಶಿಶುಪಾಲನು ವಧಿಸಲ್ಪಡುವನೆಂದು ಈತನು ಹೇಳಿದನು. ಈಮಾತು ನಿಜವಾಗಿದ್ದಲ್ಲಿ ಶಿಶುಪಾಲನು ತನ್ನ ಪ್ರಯತ್ನದಿಂದಲೇ ಮೃತ್ಯುವಿನ ಬಾಯನ್ನು ಹೊಕ್ಕು ಕೆಡುವುದು ಸಿದ್ಧವು. ಪರಮಾತ್ಮಸ್ವರೂಪವಾದ ಶ್ರೀಕೃಷ್ಣನು ಯಜ್ಞಕರ್ತೃವಾಗಿಯೂ, ಯಜ್ಞಭೋಕ್ತೃವಾಗಿಯೂ, ಸರ್ವಶಕ್ತನಾಗಿಯೂ ಇರುವುದರಿಂದ ಯಾವ ವೇಳೆಯಲ್ಲಿ ಏನು ಮಾಡಬೇಕೆಂದು ಸಂಕಲ್ಪಿಸಿರುವನೋ ಅದರಂತೆ ನಡಿಸದೆ ಇರನು. ಅಲ್ಪಜ್ಞರಾದ ನಮಗೆ ಈ ವಿಷಯವು ಅಗೋಚರವಾಗಿರುವುದು. ಈ ಶಿಶುಪಾಲನಿಗಿಂತ ಸಾವಿರಾರುಪಾಲು ಹೆಚ್ಚು ಪರಾಕ್ರಮವುಳ್ಳ ದುಷ್ಟರನ್ನು ಕೂಡ ನಿಗ್ರಹಿಸಬಲ್ಲ ಪರಮಾತ್ಮನಿಗೆ ಇದೊಂದು ಅಸಾಧ್ಯಕಾರ್ಯವೆ? ಮರಣೋನ್ಮುಖನಾದ ಈ ಶಿಶುಪಾಲನಿಗೆ ಈ ವೇಳೆಯಲ್ಲಿ ನಾವು ಬುದ್ಧಿಯ ಮಾತುಗಳನ್ನು ಹೇಳಿದರೂ ರುಚಿಸಲಾರವು. ಈ ನೀಚನಿಗೆ ವಿನಾಶಕಾಲವು ಸಮೀಪಿಸಿರುವುದು, ಭಗವದಿಚ್ಛೆಯಂತೆ ಆಗಲಿ.

ಹೀಗೆ ಮಹರ್ಷಿಗಳೆಲ್ಲರೂ ಯೋಚಿಸಿ ಮೌನದಿಂದ ಇದ್ದರು. ಸಭಾಮಂದಿರದಲ್ಲಿದ್ದ ರಾಜರು ಶ್ರೀಕೃಷ್ಣನ ಎದುರಿಗೆ ಯಾವ ಮಾತು ಹೇಳಲಿಕ್ಕೂ ಧೈರ್ಯವಿಲ್ಲದೆಯೂ, ರೋಷಪರವಶನಾದ ಶಿಶುಪಾಲನಿಗೆ ಹಿತವಾಕ್ಯಗಳನ್ನು ಹೇಳಲು ತೋರದೆಯೂ, ಆವೇಳೆಯಲ್ಲಿ ಏನು ಮಾಡುವುದಕ್ಕೂ ತಿಳಿಯದೆ ಸುಮ್ಮನೆ ನೋಡುತ್ತಾ ಇದ್ದರು. ಶಿಶುಪಾಲನು ಕೋಪೋದ್ರೇಕದಿಂದ ಶ್ರೀಕೃಷ್ಣನನ್ನು ನೋಡಿ ಅಶರೀರವಾಕ್ಯವೇ ಸತ್ಯವೆನಿಸುವಂತೆ ಮಾಡುತ್ತಾ, ಮರಳಿ ಇಂತೆಂದನು.

ಎಲಾ ಜಾರ ಚೋರಶಿಖಾಮಣೀ, ನೀನು ಈಮುದಿಗೂಬೆಯ ಹೊಗಳಿಕೆಗೆ ಉಬ್ಬಿ ಮೈಮರೆತಿರುವೆ. ನಿನ್ನ ನಿಜವಾದ ಯೋ

ಗ್ಯತೆಯನ್ನು ತಿಳಿದು ನೋಡಿಕೋ, ಯಾವನಾದರೂ ಎಂಜಲಿಗೆ ಆಶೆ ಪಡುವನೆ? ನನಗಾಗಿ ಗೊತ್ತುಮಾಡಿದ್ದ ಕನ್ಯೆಯಾದ ರುಕ್ಮಿಣಿಯನ್ನು ನೀನು ಅಪಹರಿಸಿಕೊಂಡು ಹೋಗಲಿಲ್ಲವೆ? ನಿನಗೆ ಇದು ತರವೆ? ಆ ಸಾಲ್ವನು ನಿನಗಿಂತಲೂ ಉತ್ತಮನೆಂದು ಹೇಳಬೇಕು. ಏಕೆಂದರೆ, ತಾನು ಬಯಸಿದ ಅಂಬೆಯೆಂಬ ಕನ್ಯೆಯನ್ನು ಈ ಮುದುಕನಾದ ಭೀಷ್ಮನು ಅಪಹರಿಸಿಕೊಂಡು ಹೋದಮೇಲೆ ನಾನು ಸಾಲ್ವನನ್ನು ಬಯಸಿರುವೆನು ಎಂದು ಹೇಳಲು ಆ ಕನ್ಯೆಯನ್ನು ಇವನು ನಿರಾಕರಿಸಿದನು. ಆಗ ಆ ಅಂಬೆಯು ಪೂರ್ವಾನುರಾಗದಿಂದ ಆ ಸಾಲ್ವನನ್ನೇ ಬಯಸಿ ಅವನ ಬಳಿಗೆ ಬಂದಳು. ಆ ಧೀರನು ಭೀಷ್ಮನ ಎಂಜಲಿನ ಹೆಣ್ಣಾದ ನಿನ್ನನ್ನೊಲ್ಲೆನೆಂದು ನಿರಾಕರಿಸಿ ಬಿಟ್ಟನು. ನಿನಗೆ ಇಷ್ಟುಮಟ್ಟಿಗೂ ತಿಳಿಯದೆ ಹೋಯಿತೆ? ನಾನು ಬಯಸಿದ್ದ ರುಕ್ಮಿಣಿಯನ್ನು ಸ್ವೀಕರಿಸಿದೆ ಯಲ್ಲವೆ! ಜಾರಾಗ್ರಣಿಯಾದ ನಿನಗೆ ನಾಚಿಕೆಯೊಂದುಂಟೆ? ಒಳಗೊಳಗೇನೇ ನಿನಗೆ ಪತ್ರ ಬರೆದು ಕರಸಿಕೊಂಡ ಆ ರುಕ್ಮಿಣಿಯು ತಾನೇ ಮಹಾಪತಿವ್ರತೆಯೊ? ಅಂತವಳನ್ನು ಕೂಡಿರುವ ನಿನ್ನ ಪೌರುಷವನ್ನು ಸುಡಬೇಕು!!

ಈ ಮಾತು ಕೇಳಿ ಶ್ರೀಕೃಷ್ಣನಿಗೆ ತಡೆಯುಕೂಡದದಷ್ಟು ಸಿಟ್ಟು ಬಂದಿತು. ಲೋಕದ ಜನರು ತಮ್ಮನ್ನು ಪರರು ನಿಂದಿಸಿದರೆ ಸಹಿಸಿಕೊಂಡಿರುವದೇ ಕಷ್ಟ, ತನ್ನ ತಾಯಿತಂದೆಗಳನ್ನು ನಿಂದಿಸಿದರೆ ತನ್ನನ್ನು ನಿಂದಿಸಿದಾಗ ಬರುವ ರೋಷಕ್ಕಿಂತಲೂ ಹತ್ತರಷ್ಟು ಹೆಚ್ಚಾಗಿ ಕೋಪಬರುವುದು. ತನ್ನ ಎದುರಿಗೆ ಗುರುವನ್ನು ನಿಂದಿಸಿದರೆ ತಾಯಿತಂದೆಗಳನ್ನು ನಿಂದಿಸಿದ್ದರ ಹತ್ತರಷ್ಟು ಹೆಚ್ಚಾದ ಸಿಟ್ಟುಂಟಾಗುವುದು ಸಹಜವು. ಪ್ರಿಯಪತ್ನಿಯನ್ನು ದೂಷಿಸಿದರಂತೂ ಗುರುವನ್ನು ನಿಂದಿಸಿದ್ದರ ಹತ್ತರಷ್ಟು ಹೆಚ್ಚಾಗಿ ಆಗ್ರಹಬರುವುದು. ಲೋಕ

ಮಾತೆಯಾಗಿಯೂ, ಸರ್ವಥಾ ದೋಷರಹಿತಳಾಗಿಯೂ, ಲಕ್ಷ್ಮೀ ಸ್ವರೂಪಳಾಗಿಯೂ ಇರುವ ರುಕ್ಮಿಣಿಯ ನಿಂದೆಯನ್ನು ಕೇಳಿದ ಕೂಡಲೇ ಶ್ರೀಕೃಷ್ಣನು ಅತ್ಯಾಗ್ರಹಗೊಂಡನು. ಆಗಲಾ ಸ್ವಾಮಿಯು ಶಿಶುಪಾಲನನ್ನು ನೋಡಿ "ಎಲಾ ಚೈದ್ಯನೇ, ನಮ್ಮ ಸೋದರತ್ತೆಯಾದ ಸಾತ್ವತಿಗೆ ಕೊಟ್ಟ ವಾಗ್ದಾನದಂತೆ ನಿನ್ನ ತಪ್ಪುಗಳನ್ನು ಸಹಿಸುತ್ತಾ ಬಂದೆನು. ಅವು ಲೆಕ್ಕಕ್ಕೆ ಸರಿಯಾಗಿ ಮುಗಿಯುತ್ತಾ ಬಂದುವು. ಇನ್ನು ಹೆಚ್ಚು ಮಾತುಗಳಾಡಿದರೆ ನಾನು ಸೈರಿಸಲಾರೆನು. ನಿನ್ನ ಮರಣವು ಸಮಾಪಿಸಿರುವುದೆಂದು ತಿಳಿದು ಜಾಗರೂಕನಾಗಿರು. ಕೊನೆಯಸಾರಿ ಎಚ್ಚರಿಸಿದ್ದೇನೆ" ಎಂದನು.

ತನ್ನ ಮರಣಕಾಲವು ಸಮೀಪಿಸಲು ಆ ಶಿಶುಪಾಲನು ಶ್ರೀಕೃಷ್ಣನ ಮಾತುಗಳನ್ನು ಕೇಳಿ ಗಹಗಹಿಸಿ ನಗುತ್ತಾ "ಎಲಾ ಗೊಲ್ಲಗಾ, ನೀನು ನನಗೆ ಎಚ್ಚರಿಕೆ ಕೊಡುವೆಯಾ! ನೀನು ಸಂತೋಷಪಟ್ಟರೆ ಎಷ್ಟು ಪ್ರಯೋಜನವೋ ನಿನ್ನ ಕೋಪದಿಂದಲೂ ಅಷ್ಟೇ ಫಲವೆಂದು ತಿಳಿ. ನಿರ್ಧನ ಪುರುಷನ ಮುಷ್ಟಿಯು ತೆರೆದಿದ್ದರೂ ಒಂದೇ, ಮುಚ್ಚಿಕೊಂಡಿದ್ದರೂ ಒಂದೇ ಅಲ್ಲವೇ! ಅದರಂತೆಯೇ ನಿನ್ನ ನಿಗ್ರಹಾನುಗ್ರಹಗಳು ಎರಡೂ ಸಮಾನವಾಗಿಯೇ ಇವೆ. ನನ್ನಮೇಲೆ ನೀನು ಮಾಡುವ ಪ್ರಯತ್ನಗಳೊಂದೂ ನಡೆಯವೆಂದು ತಿಳಿದುಕೋ, ಈ ಮುದುಕನು ನಿನ್ನನ್ನು ಹೊಗಳುವ ಭಟ್ಟನು. ಈ ಅರಿಯದ ಪೋರನಾದ ಸಹದೇವನು ನಿನ್ನನ್ನು ಪೂಜಿಸುವವನು. ಈಸಭೆಯಲ್ಲಿ ನೀನು ಪೂಜ್ಯನು. ಒಳ್ಳೆಯ ಯಜ್ಞವಿದು, ಸಾರ್ಥಕವಾಯಿತು," ಎಂದನು.

ಶೂರನಾದ ಭೀಷ್ಮನಿಗೆ ಈ ಮಾತು ಸಹಿಸಲಿಲ್ಲ. ಅವನು ಚೈದ್ಯನನ್ನು ನೋಡಿ ಇಂತೆಂದನು.

ಭೀಷ್ಮ.—ಎಲೈಶಿಶುಪಾಲನೇ, ಹೆಂಡಕುಡುಕನಂತೆ ಮನಸ್ಸಿ ಗೆ ಬಂದಂತೆ ಮಾತನಾಡುತ್ತಿರುವೆಯಾ? ಎಚ್ಚರದಿಂದ ಮಾತನಾಡು, ಜೊಬ್ಬು ಳಿಯ ತೋಪಿನಲ್ಲಿ ಹಂಸವು ಭ್ರಮಿಸುವುದೆ? ಹಿರಿಯರು, ಕಿರಿಯರು, ಎಂಬ ತಾರತಮ್ಯಜ್ಞಾನವಿಲ್ಲದೆ ನೀನು ಅಪ್ರಾಕೃತಪುರುಷನಾದ ಈ ಪರಮಾತ್ಮನನ್ನು ನಿನ್ನಂತೆಯೇ ತಿಳಿದುಕೊಂಡಿರುವೆಯಾ? ಪುಟಹಾ ಕಿದ ಚಿನ್ನದಂತೆ ನಿಷ್ಕಳಂಕನಾಗಿರುವ ಈ ಸ್ವಾಮಿಯಲ್ಲಿ ದೋಷಗಳ ನ್ನಾರೋಪಿಸುತ್ತಿರುವೆಯಾ? ಚೀ ಚೀ! ಧೂರ್ತಾ! ಈ ದೇವದೇವ ನನ್ನು ಕೆಣಕುವವರು ದೀಪವನ್ನು ಕೆಡಿಸಲಿಕ್ಕೆಂದು ಬರುವ ಪತಂಗ ದ ಹುಳುಗಳಂತೆ ತಮಗೆ ತಾವೇ ನಾಶವಾಗುವರೆಂದು ತಿಳಿದುಕೋ. ನಿನ್ನತಪ್ಪುಗಳು ಸ್ವಾಮಿಯ ವಾಗ್ದಾನದಂತೆ ಮುಗಿಯುತ್ತಾ ಬಂದು ವೆಂದು ಈ ಪರಮಾತ್ಮನೇ ನಿನಗೆ ಈಗ ಎಚ್ಚರಿಕೆ ಕೊಟ್ಟಿರುವನು. ನನ್ನನ್ನು ನೀನು ನಿಂದಿಸಿದರೂ ಅದರಿಂದ ನನಗೆ ಯಾವ ಕೊರತೆ ಯೂ ಇಲ್ಲ. ಈಗಲೂ ನಿನಗೆ ಪ್ರೇಮದಿಂದ ಹಿತೋಕ್ತಿಯನ್ನು ಹೇಳುವೆನು. ಕೇಳು, ಅಯ್ಯಾಮಿತ್ರನೇ, ಈ ಜಗನ್ನಾಥನನ್ನು ಅಹಂ ಕಾರದಿಂದ ನಿಂದಿಸಿ, ನಿನ್ನ ಮೃತ್ಯುವನ್ನು ನೀನೇ ಕರೆದುಕೊಳ್ಳ ಬೇಡ. ನಿನ್ನಮನಸ್ಸಿನಲ್ಲಿ ಸಮಾಧಾನವನ್ನು ತಂದುಕೊಂಡು ಪಶ್ಚಾ ತ್ತಾಪಹೊಂದು, ನಿನ್ನ ತಪ್ಪುಗಳಿಗಾಗಿ ಈ ಸ್ವಾಮಿಯ ಕ್ಷಮೆ ಬೇಡಿ ಶರಣಾಗತನಾಗು. ನೀನೂ ಒಬ್ಬ ಶೂರನೇ ಆಗಿರಬಹುದು. ಆದರೂಸೂರ್ಯನ ಎದುರಿಗೆ ಸಣ್ಣದೀಪದ ಬೆಳಕು ಕಾಂತಿ ಹೀನವೆನಿ ಸುವಂತೆ ದೇವರ ಎದುರಿಗೆ ನಿನ್ನ ಶೌರ್ಯವು ನಡೆಯದು.

ಶಿಶು.—ಎಲಾವೃದ್ಧರಾಜನೇ, ನಿನ್ನ ಸಮಾಧಾನದ ಮಾತು ಗಳು ಹಾಗಿರಲಿ. ನನ್ನ ಪ್ರತಾಪವು ಈಗೀಗ ನಿನಗೆ ತಿಳಿಯುತ್ತಾ ಬಂದಂತೆ ಕಾಣುತ್ತದೆ. ನಪುಂಸಕನಾದ ನೀನು ಮೊದಲೇ ಹೀಗೆ

ಹೇಳದೆ ಪುಂಸ್ತ್ವದ ಮಾತುಗಳನ್ನಾಡಿ, ಈಗ ಶಾಂತಮಾರ್ಗಕ್ಕೆ ಬಂದೆಯಾ ? ಶತವೃದ್ಧನಾದ ನಿನ್ನ ಮೇಲೆ ಕೃಪೆಮಾಡಿತಾನೇ ಫಲವೇನು ? ನೀನು ಹೊಗಳುತ್ತಿರುವ ಈ ದುಷ್ಟಕೃಷ್ಣನನ್ನು ಕೊಂದು, ತರುವಾಯ ನಿನ್ನನ್ನು ವಿಚಾರಿಸಿಕೊಳ್ಳುವೆನು.

(ಶ್ರೀಕೃಷ್ಣನ ಕಡೆ ತಿರುಗಿ) ಎಲಾ ಗೋಪಾಲಬಾಲ ! ಇಳಿದು ಬಾ. ಸಿಂಹಾಸನದಿಂದ ಕೆಳಕ್ಕೆ. ಈ ಬಡಪಾಂಡವರು ನಿನ್ನನ್ನು ಗೌರವಿಸಿದ ಮಾತ್ರದಿಂದಲೇ ರಾಜಮಂಡಲಿಯಲ್ಲಿ ನೀನು ಪೂಜ್ಯನೆನಿಸಿಕೊಳ್ಳುವೆಯಾ ? ತುಂಬಿದ ಸಭೆಯಲ್ಲಿ ಈ ಸಹದೇವನು ನಿನಗೆ ಅಗ್ರಪೂಜೆ ಮಾಡಿದುದು ನಮ್ಮಂತವರಿಗೆಲ್ಲಾ ದೊಡ್ಡ ಅವಮಾನಮಾಡಿದಂತೆ ಆಯಿತು. ನಿನಗೆ ಈಕುನ್ನಿಯು ಮಾಡಿದ ಪೂಜೆಯ ಜತೆಗೆ ನನ್ನ ಬಾಣಾಗ್ನಿಯಿಂದ ಈಗ ಉಪಪೂಜೆ ಮಾಡುವೆನು. ಮತ್ತು ಇದರಿಂದ ನಿನ್ನ ದೇಹದಲ್ಲಿ ಹುಟ್ಟುವ ಅಗ್ನಿಜ್ವಾಲೆಯಲ್ಲಿಯೇ ಈ ಮುದಿಭೀಷ್ಮನ ಶರೀರವನ್ನು ಕೆಡಹಿ ದಹಿಸುವೆನು. ಬಳಿಕ ಆ ಅಗ್ನಿಯಲ್ಲಿ ಪಾಂಡವರೈವರ ರಕ್ತವೆಂಬ ತುಪ್ಪದಿಂದ ಹೋಮಮಾಡಿ, ಈ ರಾಜಸೂಯ ಯಜ್ಞವನ್ನು ಯುಧಿಷ್ಠಿರನಿಗೆ ಬದಲಾಗಿ ನಾನೇ ಪೂರಯಿಸುವೆನು. ಇದೊಂದು ಮಹಾಯಜ್ಞವಂತೆ ! ಕುಲಹೀನನಾದ ನೀನು ಈ ಯಾಗಶಾಲೆಯಲ್ಲಿ ಅಗ್ರಪೂಜೆಗೆ ಅರ್ಹನಂತೆ ! ಈ ಮುದುಕನ ಉಪದೇಶದಿಂದ ಅರಿಯದ ಹುಡುಗನು ನಿನ್ನನ್ನು ಪೂಜಿಸಿದನಂತೆ ! ಯಾಗದೀಕ್ಷಿತನಾದ ಈ ಯುಧಿಷ್ಠಿರನು ಇದಕ್ಕೆ ಹೇಗೆ ಸಮ್ಮತಿಸಿದನು? ಅವನಿಗೂ ಬುದ್ಧಿಯಿಲ್ಲವೆ ? ಇವನನ್ನು ಶಿಕ್ಷಿಸಲೇಬೇಕು, ನನ್ನಂತಹ ಶೂರರನ್ನು ತಿರಸ್ಕರಿಸಿ ಮಾಡುವ ಈ ಯಜ್ಞವು ಹೇಗೆ ಕೊನೆಗಾಣುವುದೋ ನೋಡುವೆನು.

ಹೀಗೆ ಹೇಳಿದ ಮಾತುಗಳನ್ನು ಕೇಳಿ ಶ್ರೀಕೃಷ್ಣನಿಗೆ ಅತ್ಯ

ಗ್ರಹವುಂಟಾಯಿತು. ಈ ನೀಚನಾದ ಶಿಶುಪಾಲನನ್ನು ಈಗಲೇ ಸಂಹರಿಸಿ ಬಿಡಬೇಕೆಂದು ಸಂಕಲ್ಪಿಸಿದನು. ದೋಷವಿದೂರನಾದ ಆ ಸ್ವಾಮಿಯು ನೀಚನಾದ ಶಿಶುಪಾಲನ ತಪ್ಪುಗಳನ್ನು ಜನರಲ್ಲಿ ತಿಳಿಸಿ ಒಪ್ಪಿಸಬೇಕೆಂದು ಯೋಚಿಸಿ, ಸಭೆಯಲ್ಲಿದ್ದ ನಾರದಾದಿಮಹರ್ಷಿಗಳನ್ನು ನೋಡಿ ಇಂತೆಂದನು.

ಎಲೈ ಮಹಾಜನಗಳಿರಾ! ಈ ಚೈದ್ಯನ ಗರ್ವೋಕ್ತಿಗಳನ್ನೆಲ್ಲಾ ಮೊದಲಿನಿಂದಲೂ ನೀವು ಕೇಳುತ್ತಿರುವಿರಿ. ಇವನ ತಾಯಿಯ ಪ್ರಾರ್ಥನೆಯಂತೆ ನನ್ನ ವಿಷಯದಲ್ಲಿ ಇವನು ಮಾಡುವ ಶತಾಪರಾಧಗಳನ್ನು ಕ್ಷಮಿಸುವೆನೆಂದು ನಮ್ಮ ಸೋದರತ್ತೆಗೆ ಮೊದಲು ವಾಗ್ದಾನ ಮಾಡಿದ್ದೆನು. ಆದುದರಿಂದ ಇವನು ಮಾಡುವ ತಪ್ಪುಗಳನ್ನೆಲ್ಲಾ ಲೆಕ್ಕಮಾಡುತ್ತಿರಬೇಕಾಯಿತು. ಇವನು ಮೊದಲಿನಿಂದಲೂ ಹಲವು ತಪ್ಪುಗಳನ್ನು ಮಾಡಿ, ಕೆಲವನ್ನು ಮಾತ್ರವೇ ಉಳಿಸಿಕೊಂಡಿದ್ದನು. ಈಯಾಗದಲ್ಲಿ ಅವುಗಳನ್ನೂ ಮಾಡಿ ಮುಗಿಸಿ ಬಿಟ್ಟುದರಿಂದ ನನ್ನ ವಾಗ್ದಾನದ ಸಾಲವು ತೀರಿಹೋಯಿತು. ಆದರೂ ಜ್ಞಾನವನ್ನು ತಂದುಕೊಳ್ಳದೆ ಧರ್ಮಕ್ಕೂ ನೀತಿಗೂ ವಿರುದ್ಧವಾಗಿ ನಿರಪರಾಧಿಯಾದ ಧರ್ಮರಾಯನನ್ನು ತಿರಸ್ಕರಿಸಿ ನುಡಿದುದರಿಂದಲೂ, ಈ ಪಾವನವಾದ ರಾಜಸೂಯ ಯಾಗವನ್ನು ಕೆಡಿಸಿ, ಪಾಂಡವರನ್ನು ಕೊಲ್ಲುವ ಯೋಚನೆಯಲ್ಲಿರುವಂತೆ ತೋರುವುದರಿಂದಲೂ, ಲೋಕಕಂಟಕನಾದ ಇವನನ್ನು ಬೇಗ ನಿಗ್ರಹಿಸುವುದು ನನ್ನ ಕರ್ತವ್ಯವಾಗಿದೆ. ದುಷ್ಟರನ್ನು ಶಿಕ್ಷಿಸಿ, ಶಿಷ್ಟಪರಿಪಾಲನೆ ಮಾಡಿದ ಹೊರತು ಧರ್ಮಸಂಸ್ಥಾಪನೆಯಾಗುವುದಿಲ್ಲವು. ಇವನು ಮಾತ್ರವೇ ಅಲ್ಲ. ಇವನ ಜತೆಗೆ ಸೇರತಕ್ಕವರೆಲ್ಲರೂ ಶಿಕ್ಷಾರ್ಹರೆಂದು ತಿಳಿಯುತ್ತೇನೆ.

(ರಾಜರ ಕಡೆ ತಿರುಗಿ) ಭೋ ಭೋ ಕ್ಷಾತ್ರವೀರರೇ, ಮರ

ಣೋನ್ಮುಖನಾಗಿರುವ ಈ ಶಿಶುಪಾಲನ ಜತೆಗೆ ಸೇರತಕ್ಕವರು ಇದ್ದರೆ ಬೇಗಬಂದು ಸೇರಿಕೊಳ್ಳಿರಿ, ಇವನು ಅನುಭವಿಸುವ ಫಲಕ್ಕೆ ಅವರೂ ಭಾಗಿಗಳಾಗಬಹುದು.

ಶ್ರೀಕೃಷ್ಣನಾಡಿದ ಈ ಮಾತುಗಳನ್ನು ಕೇಳಿ, ಸಭೆಯಲ್ಲಿದ್ದ ರಾಜರೆಲ್ಲರೂ ಭೀತರಾಗಿ ಬಲವಿದ್ವಿರೋಧವೂ. ದೈವದ್ರೋಹವೂ ನಮಗೇಕೆಬೇಕೆಂದು ಯೋಚಿಸಿ ಆ ಸ್ವಾಮಿಗೆ ಶರಣಾಗತರಾಗಿ ಇಂತೆಂದರು.

ರಾಜರು,—ಎಲೈ ಜಗನ್ನಿಯಾಮಕನೆ, ಸೃಷ್ಟಿ ಸ್ಥಿತಿ ಲಯ ಕರ್ತನಾದ ನಿನಗೆ ನಮಸ್ಕರಿಸುವೆವು. ದೀನರಾದ ನಮ್ಮನ್ನು ಕರುಣೆಯಿಂದ ರಕ್ಷಿಸು.

ಶ್ರೀಕೃಷ್ಣ—ರಾಜರುಗಳಿರಾ, ನಿಮ್ಮಲ್ಲಿ ಅನೇಕರು ಸ್ವಭಾವದಿಂದ ಧರ್ಮಜ್ಞರಾಗಿಯೂ ಪಾಪಭೀತರಾಗಿಯೂ ಇರುವಿರಿ. ಕೆಲವರು ಮಾತ್ರ ಅಜ್ಞಾನದಿಂದ ಅಂತರಂಗದಲ್ಲಿ ಶಿಶುಪಾಲನ ಪಕ್ಷವನ್ನು ವಹಿಸಬೇಕೆಂದು ಯೋಚಿಸಿದ್ದಿರಿ. ಅಂತವರೂ ಕೂಡ ಈಗ ತಿಳುವಳಿಕೆಯನ್ನು ತಂದುಕೊಂಡು ಶರಣಾಗತರಾಗಿ ಬಂದುದರಿಂದ ನಿಮ್ಮನ್ನು ಕ್ಷಮಿಸಿ ನಿಮಗೆ ಅಭಯವನ್ನಿತ್ತಿರುವೆನು ; ಕಡು ದುರುಳನಾದ ಈ ಶಿಶುಪಾಲನನ್ನು ಮಾತ್ರ ಕ್ಷಮಿಸಲಾರೆನು. ಇವನು ಮಾಡಿದ ತಪ್ಪುಗಳು ಅಸಂಖ್ಯಾತಗಳಾಗಿದ್ದರೂ ಅವುಗಳಲ್ಲಿ ಕೆಲವನ್ನು ನಿಮ್ಮ ಗಮನಕ್ಕೆತರುವೆನು, ಕೇಳಿರಿ.

ನರಕಾಸುರನನ್ನು ಕೊಲ್ಲುವುದಕ್ಕೋಸ್ಕರ ನಾನು ಕಾಮರೂಪ (ಅಸ್ಸಾಂ)ದೇಶಕ್ಕೆ ಹೋಗಿದ್ದೆನು. ನಾನು ರಾಜಧಾನಿಯಲ್ಲಿಲ್ಲವೆಂದು ತಿಳಿದು ಈ ದುರಾತ್ಮನು ನಮ್ಮ ದ್ವಾರಕಾಪಟ್ಟಣವನ್ನು ಸುಟ್ಟುಬಿಟ್ಟನು. ಒಂದಾನೊಂದು ದಿನ ನಮ್ಮ ಯಾದವರೆಲ್ಲರೂ

ವಿಹಾರಾರ್ಥವಾಗಿ ರೈವತಕ ಪರ್ವತಕ್ಕೆಹೋಗಿದ್ದರು. ಈ ನೀಚನು ಅಲ್ಲಿಗೆಹೋಗಿ ನಿಷ್ಕಾರಣವಾಗಿ ಅವರನಲ್ಲಿ ಅನೇಕರನ್ನು ಕೊಂದು, ಕೆಲವರನ್ನು ಸೆರೆಹಿಡಿದುಕೊಂಡು ಹೋದನು. ನಮ್ಮ ತಂದೆಯಾದ ವಸುದೇವನು ಅಶ್ವಮೇಧ ಯಾಗಕ್ಕೆ ಪ್ರಾರಂಭಿಸಿ ಯಜ್ಞಾಶ್ವವನ್ನು ಬಿಡಲು, ಈ ದುರಾತ್ಮನು ಯಜ್ಞವನ್ನು ಕೆಡಿಸಿ ನನಗೆ ದ್ರೋಹವಮಾಡಬೇಕೆಂದು ಆ ಕುದುರೆಯನ್ನಪಹರಿಸಿಕೊಂಡು ಹೋದನು, ವೈಶಾಲಿಯೆಂಬ ರಾಜಕನ್ಯೆಯನ್ನು ನನ್ನ ತಂದೆಯು ಮದುವೆಯಾಗಬೇಕೆಂದು ಪ್ರಯತ್ನಿಸಲು ಈ ಚೈದ್ಯನು ಅವಳನ್ನು ಕದ್ದೊಯ್ದನು. ತಪಸ್ವಿಯಾದ ಬಭ್ರುವಿನ ಪತ್ನಿಯು ಸೌವೀರ ದೇಶಕ್ಕೆ ಹೋಗುತ್ತಿದ್ದಾಗ ಈ ಕಾಮುಕನು ಮೋಹದಿಂದ ಆಕೆಯ ಪಾತಿವ್ರತ್ಯವನ್ನು ಕೆಡಿಸಿದನು. ಇಂತಹ ತಪ್ಪುಗಳಲ್ಲಿ ಒಂದಾದರೂ ಕ್ಷಮಿಸತಕ್ಕುದಾಗಿಲ್ಲ. ಆದರೂ ಇವನ ತಾಯಿಗೆ ಮಾತು ಕೊಟ್ಟಿದ್ದುದಕ್ಕೆ ಬದ್ಧನಾಗಿ ಸೈರಿಸಿಕೊಂಡು ಬಂದೆನು. ಈ ಸಭೆಯಲ್ಲಿ ಪತಿವ್ರತೆಯಾದ ರುಕ್ಮಿಣಿಯ ಹೆಸರೆತ್ತಿದಾಗಲೇ ಇವನನ್ನುಕೊಂದುಬಿಡಬೇಕಾಗಿದ್ದಿತು. ಲೆಕ್ಕಕ್ಕೆ ಒಂದೆರಡು ತಪ್ಪು ಉಳಿದಿದ್ದುದರಿಂದ ಆಗ ಸುಮ್ಮನಿರಬೇಕಾಯಿತು. ಶತಾಪರಾಧಗಳು ತೀರಿದರೂ ದುರಹಂಕಾರಿಯಾದ ಇವನ ಹೆಮ್ಮೆಯು ಅಡಗಲಿಲ್ಲ. ಜ್ಞಾನಿಗಳ ಹಿತೋಪದೇಶಗಳೂ ಇವನಿಗೆ ರುಚಿಸಲಿಲ್ಲ. ಇಂತಹ ನೀಚನನ್ನು ಈಗಲೇ ಶಿಕ್ಷಿಸದಿದ್ದರೆ ಹಲವು ಅನರ್ಥಗಳು ಉಂಟಾಗಬಹುದಾದುದರಿಂದ ಲೋಕಹಿತಾರ್ಥವಾಗಿ ಈ ನೀಚನನ್ನು ನಿಮ್ಮ ಸಮಕ್ಷದಲ್ಲಿಯೇ ಕೊಂದುಬಿಡುವೆನು.

ಈಪ್ರಕಾರ ಹೇಳಿ ಶ್ರೀಕೃಷ್ಣನು ಯುದ್ಧಕ್ಕೆ ಸಿದ್ಧನಾದನು. ಶಿಶುಪಾಲನಿಗೆ ಆಗ್ಲೂ ಪಶ್ಚಾತ್ತಾಪ ಹುಟ್ಟಲೇ ಇಲ್ಲ. ಇತರ ರಾಜ

ರೆಲ್ಲರೂ ತನ್ನ ಪಕ್ಷವನ್ನು ಪರಿತ್ಯಜಿಸಿ, ಸ್ವಾಮಿಗೆ ಶರಣಾಗತರಾದು ದನ್ನು ನೋಡಿದರೂ ಅವನು ಎದೆಗುಂದದೆ, ಮೃತ್ಯುಪ್ರೇರಣೆಯಿಂದ ಶ್ರೀಕೃಷ್ಣನೊಂದಿಗೆ ಕಾದಲಿಕ್ಕೆ ಸನ್ನದ್ಧನಾದನು.

ಆಗ ಯುಧಿಷ್ಠಿರನು ಭೂತಭವಿಷ್ಯದ್ವರ್ತಮಾನಗಳನ್ನು ಬಲ್ಲ ನಾರದಮಹರ್ಷಿಯನ್ನು ನೋಡಿ ಇಂತೆಂದನು.

ಯುಧಿ.—ಆರ್ಯರೆ. ಈಗ ಕಾಣಬರುತ್ತಿರುವ ಉತ್ಪಾತಗಳನ್ನು ನೋಡೋಣವಾಯಿತೆ! ಇಗೋ. ಮರಗಳಲ್ಲಿರುವ ಹಸುರೆಲೆಗಳು ಒಣಗುತ್ತಲೂ, ಒಣಮರಗಳು ಚಿಗುರೆಲೆಗಳಿಂದ ಬೆಳೆಯುತ್ತಲೂ, ಬರುತ್ತಿವೆ. ಹಣ್ಣಿನಮೇಲೆ ಮತ್ತೊಂದು ಹಣ್ಣೂ, ಹೂವಿನಮೇಲೆ ಮತ್ತೊಂದು ಹೂವೂ ಕಾಣಬರುತ್ತಿವೆ. ಗಾಳಿಯು ಬೀಸದಿದ್ದರೂ ದೊಡ್ಡದೊಡ್ಡ ಮರಗಳು ಇದ್ದುದಿದ್ದಹಾಗೆಯೇ ಮುರಿದು ಬೀಳುತ್ತಿವೆ. ಧೂಮಕೇತುಗಳು ಅಲ್ಲಲ್ಲಿ ಕಾಣಿಸುತ್ತಿವೆ. ದೇವಾಲಯದ ಕಲಶಗಳೂ, ಗರ್ಭಗೃಹದಲ್ಲಿರುವ ವಿಗ್ರಹಗಳೂ ಮುರಿದು ತುಂಡು ತುಂಡಾಗಿ ಬೀಳುತ್ತಿವೆ. ಇನ್ನೂ ಏನೇನು ಆಗುತ್ತವೆಯೋ ಕಾಣೆನು. ಇವುಗಳ ಫಲವೇನೆಂಬುದನ್ನು ದಯಮಾಡಿ ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ.

ನಾರದ.—ಎಲೈ ರಾಯನೇ ಕೇಳು. ಭಗವತ್ಸಂಕಲ್ಪದಿಂದ ಯಾವಯಾವ ವೇಳೆಯಲ್ಲಿ ಏನೇನು ನಡೆಯಬೇಕೋ ಅವು ತಪ್ಪದೆ ನಡೆಯುತ್ತಿರುವವು. ಇವುಗಳನ್ನು ಮುಂದಾಗಿ ಸೂಚಿಸುವುದಕ್ಕಾಗಿಯೇ ಆ ಸ್ವಾಮಿಯ ಆಜ್ಞೆಯಿಂದ ಇಂತಹ ಉತ್ಪಾತಗಳು ಕಾಣಿಸುವುವೆಂದು ತಿಳಿಯಬೇಕು. ಆಗತಕ್ಕುದನ್ನು ತಪ್ಪಿಸಲು ಯಾರೂ ಶಕ್ತರಲ್ಲವು. ಆದರೂ ಶಾಂತಿ ಜಪ ಹೋಮಾದಿಗಳನ್ನು ಮಾಡುವುದರ ಮೂಲಕ ದುಷ್ಟಾರಿಷ್ಟಗಳನ್ನು ಪರಿಹರಿಸಿಕೊಂಡು ಮುಂದೆ

ಶುಭಗಳನ್ನು ಪಡೆಯಲು ಪ್ರಯತ್ನಿಸುವುದು ಒಳ್ಳೆಯದು. ಈಗಿನ ಉತ್ಪಾತದ ಫಲಗಳು ಶ್ರೇಯಸ್ಕರವಾದುವುಗಳಲ್ಲ; ಮುಂದೆ ಅನರ್ಥಗಳು ಬಹಳವಾಗಿ ಉಂಟಾಗಬಹುದು. ಸದ್ಯದಲ್ಲಿ ದೈವದ್ರೋಹಿಯಾದ ಈ ಶಿಶುಪಾಲನು ಶ್ರೀಕೃಷ್ಣನ ಕೈಯಿಂದ ಹತನಾಗಿ ತನ್ನ ಪೂರ್ವಸ್ಥಾನಕ್ಕೆ ಹೋಗುವನು. ಮುಂದೆ ದುರ್ಯೋಧನಾದಿಗಳು ಕೂಡ ಅಕೃತ್ಯಗಳನ್ನೂ ಮಾಡಿ ಈ ಸ್ವಾಮಿಯ ಆಗ್ರಹಕ್ಕೆ ಪಾತ್ರರಾಗುವರು. ನೀವುಗಳು ಭಗವಂತನನ್ನು ನಂಬಿ ಭಕ್ತಿಯಿಂದ ಆರಾಧಿಸುತ್ತಿದ್ದರೆ ನಿರ್ಭಯದಿಂದ ಇರಬಹುದು.

ನಾರದ ಯುಧಿಷ್ಠಿರರು ಈ ರೀತಿಯಲ್ಲಿ ಸಂಭಾಷಿಸುತ್ತಿದ್ದರು. ಅಷ್ಟರಲ್ಲಿಯೇ ಶಿಶುಪಾಲನು ಶ್ರೀಕೃಷ್ಣನಿಗೆ ಎದುರಾಗಿ ನಿಂತು, ತನ್ನ ಧನುಷ್ಟಂಕಾರ ಮಾಡುತ್ತಾ "ಎಲಾ ಕೃಷ್ಣಾ! ಪುಣ್ಯವಿಶೇಷದಿಂದ ನಿನ್ನೊಂದಿಗೆ ಸಾಕ್ಷಾತ್ತಾಗಿ ಯುದ್ಧಮಾಡುವ ಭಾಗ್ಯವು ನನಗೆ ಲಭಿಸಿತು. ಎಲ್ಲರ ಗುಟ್ಟುಗಳನ್ನೂ ಬಲ್ಲವನೆಂದು ಹೊಗಳಿಸಿಕೊಳ್ಳುವ ನೀನು ನನ್ನ ಸಾಹಸ ವಿಕ್ರಮಗಳನ್ನು ಪ್ರತ್ಯಕ್ಷದಲ್ಲಿ ನೋಡಿ ತಿಳಿ." ಎಂದು ಹೇಳಿ, ಬಿಲ್ಲಿನಲ್ಲಿ ಘೋರಾಸ್ತ್ರವನ್ನು ಸಂಧಿಸಿ ಶ್ರೀಕೃಷ್ಣನ ಮೇಲೆ ಪ್ರಯೋಗಿಸಿದನು. ಶ್ರೀಕೃಷ್ಣನು ಶರಲಾಘವದಿಂದ ಅದನ್ನು ಮಧ್ಯಮಾರ್ಗದಲ್ಲಿಯೇ ಕತ್ತರಿಸಿ, ತೀಕ್ಷ್ಣವಾದ ಮೊನೆಯುಳ್ಳ ನೂರಾರು ಬಾಣಗಳನ್ನು ಆ ಶಿಶುಪಾಲನ ಮೇಲೆ ಬಿಟ್ಟನು. ಆ ಚೈದ್ಯನು ಅವುಗಳನ್ನೆಲ್ಲಾ ಖಂಡಿಸಿ, ಶ್ರೀಕೃಷ್ಣನ ಎದೆಯಲ್ಲಿ ನೆಡುವಂತೆ ಭಯಂಕರವಾದ ಬಾಣಗಳನ್ನು ಪ್ರಯೋಗಿಸಿದನು. ಸ್ವಾಮಿಯೂ ಅವುಗಳನ್ನು ಸಹಿಸಿಕೊಂಡು "ಎಲಾ ನೀಚನೇ! ನಿನ್ನ ಆಯುಷ್ಯವು ಮುಗಿದು ಬಂತು. ಬೇಗ ನಿನ್ನ ಇಷ್ಟದೇವತಾ ಪ್ರಾರ್ಥನೆ ಮಾಡಿಕೋ" ಎಂದು ಕ್ರೂರವಾದ ಬಾಣವನ್ನು ಬಿಟ್ಟನು.

ಶಿಶುಪಾಲನು ಅದನ್ನು ಕತ್ತರಿಸಿ "ಎಲಾ ನಂದನಕಂದಾ! ನನ್ನ ಮಿತ್ರರಾದ ಮುರನರಕಕಂಸಾದಿ ವೀರರನ್ನು ಕೊಂದ ನಿನ್ನ ಹೆಸರನ್ನು ಳಿಸಿ ಅವರ ಋಣವನ್ನು ತೀರಿಸುವೆನು. ನೋಡು" ಎಂದು ಬಾಣಪ್ರಯೋಗ ಮಾಡಿದನು

ಇಂದ್ರಾದಿ ದೇವತೆಗಳು ಈ ಘೋರ ಯುದ್ಧವನ್ನು ನೋಡಬೇಕೆಂದು ವಿಮಾನಾರೂಢರಾಗಿ ಬಂದು ಆಕಾಶದಲ್ಲಿ ನೋಡುತ್ತಾ ಇದ್ದರು. ಶ್ರೀಕೃಷ್ಣನ ಮೇಲೆ ಬಿದ್ದು ಕೊಲ್ಲಬೇಕೆಂದು ಆ ಶಿಶುಪಾಲನು ಧೈರ್ಯದಿಂದ ನುಗ್ಗಿ ಬರುತ್ತಿದ್ದನು. ಆಗ ಸ್ವಾಮಿಯ ಸಾರಥಿಯಾದ ದಾರುಕನು ತನ್ನೊಡೆಯನನ್ನು ನೋಡಿ "ದೇವದೇವಾ! ಇನ್ನೂ ಏತಕ್ಕೆ ತಡವು ಮಾಡುತ್ತಿರುವೆ? ದುರಾತ್ಮನಾದ ಇವನನ್ನು ಬೇಗ ನಿಗ್ರಹಿಸಿ, ಯಜ್ಞ ಸಂರಕ್ಷಣೆ ಮಾಡು" ಎಂದು ಪ್ರಾರ್ಥಿಸಿದನು. ಆಗ ಸ್ವಾಮಿಯು ತನ್ನ ಮಹಿಮೆಯನ್ನು ಸಭೆಯವರಿಗೆ ಪ್ರಕಾಶ ಗೊಳಿಸಲೆಳಸಿ, ತನಗೆ ಪಾದಪ್ರಕ್ಷಾಳನೆ ಮಾಡಲಿಕ್ಕೆ ಇಟ್ಟದ್ದ ತಟ್ಟೆಯನ್ನು ಕೈಗೆ ತೆಗೆದುಕೊಂಡು, ಶಿಶುಪಾಲನನ್ನು ನೋಡಿ "ಎಲೈ ಚೈದ್ಯನೇ, ಇಗೋ ಈ ತಟ್ಟೆಯೇ ನಿನ್ನನ್ನು ಕೊಲ್ಲತಕ್ಕ ಸುದರ್ಶನ ಚಕ್ರವಾಗುವುದು. ನೀನು ಈಗಲೇ ಇದಕ್ಕೆ ಆಹಾರವಾಗುವೆ" ಎಂದು ಹೇಳಿ, ಅಭಿಮಂತ್ರಿಸಿ ಅವನ ಮೇಲೆ ಪ್ರಯೋಗಿಸಿದನು. ಕೂಡಲೇ ಅದು ಸುದರ್ಶನಾಕಾರದಿಂದ ವೇಗವಾಗಿ ಹೋಗಿ, ಆ ಶಿಶುಪಾಲನ ತಲೆಯನ್ನು ಕತ್ತರಿಸಿ ಹಾಕಿತು. ತತ್ಕ್ಷಣವೇ ದೇವತೆಗಳು ಆಕಾಶದಿಂದ ಪುಷ್ಪವೃಷ್ಟಿಯನ್ನು ಸುರಿಸಿ, ದೇವದುಂದುಭಿಯನ್ನು ಮೊಳಗಿಸಿದರು. ಸಭೆಯಲ್ಲಿ ಹಾಹಾಕಾರವುಂಟಾಯಿತು. ಮುನಿಜನರೆಲ್ಲರೂ ಜಯಜಯಧ್ವನಿ ಮಾಡುತ್ತಿದ್ದರು.

ಶಿಶುಪಾಲನು ಮುಂಡವು ಇಂದ್ರನ ವಜ್ರಾಯುಧದ ಪೆಟ್ಟಿನಿಂದ ಉರುಳುವ ಬೆಟ್ಟದಂತೆ ಭೂಮಿಯ ಮೇಲೆ ಬಿತ್ತು. ಅವನ ಶಿರಸ್ಸು

ನೆಗೆದು ಬಂದು ಶ್ರೀಕೃಷ್ಣನ ಪಾದಾರವಿಂದಗಳ ಮೇಲೆ ಬಿದ್ದಿತು. ಆರುಂಡದಿಂದ ದಿವ್ಯ ತೇಜಸ್ಸೊಂದು ಹೊರಟು ಬಂದು ಸ್ವಾಮಿಯ ಪಾದದಲ್ಲಿ ಐಕ್ಯವಾಯಿತು. ಆಗ ಆಕಾಶದಲ್ಲಿದ್ದ ಇಂದ್ರಾದಿದೇವತೆಗಳೂ, ಸಭೆಯಲ್ಲಿದ್ದ ವ್ಯಾಸಾದಿಮಹರ್ಷಿಗಳೂ ಪರಮಾನಂದಭರಿತರಾಗಿ, ವೈಕುಂಠದ ದ್ವಾರಪಾಲಕನಾಗಿ ವಿಜಯನೆಂಬ ಹೆಸರಿನಿಂದ ಇದ್ದ ಈತನ ಶಾಪವಿಮೋಚನೆಯಾಗಿ ಪೂರ್ವಸ್ಥಾನವು ಲಭಿಸಿತೆಂದು ಹೇಳಿ, ಭಗವನ್ಮಹಿಮೆಯನ್ನು ಹೊಗಳುತ್ತಿದ್ದರು. ಸಭಿಕರೆಲ್ಲರೂ ಭೀಷ್ಮನ ದೂರದೃಷ್ಟಿಗೂ, ಶ್ರೀಕೃಷ್ಣರಾಯನ ಸತ್ಯಪರಿಪಾಲನೆಗೂ ಮೆಚ್ಚಿ ತಲೆದೂಗುತ್ತಾ "ಆಹಾ! ಭಗವದ್ವಿಲಾಸವನ್ನು ಪ್ರತ್ಯಕ್ಷನಾಗಿ ನೋಡಿದ ನಾವೇ ಧನ್ಯರು" ಎಂದು ಸಂತೋಷಿಸಿದರು. ಮೃತನಾದ ಶಿಶುಪಾಲನ ಮಕ್ಕಳು ಅಳುತ್ತಾ ಬಂದು ಶ್ರೀಕೃಷ್ಣನ ಮರೆಹೊಕ್ಕು ಗೋಳಾಡಿದರು. ಅಪಾರ ಕರುಣಾಸಿಂಧುವಾದ ಆ ದೇವನು ಆ ಚೈದ್ಯಪುತ್ರರಿಗೆ ಅಭಯವನ್ನುಕೊಟ್ಟು, ಶಿಶುಪಾಲನಶವಕ್ಕೆ ಅಗ್ನಿಸಂಸ್ಕಾರ ಮಾಡಿಸಿ, ವಿಧಿವತ್ತಾಗಿ ಅಪರ ಕರ್ಮಗಳನ್ನೆಲ್ಲಾ ನಡಿಸಿದ ಮೇಲೆ ಆ ರಾಜನ ಜ್ಯೇಷ್ಠಪುತ್ರನಿಗೆ ಚೇದಿರಾಜ್ಯದ ಪಟ್ಟಾಭಿಷೇಕ ಮಾಡಿಸಿದನು.

ಈ ಪ್ರಕಾರವಾಗಿ ರಾಜಸೂಯಯಜ್ಞವು ನಿರ್ವಿಘ್ನವಾಗಿ ನೆರವೇರುವಂತೆ ಆದ ಬಳಿಕ ಶ್ರೀಕೃಷ್ಣನು ಪಾಂಡವರಿಗೂ ಅಲ್ಲಿದ್ದ ಬ್ರಾಹ್ಮಣರಿಗೂ ಸಮಾಧಾನದ ಮಾತುಗಳನ್ನು ಹೇಳಿ, ಉಳಿದಿದ್ದ ಯಾಗಕರ್ಮಗಳನ್ನು ಪೂರ್ತಿಗೊಳಿಸಿ, ಯಜ್ಞವನ್ನು ಸಾಂಗವಾಗಿ ಮಾಡಿಸಿ, ಸಭಿಕರನ್ನೆಲ್ಲ ಉಚಿತರೀತಿಯಿಂದ ಸತ್ಕರಿಸಲು ಏರ್ಪಾಡು ಮಾಡಿಸಿದನು.



# ಏಳನೆಯ ಸಂಧಿ.

ಸೂ|| ಕುರುಪತಿಯಾದ ದುರ್ಯೋಧನನು ಯುಧಿಷ್ಠಿರನ ಸಭೆಯ ವಿಚಿತ್ರಗಳನ್ನು ನೋಡಿ, ಆವನ ಐಶ್ವರ್ಯಕ್ಕೆ ತನ್ನ ಮನಸ್ಸಿನಲ್ಲಿ ಕರುಬುತ್ತಾ ತನ್ನ ರಾಜಧಾನಿಗೆ ಹೋದನು.

ಅಗ್ರಪೂಜಾವ್ಯಾಜದಿಂದ ಶ್ರೀಕೃಷ್ಣನಲ್ಲಿ ಆಗ್ರಹಿಸಿ, ಗರ್ವಿತನಾಗಿ ನಿಂದಿಸಿದ ಶಿಶುಪಾಲನನ್ನು ಶ್ರೀಕೃಷ್ಣನು ವಧಿಸಿದ ತರುವಾಯ ಅವನ ಮಗನಿಗೆ ಚೇದಿರಾಜ್ಯದ ಪಟ್ಟಾಭಿಷೇಕ ಮಾಡಿಸಿದನು. ಉಳಿದಿದ್ದ ಹೋಮಗಳೆಲ್ಲವೂ ಮುಗಿದು, ಯಜ್ಞವು ವಿಧಿವತ್ತಾಗಿ ಪೂರಯಿಸಿತು. ಬಳಿಕ ಅವಭೃಥವೆಂಬ ದೀಕ್ಷಾಂತಸ್ನಾನವು ನಡೆಯಿತು. ಆಮೇಲೆ ಸರ್ವರೂ ಸೇರಿ ವಸಂತೋತ್ಸವವನ್ನು ನೆರವೇರಿಸಿದರು. ಈ ರಾಜಸೂಯ ಯಾಗದಲ್ಲಿ ಅಗ್ನಿಮುಖವಾಗಿ ಕೊಡಲ್ಪಟ್ಟ ಆಹುತಿಗಳಿಂದ ದೇವತೆಗಳೂ, ಮೃಷ್ಟಾನ್ನಪಾನೀಯಗಳಿಂದ ಚಾತುರ್ವರ್ಣದ ಜನರೂ, ದಕ್ಷಿಣಾದಿಗಳಿಂದ ಯಾಚಕರೂ, ತೃಪ್ತಿಹೊಂದಿ, ರಾಜನಾದ ಯುಧಿಷ್ಠಿರನನ್ನು ಕೊಂಡಾಡಿದರು.

ಬಳಿಕ ಧರ್ಮರಾಯನು ಯಾಗಕ್ಕೆ ದಯಮಾಡಿಸಿದ್ದ ಮುನಿಜನರನ್ನೂ, ರಾಜರನ್ನೂ, ಬಂಧುಜನರನ್ನೂ ಯಥಾಯೋಗ್ಯವಾಗಿ ಸತ್ಕರಿಸಿದನು. ಇತರ ಜನರಿಗೂ ಅವರವರ ತಾರತಮ್ಯಾನುಸಾರ ತಕ್ಕಮರ್ಯಾದೆಗಳಿಂದ ಪದ್ಧತಿಯ ಪ್ರಕಾರ ಮನ್ನಿಸಿದನು. ಬಂದಿದ್ದ ಜನರೆಲ್ಲರೂ ಪಾಂಡವರ ಉಪಚಾರಗಳಿಂದ ಸಂತುಷ್ಟರಾಗಿ ಯುಧಿಷ್ಠಿರನ ವಿನಯವನ್ನೂ ಶ್ರೀಕೃಷ್ಣನ ಮಾಹಾತ್ಮ್ಯವನ್ನೂ ಹೊಗಳುತ್ತಾ, ಅವರ ಅಪ್ಪಣೆಪಡೆದು ತಮ್ಮತಮ್ಮ ಸ್ಥಳಗಳಿಗೆ ಪ್ರಯಾಣ ಮಾಡಿದರು. ಯುಧಿಷ್ಠಿರನು ಮುಖ್ಯರಾದ ಬಂಧುಜನರನ್ನೂ

ಬೀಳ್ಕೊಟ್ಟು ಸಾಗಕಳುಹಿಸಲು ತನ್ನ ಕಡೆಯ ಆಪ್ತಬಂಧುಗಳನ್ನು ಒಂದೆರಡು ಗಾವುದದೂರ ಕಳುಹಿದನು. ಭೀಷ್ಮಧೃತರಾಷ್ಟ್ರರ ಸಂಗಡ ಅರ್ಜುನನೂ, ಗುರು ಗುರುಪುತ್ರರ ಸಂಗಡ ಭೀಮನೂ, ಕೃಪಾಚಾರ್ಯನೊಂದಿಗೆ ಸಹದೇವನೂ ಹಿಂಬಾಲಿಸಿ ಬಹುದೂರ ಹೋಗಿ, ಅವರನ್ನು ಸಾಗಕಳುಹಿಸಿ, ಇಂದ್ರಪ್ರಸ್ಥಕ್ಕೆ ಬಂದು ಸೇರಿದರು. ಹೀಗೆಯೇ ಸೈಂಧವ, ಶಲ್ಯ, ಕೋಸಲ, ವಿರಾಟ, ದ್ರುಪದ, ಮೊದಲಾದ ರಾಜರುಗಳನ್ನು ಸಾಗಕಳುಹಲು ಘಟೋತ್ಕಚ, ಅಭಿಮನ್ಯು, ಪ್ರತಿವಿಂಧ್ಯಾದಿ ಕುಮಾರರೂ, ಇತರ ಆಪ್ತ ಮಂತ್ರಿಗಳೂ ಬೇರೆಬೇರೆ ಅವರಹಿಂದೆಹೋಗಿ, ಅವರನ್ನು ಸಾಗಕಳುಹಿ, ಅವರ ಅಪ್ಪಣೆಪಡೆದು ಹಿಂದಕ್ಕೆ ಬಂದು ಸೇರಿದರು.

ಕೆಲವು ದಿನಗಳು ಕಳೆದ ಬಳಿಕ ಒಂದಾನೊಂದು ದಿನ ಅರಮನೆಯಲ್ಲಿ ಶ್ರೀಕೃಷ್ಣನು ದ್ರೌಪದೀಸಹಿತರಾದ ಪಾಂಡವರನ್ನು ಕುಳ್ಳಿರಿಸಿಕೊಂಡು ಇಂತೆಂದನು.

ಶ್ರೀಕೃಷ್ಣ.—ಎಲೈ ಯುಧಿಷ್ಠಿರನೇ, ನಿನ್ನ ಸಂಕಲ್ಪದಂತೆ ರಾಜಸೂಯಯಾಗವು ನಿರ್ವಿಘ್ನವಾಗಿ ನೆರವೇರಿತು. ನೀನು ತಮ್ಮಂದಿರೊಡನೆ ಈ ಮಹಾಯಜ್ಞವನ್ನು ಮಾಡಿದ್ದರಿಂದ ನಿನ್ನ ತಂದೆಯಾದ ಪಾಂಡುರಾಯನಿಗೆ ಉತ್ತಮ ಪದವಿಯು ಲಭಿಸಿತು. ಇದರಿಂದ ನನಗೂ ಬಹುಸಂತೋಷವಾಯಿತು.

ಯುಧಿ. –(ಕೈಮುಗಿದುನಿಂತು) ಮಹಾಸ್ವಾಮಿ! ನಿನ್ನ ಕರುಣಾಕಟಾಕ್ಷದಿಂದಲೇ ಈ ಮಹತ್ಕಾರ್ಯವು ಸಾಂಗವಾಗಿ ನೆರವೇರಿತು. ನಿನ್ನ ಪಾದ ಕಮಲವನ್ನು ನಂಬಿದ ಭಕ್ತರಿಗೆ ಬ್ರಹ್ಮೇಂದ್ರಾದಿಗಳ ಪದವಿಗಳುಕೂಡಾ ಅಸಾಧ್ಯವಾದವುಗಳಲ್ಲ. ಯಜ್ಞಮೂರ್ತಿಯಾದ ನಿನ್ನ ಅನುಗ್ರಹದಿಂದ ಈ ಕಾರ್ಯವು ನೆರವೇರಿತೇ ಹೊರತು

ನಮ್ಮ ಶಕ್ತಿ ಸಾಹಸಗಳಿಂದ ನಡೆಯಿತೆಂದು ಹೇಳಲಾರೆನು. ಆ ಜರಾಸಂಧನು ಜೀವಿಸಿದ್ದರೆ ನಮ್ಮ ಯಜ್ಞವನ್ನು ಆಗಗೊಳಿಸುತ್ತಿದ್ದನೆ? ಆಗ್ರಹವ್ಯಗ್ರನಾಗಿ ನಿಂತಿದ್ದ ಶಿಶುಪಾಲನನ್ನು ನಿಗ್ರಹಿಸುವುದು ನಮ್ಮಿಂದ ಸಾಧ್ಯವಾಗುತ್ತಿದ್ದಿತೆ? ಹಿಂದೆ ನಿಮ್ಮ ಪರಮ ಭಕ್ತನಾಗಿದ್ದ ಪ್ರಹ್ಲಾದನು ತಂದೆಯ ಅಪ್ಪಣೆಯಂತೆ ಭಗವನ್ಮಹಿಮೆಯ ಪರೀಕ್ಷೆಯ ಕಾಲವು ಒದಗಿರುವುದರಿಂದ ಈ ಕಂಬದಲ್ಲಿ ಪ್ರತ್ಯಕ್ಷವಾಗಿ ಅವತರಿಸಬೇಕೆಂದು ನಿನ್ನನ್ನು ಪ್ರಾರ್ಥಿಸಲು, ತತ್ಕ್ಷಣದಲ್ಲಿಯೇ ನರಸಿಹ್ಮರೂಪದಿಂದ ಅವತರಿಸಿ, ಆ ದುಷ್ಟನನ್ನು ನಿಗ್ರಹಿಸಿ, ಭಕ್ತನನ್ನು ಪೊರೆದೆಯಲ್ಲವೆ? ಗಜೇಂದ್ರನ ಬಾಧೆಯನ್ನು ಬಿಡಿಸಿದವರು ಯಾರು? ನಿನ್ನ ಅನುಗ್ರಹವಿದ್ದರೆ ಚತುರ್ದಶ ಲೋಕಗಳಲ್ಲಿ ಎಂತಹ ಅಸಾಧ್ಯವಾದ ಕಾರ್ಯವಾದರೂ ನೆರವೇರುವುದರಲ್ಲಿ ಸಂಶಯವಿಲ್ಲವು. ನೀನು ಕರುಣಿಸಿ ಈ ಯಜ್ಞವನ್ನು ಸಾಂಗವಾಗಿ ನಡಿಸಿದುದರಿಂದ ನಮ್ಮ ತಂದೆಗೆ ಉತ್ತಮ ಪದವಿಯು ಲಭಿಸಿತು. ನಿನ್ನ ಉಪಕಾರಕ್ಕಾಗಿ ವಂದಿಸುತ್ತೇನೆ.

ಹೀಗೆ ಹೇಳಿ ಶ್ರೀಕೃಷ್ಣನ ಪಾದಗಳಮೇಲೆ ಬಿದ್ದ ಧರ್ಮರಾಯನನ್ನು ಮೇಲಕ್ಕೆ ಎತ್ತಿ ಆಲಿಂಗಿಸಿಕೊಂಡು “ ಭಾವಾ, ನಿಮ್ಮ ಏಳಿಗೆಗಿಂತ ಸಂತೋಷಕರವಾದುದು ನನಗೆ ಮತ್ತಾವುದೂ ಇಲ್ಲ. ನೀವು ಹಿಂದೆ ಎಷ್ಟೆಷ್ಟೋ ಕಷ್ಟಗಳನ್ನು ಅನುಭವಿಸಿದಿರಿ. ವಿಷಬಾಧೆಯಿಂದ ವಿಮುಕ್ತರಾದಿರಿ. ಅಗ್ನಿಬಾಧೆಗೆ ಸಿಕ್ಕದೆ ಉಳಿದುಕೊಂಡಿರಿ. ನಿಮ್ಮ ದಾಯಾದರಾದ ಕೌರವರು ಬಲು ದುಷ್ಟರು. ನಿಮ್ಮ ಅಭಿವೃದ್ಧಿಯು ಅವರಿಗೆ ಸ್ವಲ್ಪವೂ ಸೈರಿಸದು. ನಿಮ್ಮ ಧರ್ಮಪ್ರಭಾವದಿಂದಲೇ ನಿಮಗೆ ಸಂಭವಿಸಿದ ಕಷ್ಟಗಳೆಲ್ಲವೂ ಪರಿಹರವಾದುವು. ಮುಂದೆಯೂ ನೀವು ತುಂಬ ಜಾಗರೂಕರಾಗಿಯೇ

ಇರಬೇಕು. ರಾಜರಿಗೆ ಜೂಜೂ, ಬೇಟೆಯೂ ದುರ್ವ್ಯಸನಗಳು. ನಳ ದಶರಥಾದಿ ಚಕ್ರವರ್ತಿಗಳು ಕೂಡ ಇವುಗಳಿಂದ ಬಹು ತೊಂದರೆಗಳಿಗೆ ಒಳಗಾದರು. ನೀವು ಈ ದುರ್ವ್ಯಸನಗಳಿಗೆ ಸಿಕ್ಕಬೇಡಿರಿ. ಹಿರಿಯರಲ್ಲಿ ವಿಧೇಯರಾಗಿ ನಡೆದುಕೊಳ್ಳಿರಿ. ನೀತಿತಪ್ಪಿ ನಡೆಯಬೇಡಿರಿ. ಸಜ್ಜನರಲ್ಲಿ ಪ್ರೀತಿಯಿಂದ ವರ್ತಿಸಿರಿ. ಪ್ರಜೆಗಳಲ್ಲಿ ನಿಷ್ಪಕ್ಷಪಾತ ಬುದ್ಧಿಯಿಂದ ನಡೆದು ಸತ್ಕೀರ್ತಿಯನ್ನು ಪಡೆಯಿರಿ. ನಿಮಗೆ ಎಂತಹ ವಿಪತ್ತುಗಳು ಸಂಭವಿಸಿದರೂ ಧರ್ಮವನ್ನುಮಾತ್ರ ಬಿಡಬೇಡಿರಿ, ನಿಮ್ಮ ಜ್ಞಾತಿಗಳ ವಿಷಯದಲ್ಲಿ ಎಚ್ಚರದಿಂದ ಇದ್ದು ಶತ್ರುಗಳಲ್ಲಿ ನಿಮ್ಮ ಸಾಮರ್ಥ್ಯವನ್ನು ತೋರಿಸಿದರೆ ನಿಮಗೆ ಶ್ರೇಯಸ್ಸುಂಟಾಗುವುದು." ಎಂದು ಹೇಳಿ ದ್ರೌಪದಿಯನ್ನು ನೋಡಿ ಇಂತೆಂದನು.

ತಂಗೀ, ಬಾರಮ್ಮಾ, ಮಹಾರಾಜಕುಮಾರಿಯಾದ ನೀನು ಇದುವರೆಗೆ ಯಾವ ಕಷ್ಟಕ್ಕೂ ಸಿಕ್ಕಿದವಳಲ್ಲ. ಮುಂದೆ ಏನೇನು ಸಂಭವಿಸುವುದೋ ಅದನ್ನು ಬಲ್ಲವರಿಲ್ಲ. ನೀತಿ ವಿಶಾರದಳಾದ ನಿನಗೆ ಹೆಚ್ಚಾಗಿ ಹೇಳಬೇಕಾದ ಉಪದೇಶ ವಾಕ್ಯಗಳಿಲ್ಲ. ಆದರೂ ಒಂದೆರಡು ಬುದ್ಧಿಯ ಮಾತುಗಳನ್ನು ಹೇಳುವೆನು ಕೇಳು. ಲಕ್ಷ್ಮಿಯು ಸ್ವಭಾವದಿಂದ ಚಂಚಲೆಯಾದವಳು. ಅವಳು ಒಂದೇಕಡೆ ಸ್ಥಿರವಾಗಿ ನಿಲ್ಲುವಳೆಂದು ನಂಬಬೇಡ. ನೀನು ಪತಿವ್ರತಾ ಸ್ತ್ರೀಯರಿಗೆ ಗುರುವಾದವಳು. ಹರ್ಷವಿಷಾದಗಳಲ್ಲಿ ಸಮಾನಬುದ್ಧಿಯುಳ್ಳವಳಾಗಿರು. ಮಳೆಗಾಲದಲ್ಲಿ ಕೆರೆಯಲ್ಲಿ ನೀರು ತುಂಬಿಕೊಂಡಿದ್ದು, ಬೇಸಗೆಯಲ್ಲಿ ಬತ್ತಿಹೋಗುವಂತೆ ಅವರವರ ಕರ್ಮಾನುಗುಣವಾಗಿ ಲಾಭಾಲಾಭಗಳು ಸಂಭವಿಸುತ್ತಿರುವುವು. ನೀನು ಐಶ್ವರ್ಯವಿರುವುದೆಂದು ಹಿಗ್ಗದೆ, ಕಷ್ಟಬಂದಾಗ ಕುಗ್ಗದೆ ಆಯಾ ಕಾಲಗಳಲ್ಲಿ ಪ್ರಾಪ್ತವಾದುದನ್ನು

ಅನುಭವಿಸುತ್ತಿರು. ವೀರಪತ್ನಿಯಾದ ನೀನು ನಿನ್ನ ಪತಿಗಳಿಗೆ ಸಮಯದಲ್ಲಿ ತಕ್ಕ ಮಂತ್ರಾಲೋಚನೆಯನ್ನು ಹೇಳಿಕೊಂಡು, ಧರ್ಮಮಾರ್ಗ ಪ್ರವರ್ತಕರಾಗುವಂತೆ ಮಾಡುತ್ತಿರಬೇಕೆಂದು ಆಶಿಸುತ್ತೇನೆ.

ಶ್ರೀಕೃಷ್ಣನು ಈಪ್ರಕಾರ ಉಪದೇಶಿಸಿದ ಬಳಿಕ ತನ್ನ ಸೋದರತ್ತೆಯಾದ ಕುಂತೀದೇವಿಯ ಬಳಿಗೆ ಹೋಗಿ, ಆಕೆಯ ಪಾದಗಳಿಗೆ ವಂದನೆಮಾಡಿ 'ಅತ್ತೇ, ನಿನ್ನ ಮಕ್ಕಳು ಶ್ರೇಷ್ಠವಾದ ರಾಜಸೂಯ ಯಾಗವನ್ನು ಮಾಡಿ, ಲೋಕವಿಖ್ಯಾತರಾದರು. ಶೌರ್ಯಧುರಂಧರರಾದ ಭೀಮಾರ್ಜುನರ ಎದುರಿಗೆ ನಿಲ್ಲತಕ್ಕ ವೀರರು ಎಲ್ಲಿಯೂ ಇಲ್ಲ. ಯಜ್ಞಸಮಾರಂಭವು ಮುಗಿಯಿತು. ನಾವು ಊರು ಬಿಟ್ಟುಬಂದು ಬಹು ದಿನಗಳಾದುವು. ದ್ವಾರಕೆಗೆ ಹೋಗಿ ಬರುವೆನು. ಹೊರಡಲು ದಯಮಾಡಿ ನನಗೆ ಅನುಮತಿಕೊಡು. ತಂಗಿಯಾದ ಸುಭದ್ರೆಯನ್ನು ಅಭಿಮನ್ಯು ಕುಮಾರನೊಂದಿಗೆ ನನ್ನ ಸಂಗಡ ಕಳುಹಿಸಿಕೊಡು. ಕೆಲವುಕಾಲ ದ್ವಾರಕೆಯಲ್ಲಿರಿಸಿಕೊಂಡಿದ್ದು, ತರುವಾಯ ಕಳುಹುವೆನು." ಎಂದು ಹೇಳಿದನು.

ಅದಕ್ಕೆ ಕುಂತಿಯು "ಕೃಷ್ಣಯ್ಯಾ, ನಿನ್ನ ಅನುಗ್ರಹವನ್ನೇ ನಂಬಿರುವ ನನ್ನ ಮಕ್ಕಳು ನೆನೆದ ಕಾರ್ಯಗಳು ಕೈಗೂಡುವುದು ಏನೂ ಆಶ್ಚರ್ಯಕರವಲ್ಲ. ನಿನಗೆ ನನ್ನ ಮಕ್ಕಳಮೇಲೆ ಸಂಪೂರ್ಣಾನುಗ್ರಹವಿರುವುದರಿಂದ ಅವರ ಇಷ್ಟಾರ್ಥಗಳು ತಪ್ಪದೆ ಸಿದ್ಧಿಸುವುವು. ನಿನ್ನ ಇಷ್ಟದಂತೆ ಪುತ್ರಸಹಿತಳಾದ ಸುಭದ್ರೆಯನ್ನು ಕೆಲವು ದಿನಗಳ ಮಟ್ಟಿಗೆ ಕರೆದುಕೊಂಡು ಹೋಗಬಹುದು. ಹೆಣ್ಣು ಮಕ್ಕಳಿಗೆ ತೌರುಮನೆಗೆ ಆಗಾಗ್ಗೆ ಹೋಗಿಬರಬೇಕೆಂಬ ಆಶೆಯೂ, ಹಿರಿಯರಿಗೆ ತಮ್ಮ ಹೆಣ್ಣುಮಕ್ಕಳನ್ನು ಕರೆದುತಂದು ಉಪಚರಿಸಬೇಕೆಂಬ

ಅಪೇಕ್ಷೆಯೂ, ಇರುವುದು ಲೋಕಸ್ವಭಾವವಾಗಿದೆ, ನಿನ್ನ ಇಷ್ಟ ಬಂದಂತೆ ನಡಿಸು.'' ಎಂದು ಹೇಳಿದಳು.

ಬಳಿಕ ಒಂದು ಶುಭದಿನದಲ್ಲಿ ಶ್ರೀಕೃಷ್ಣನು ದ್ವಾರಕೆಗೆ ಪ್ರಯಾಣವಾಡಿದನು. ಆತನ ಸಂಗಡ ಸಾತ್ಯಕಿ, ಸಾಂಬ, ಅನಿರುದ್ಧ ಪ್ರದ್ಯುಮ್ನ, ಕೃತವರ್ಮಾದಿ ಯದುವೀರರೂ, ಪುತ್ರಸಹಿತಳಾದ ಸುಭದ್ರೆಯೂ ಪ್ರತ್ಯೇಕ ರಥಗಳಲ್ಲಿ ಕುಳಿತು ಹೊರಟರು. ಯುಧಿಷ್ಠಿರನು ತನ್ನ ತಮ್ಮಂದಿರೊಂದಿಗೆ ಶ್ರೀಕೃಷ್ಣನ ಸಂಗಡ ಬಹುದೂರ ಹೋಗಿ, ಆತನನ್ನು ಕಳುಹಿಸಿಕೊಟ್ಟು. ಅಪ್ಪಣೆಪಡೆದು ಹಿಂದಿರುಗಿ ಬಂದನು. ಶ್ರೀಕೃಷ್ಣನ ವಿರಹದಿಂದ ಯುಧಿಷ್ಠಿರನ ಮನಸ್ಸಿಗೆ ಬಹು ವಿಷಾದವಾಯಿತು. ಒಂದೆರಡು ದಿನಗಳು ಕಳೆದಬಳಿಕ ಆತನು ವೇದವ್ಯಾಸ ಮಹರ್ಷಿಯನ್ನು ತನ್ನ ಪುರೋಹಿತನಾದ ಧೌಮ್ಯನ ಮೂಲಕ ಕರೆಯಿಸಿಕೊಂಡು, ಆತನಿಗೆ ವಂದಿಸಿ ಇಂತೆಂದನು.

ಯುಧಿ.—ಮಹಾತ್ಮರೇ, ನಮ್ಮ ಶ್ರೀಕೃಷ್ಣಮೂರ್ತಿಯು ರಾಜಸೂಯಯಾಗದಲ್ಲಿ ಯಜಮಾನನಾಗಿ ನಿಂತು ಯಜ್ಞವನ್ನು ಸಾಂಗವಾಗಿ ನೆರವೇರಿಸಿದನು. ಈ ಪೃಥ್ವಿಯಲ್ಲಿರುವ ಸಮಸ್ತ ರಾಜರೆದುರಿಗೆ ನನ್ನನ್ನು ಒಬ್ಬ ಹೆಸರುಳ್ಳವನೆನಿಸಿ ಕೀರ್ತಿಯನ್ನುಂಟುಮಾಡಿದುದು ಆ ಸ್ವಾಮಿಯ ಪರಮಾನುಗ್ರಹವೇ ಹೊರತು ಮತ್ತಾವುದೂ ಅಲ್ಲ. ಈಗ ಆ ಮಹಾತ್ಮನು ನಮ್ಮನ್ನಗಲಿ ಹೊರಟುಹೋದುದರಿಂದ ಹಿಂದೆ ಆತನು ಮಧುರೆಗೆ ಹೋದಾಗ ನಂದಗೋಕುಲವೆಲ್ಲವೂ ಆತನ ಅಗಲಿಕೆಯಿಂದ ದುಃಖಿಸುತ್ತಿದ್ದ ಹಾಗೆಯೇ ಆತನ ವಿರಹದಿಂದ ನಮ್ಮ ಪಟ್ಟಣವೆಲ್ಲವೂ ದುಃಖ ಸಮುದ್ರದಲ್ಲಿಮುಳುಗಿದೆ.

ವ್ಯಾಸ.—ಎಲೈರಾಜನೇ, ದೇವದೇವನಾಗಿಯೂ, ನಿಮ್ಮ ಹಿತಚಿಂತಕನಾಗಿಯೂ, ಆಪ್ತಬಂಧುವಾಗಿಯೂ ಇರುವ ಶ್ರೀ

ಕೃಷ್ಣನ ಅಗಲಿಕೆಯಿಂದ ನೀವು ದುಃಖಿಸತಕ್ಕದು ಸಹಜವೇಸರಿ. ಆದರೂ ಆತನು ಇಲ್ಲಿಯೇ ಇರುವುದಕ್ಕಾಗದೀತೆ? ದೈತ್ಯದಾನವರು ದ್ವಾರಕಿಯಮೇಲೆ ಯಾವಾಗಲೂ ಕಣ್ಣಿಟ್ಟು ನೋಡುತ್ತಲೇ ಇರುವರು. ಶ್ರೀಕೃಷ್ಣನು ಅಲ್ಲಿ ಇಲ್ಲದಿದ್ದರೆ ಆ ಪಟ್ಟಣಕ್ಕೆ ಭೀತಿ ಇದ್ದೇ ಇರುವುವು. ಆದುದರಿಂದ ಆತನು ಆಗಾಗ್ಗೆ ತನ್ನ ರಾಜಧಾನಿಗೆ ಹೋಗಿ ವಿಚಾರಿಸಿಕೊಳ್ಳಬೇಕಾದುದು ಅಗತ್ಯವು. ಆದರೂ ನೀನು ಈ ವಿಷಯದಲ್ಲಿ ಚಿಂತಿಸಬೇಕಾಗಿಲ್ಲ. ನಿಮ್ಮ ಮೇಲೆ ಆತನ ಕೃಪಾಕಟಾಕ್ಷವು ಸಂಪೂರ್ಣವಾಗಿರುವುದರಿಂದ ನೀವು ಸ್ಮರಿಸಿದಾಗ ಆ ಮಹಾತ್ಮನು ಬಂದು ನಿಮ್ಮ ಕೋರಿಕೆಗಳನ್ನು ನಡಿಸಿಕೊಡಲು ಸಿದ್ಧನಾಗಿರುವನು. ಮನಸಿನ ಕಳವಳವನ್ನು ಉಳಿದು ನಿಶ್ಚಿಂತನಾಗಿರು.

ಯುಧಿ.—ಮಹಾತ್ಮರೇ, ತಮ್ಮ ಮಾತು ವಾಸ್ತವವಾದುದು. ನಾವು ನಿರಂತರವೂ ಆತನನ್ನು ಧ್ಯಾನಿಸುತ್ತಿರುವುದರಿಂದಲೇ ಆರೋಗದೃಢಗಾತ್ರರಾಗಿಯೂ, ಐಶ್ವರ್ಯವಂತರಾಗಿಯೂ, ರಾಜ್ಯಾಧಿಕಾರಿಗಳಾಗಿಯೂ ಸುಖದಿಂದ ಇರುವೆವು. ಮುಂದೆಯೂ ಆತನ ಅನುಗ್ರಹವು ಪೂರ್ಣವಾಗಿರಬೇಕೆಂದು ಪ್ರಾರ್ಥಿಸುತ್ತಾ ಆತನನ್ನೇ ನಂಬಿಕೊಂಡಿರುವೆವು. ಮತ್ತೊಂದು ವಿಷಯವನ್ನು ತಮ್ಮಲ್ಲಿ ಅರಿಕೆ ಮಾಡಬೇಕಾಗಿದೆ. ಯಜ್ಞಾಂತದಲ್ಲಿ ಕೆಲವು ಉತ್ಪಾತಗಳು ತೋರಿದುವು. ಅವುಗಳ ಫಲವೇನೆಂಬುದನ್ನು ದಯಮಾಡಿ ಅಪ್ಪಣೆ ಕೊಡಿಸಬೇಕು.

ವ್ಯಾಸ.—ಎಲೈ ಯುಧಿಷ್ಠಿರನೇ, ಭೂಭಾರ ನಿವೃತ್ತಿಯಾಗುವುದಕ್ಕೆ ಇದು ಸೂಚನೆಯೆಂದು ತಿಳಿಯತಕ್ಕದು. ಶಿಶುಪಾಲವಧೆಯೇ ಇದಕ್ಕೆ ಪ್ರಾರಂಭವು. ಮುಂದೆ ಇನ್ನೂ ಕೆಲವು ಅನರ್ಥಗಳು ನಡೆಯಬಹುದು. ಅವುಗಳನ್ನು ಈಗ ಹೇಳುವುದು ಯುಕ್ತವಲ್ಲ.

ಯುಧಿ.—ಪೂಜ್ಯರೇ, ತಾವು ಹೇಳಕೂಡದೆಂದು ಉದ್ದೇಶಿಸಿರುವ ರಹಸ್ಯಗಳನ್ನು ನನಗೆ ಹೇಳಬೇಕೆಂದು ಬಲಾತ್ಕರಿಸಲಾರೆನು. ಆದರೂ ಆಕಸ್ಮಿಕವಾಗಿ ಏನಾದರೂ ವಿಪತ್ತು ಬಂದರೆ ಅಂತಹವೇಳೆಯಲ್ಲಿ ಉಪಯೋಗಕ್ಕೆ ಬರುವ ಕೆಲವು ಹಿತೋಕ್ತಿಗಳನ್ನು ಅನುಗ್ರಹಿಸಿದರೆ ಧನ್ಯನಾಗುವೆನು.

ವ್ಯಾಸ.—ರಾಜನೇ ಕೇಳು, ಭಗವದಿಚ್ಛಾನುಸಾರವಾಗಿ ನಡೆಯಬೇಕಾದ ಕೆಲಸಗಳು ಆಯಾ ಕಾಲಗಳಲ್ಲಿ ತಪ್ಪದೆ ನಡೆಯುತ್ತಲೇ ಇರುವುವು. ಇದಕ್ಕಾಗಿ ಮೋಹಿತರಾಗದೆ ಧೈರ್ಯದಿಂದ ಬಂದುದನ್ನು ಅನುಭವಿಸುತ್ತಿರುವುದೇ ಪ್ರಾಜ್ಞರ ಲಕ್ಷಣವು. ನೀನಾಗಿ ಕೇಳಿದುದರಿಂದ ಕೆಲವು ಹಿತವಾಕ್ಯಗಳನ್ನು ಹೇಳುತ್ತೇನೆ. ನೀನು ಸಮಾಜಕ್ಕೆ ಹಿತವಾದ ವೇದೋಕ್ತಧರ್ಮಗಳಲ್ಲಿ ಶ್ರದ್ಧೆಯುಳ್ಳವನಾಗಿ, ನಿನ್ನ ಕರ್ತವ್ಯಗಳನ್ನು ತಪ್ಪದೆ ಆಚರಿಸುತ್ತಿರು. ಆಪ್ತರ ವಾಕ್ಯಗಳಲ್ಲಿ ನಂಬಿಕೆಯನ್ನಿಡು. ಧರ್ಮಪುತ್ರನಾದ ನಿನಗೆ ಕಲಿಕಲ್ಮಷವು ಸ್ವಲ್ಪವೂ ಹೊಂದದು. ದಾಯಾದಿಗಳು ನಿಮ್ಮ ಅಭಿವೃದ್ಧಿಯನ್ನು ನೋಡಿ ಸಹಿಸತಕ್ಕವರಲ್ಲ. ಅವರು ನಿಮ್ಮ ಐಶ್ವರ್ಯವನ್ನು ನೋಡಿ, ಸೈರಿಸದೆ, ನಿಮಗೆ ಏನಾದರೂ ತೊಂದರೆ ಕೊಡಬಹುದು. ಅವರವರು ಮಾಡಿದುದರ ಫಲವನ್ನು ಅವರವರು ಅನುಭವಿಸದೆ ತಪ್ಪದು, ನೀನು ಮಾತ್ರ ಎಂದಿಗೂ ಅಸತ್ಯವನ್ನು ನುಡಿಯಲೇಬೇಡ. ಧರ್ಮರಕ್ಷಣೆಗಾಗಿ ಐಶ್ವರ್ಯವನ್ನಾಗಲಿ ರಾಜ್ಯವನ್ನಾಗಲಿ ತುಚ್ಛವೆಂದು ತಿಳಿದು ಪರಿತ್ಯಜಿಸಲು ಸಿದ್ಧನಾಗಿರು. ನೀನು ಮೋಕ್ಷಲಕ್ಷ್ಮಿಯನ್ನು ಪಡೆಯಬೇಕಾದರೆ ನಿನ್ನ ಶರೀರವೇ ಮೊದಲಾದ ಸಮಸ್ತವಸ್ತುಗಳನ್ನು ಬಿಟ್ಟಾದರೂ ಸತ್ಯಧರ್ಮಗಳನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುವುದು ಅಗತ್ಯವು. ಇಷ್ಟರಮೇಲೆ ನಿನಗೆ ಏನಾದರೂ ಕಷ್ಟಬಂದರೆ

ಅವುಗಳನ್ನು ಪರಿಹರಿಸಿ ರಕ್ಷಿಸಲು, ದೀನಬಂಧುವಾದ ಶ್ರೀಕೃಷ್ಣನು ಸಿದ್ಧನಾಗಿಯೇ ಇರುವನೆಂದು ನಂಬು.

ಈ ಮಾತನ್ನು ಕೇಳಿ ಯುಧಿಷ್ಠಿರನು ಆ ಕೃಷ್ಣದ್ವೈಪಾಯನ ಮುನಿಗೆ ನಮಸ್ಕರಿಸಿ ಆತನ ಸಮಕ್ಷದಲ್ಲಿ ಹೀಗೆ ಪ್ರತಿಜ್ಞೆಮಾಡಿದನು.

"ಆರ್ಯರೇ, ಇಂದಿನಿಂದ ಮುಂದೆ ಯಾವಾಗಲೂ ಸರಿಯಾದ ಕಾರಣವಿಲ್ಲದೆ ನಾನು ನನ್ನ ಸಹೋದರರನ್ನಾಗಲಿ, ಇತರ ಜನರನ್ನಾಗಲಿ ಕಠಿನವಾಕ್ಯಗಳಿಂದ ನೋಯಿಸತಕ್ಕವನಲ್ಲ. ನನ್ನ ಜ್ಞಾತಿಗಳಿಗೆ ಅಹಿತವನ್ನು ಚಿಂತಿಸತಕ್ಕವನೂ ಅಲ್ಲ. ಸತ್ಯಧರ್ಮಗಳನ್ನು ರಕ್ಷಿಸುವುದಕ್ಕಾಗಿ ರಾಜ್ಯವನ್ನಾಗಲಿ, ಐಶ್ವರ್ಯವನ್ನಾಗಲಿ, ಸಹೋದರರನ್ನಾಗಲಿ, ಸಾಕ್ಷಾತ್ಪತ್ನಿಯನ್ನಾಗಲಿ ಮತ್ತಾವ ಪ್ರಿಯವಸ್ತುಗಳನ್ನಾಗಲಿ ಪರಿತ್ಯಜಿಸಲು ಸಿದ್ಧನಾಗಿರುವೆನು."

ಧರ್ಮರಾಯನ ತಮ್ಮಂದಿರೆಲ್ಲರೂ ಆತನಿಗೆ ಕೈಮುಗಿದು "ಅಣ್ಣಾ, ನಿಮ್ಮ ಪ್ರತಿಜ್ಞಾಪಾಲನೆಗಾಗಿ ನಾವೂ ಕೈಯಲ್ಲಾದ ಮಟ್ಟಿಗೆ ಸಹಾಯಕರಾಗಿರುವೆವು. ತಮ್ಮ ಆಜ್ಞೆಗೆ ಪ್ರತಿಹೇಳದೆ ನಿಮ್ಮ ಇಷ್ಟಾನುಸಾರವಾಗಿಯೇ ನಡೆದುಕೊಳ್ಳುವೆವು." ಎಂದು ಪ್ರತಿಜ್ಞೆಮಾಡಿದರು. ಬಳಿಕ ವ್ಯಾಸಮಹರ್ಷಿಯು ಸಂತೋಷಿಸಿ, ಅವರೆಲ್ಲರನ್ನೂ ಹರಸಿ, ಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದನು.

ರಾಜಸೂಯಯಾಗಕ್ಕೆ ದಯಮಾಡಿಸಿದ್ದ ವ್ಯಾಸಾದಿ ಮಹರ್ಷಿಗಳೂ, ಧೃತರಾಷ್ಟ್ರಾದಿ ಬಂಧುಜನರೂ, ಇತರ ರಾಜರುಗಳೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟರು. ಅತ್ಯಂತ ವಿಜೃಂಭಣೆಯಿಂದ ನಡೆದ ರಾಜಸೂಯಯಾಗ ಮಹೋತ್ಸವವನ್ನು ನೋಡಿ, ಮನಸ್ಸಿನಲ್ಲಿ ಕುದಿಯುತ್ತಿದ್ದ ದುರ್ಯೋಧನನು ಮಾತ್ರ ಮಯನಿರ್ಮಿತವಾದ ಸಭೆಯನ್ನು ಚೆನ್ನಾಗಿ ವಿಮರ್ಶಿಸಿ ನೋಡಬೇಕೆಂಬ ಉದ್ದೇಶದಿಂದ

ತನ್ನ ಸೋದರಮಾವನಾದ ಶಕುನಿಯೊಂದಿಗೆ ಇಂದ್ರಪ್ರಸ್ಥದಲ್ಲಿಯೇ ಕೆಲವು ದಿನಗಳವರೆಗೆ ಇದ್ದನು. ಪಾಂಡವರು ನಿತ್ಯವೂ ಆತನನ್ನು ಸಭೆಗೆ ಕರೆದುಕೊಂಡುಹೋಗಿ, ಅಲ್ಲಿಯ ವಿಚಿತ್ರಗಳನ್ನೆಲ್ಲಾ ತೋರಿಸುತ್ತಾ ಬಂದರು. ಆ ರಾಜನು ಅದುವರೆಗೆ ಎಂದೂ ಕಾಣದೆ ಇದ್ದ ಅತ್ಯಾಶ್ಚರ್ಯಕರಗಳಾದ ವಿಶೇಷಗಳನ್ನೆಲ್ಲಾ ನೋಡಿ ಆನಂದಪಡುತ್ತಿದ್ದನು.

ಒಂದುದಿನ ಆತನು ಯುಧಿಷ್ಠಿರಾದಿಗಳೊಂದಿಗೆ ಸಭಾಮಂಟಪದಲ್ಲಿ ಹೋಗುತ್ತಿರುವಾಗ ಸ್ಫಟಿಕಶಿಲಾನಿರ್ಮಿತಗಳಾದ ಅನೇಕ ಕೃತಕಗಳನ್ನು ನೋಡಿ ಅವುಗಳ ರಹಸ್ಯಗಳನ್ನು ಕಂಡುಹಿಡಿಯಲಾರದೆ ಹೋದನು. ಅಲ್ಲಿ ಇದು ಸ್ಥಲ, ಇದು ಜಲ, ಇದುಗಿಡ, ಇದು ಬಾಗಿಲು, ಇದುಗೋಡೆ, ಎಂಬ ನಿಶ್ಚಯಾಂಶವೇ ತಿಳಿಯದೆ ಎಂತಹ ಜಾಣರಿಗೂ ಭ್ರಾಂತಿಯನ್ನುಂಟುಮಾಡುತ್ತಿದ್ದಿತು. ಯಾರೇ ಆಗಲಿ, ಹಿಂದೆ ಎಂದೂ ನೋಡದೆ ಇದ್ದ ಅದ್ಭುತವಸ್ತುಗಳನ್ನು ಚೆನ್ನಾಗಿ ವಿಮರ್ಶಿಸುವ ತನಕ ವಾಸ್ತವಸ್ಥಿತಿಯನ್ನು ಕಂಡು ಹಿಡಿಯುವುದು ಕಷ್ಟವು. ಅಲ್ಲಿ ಒಂದುಕಡೆ ಸ್ಫಟಿಕಶಿಲಾಮಯವಾಗಿದ್ದ ಭೂಮಿಯು ಸರೋವರದಂತೆ ನೀರು, ಕಮಲಾದಿಪುಷ್ಪಗಳು, ಸೋಪಾನಗಳು ಇರುವಹಾಗೆಕಾಣುವಂತೆ ಮಾಡಲ್ಪಟ್ಟಿತ್ತು. ಆಗ ವಿಚಿತ್ರವಾದ ರತ್ನಗಳ ನೆಲಗಟ್ಟಿನಮೇಲೆ ಹೋಗುತ್ತಿದ್ದ ದುರ್ಯೋಧನನು ಅದೊಂದು ಕೊಳವೆಂದು ತಿಳಿದು ತನ್ನ ಬಟ್ಟೆಗಳು ತೋದುಹೋಗುವುವೆಂದು ಭ್ರಾಂತನಾಗಿ ಅವುಗಳನ್ನು ಮೇಲಕ್ಕೆ ಎತ್ತಿ ಕಟ್ಟಿಕೊಂಡು ನಡೆಯಲು, ಸಂಗಡ ಇದ್ದ ಜನರು ಆವನ ಅವಜ್ಞತೆಗಾಗಿ ನಕ್ಕರು. ಅಲ್ಲಿಂದ ಮುಂದೆ ಇನ್ನೂ ಸ್ವಲ್ಪದೂರ ಹೋಗಲು, ರಚನಾಚಾತುರ್ಯದಿಂದ ಸಾಮಾನ್ಯವಾದ ನೆಲಗಟ್ಟಿನಂತೆ ತೋರುತ್ತಿದ್ದ ಒಂದುಕಡೆ ಕಾಲಿ

ಡಲು ಅದು ಸರೋವರವಾಗಿದ್ದುದರಿಂದ ಇವನು ಉಟ್ಟಿದ್ದ ಬಟ್ಟೆಗಳೆಲ್ಲವೂ ನೆನೆದು ಒದ್ದೆಯಾದುವು. ಆಗ ಯುಧಿಷ್ಠಿರನ ಅಪ್ಪಣೆಯಿಂದ ಭೃತ್ಯರು ಹೊಸವಸ್ತ್ರಗಳನ್ನು ತಂದುಕೊಡಲು ಅವುಗಳನ್ನು ಧರಿಸಿ, ಮುಂದಕ್ಕೆಹೊರಟನು.

ಮುಂದಿನ ಪ್ರದೇಶವು ನಿಮ್ನೋನ್ನತಗಳು ವಿಪರೀತವಾಗಿ ಕಾಣುವಂತೆ ಸ್ಫಟಿಕಶಿಲೆಗಳಿಂದ ನಿರ್ಮಿತವಾಗಿದ್ದಿತು. ಕುರುಪತಿಯು ಭ್ರಾಂತಿಯಿಂದ ಅದು ಇಂತಹ ಸ್ಥಳವೆಂದು ತಿಳಿಯದೆ, ಹಳ್ಳಗಳಿರುವ ಕಡೆ ಹತ್ತಲಿಕ್ಕೆ ಹೋಗುವುದೂ, ತಿಟ್ಟಾದ ಪ್ರದೇಶಗಳಲ್ಲಿ ಇಳಿಯಲಿಕ್ಕೆ ಹೋಗುವುದೂ, ಗೋಡೆ ಇರುವಕಡೆ ಬಾಗಿಲು ಇರುವುದೆಂದು ಭ್ರಮದಿಂದ ತಿಳಿದು ನುಗ್ಗುವುದೂ, ಬಾಗಿಲು ಇರುವಕಡೆ ಗೋಡೆ ಇರುವುದೆಂದು ಓರೆಯಾಗಿ ಹೋಗುವುದೂ ಮುಂತಾದ ಕೃತ್ಯಗಳಿಂದ ನೋಟಕರ ಹಾಸ್ಯಕ್ಕೆಗುರಿಯಾಗುತ್ತಿದ್ದನು. ಇಂತಹಒಂದು ಪ್ರದೇಶದಲ್ಲಿ ಬಾಗಿಲು ಇರುವುದೆಂದು ನುಗ್ಗಲು, ಹಣೆಗೆ ಕಲ್ಲುಬಡಿದು, ಬುಗುಟು ಕಟ್ಟಿಕೊಂಡಿತು. ಒಂದೆರಡುಕಡೆ ಕಾಲುಜಾರಿ ಅವನು ಬಿದ್ದುಬಿಟ್ಟನು. ಲೋಕದಲ್ಲಿ ಜನರು ತಮ್ಮ ಅಜ್ಞಾನದಿಂದ ಉಂಟಾದ ಫಲಕ್ಕೆಹೆಚ್ಚಾಗಿ ಚಿಂತಿಸದೆ ಇದ್ದರೂ, ಅಂತಹ ಕೃತ್ಯವನ್ನು ನೋಡಿ ನಗುವ ಜನರ ಹಾಸ್ಯಕ್ಕಾಗಿ ಅವರಲ್ಲಿ ಮತ್ಸರಿಸುವುದು ಸಾಮಾನ್ಯ ಜನರ ಸ್ವಭಾವವಾಗಿದೆ. ದುರ್ಯೋಧನನ ಈ ಅವಸ್ಥೆಯನ್ನು ನೋಡಿ ಸಂಗಡ ಇದ್ದವರೆಲ್ಲರೂ ನಕ್ಕುದಕ್ಕಿಂತಲೂ ಭೀಮಸೇನನು ಮತ್ತು ದ್ರೌಪದಿಮುಂತಾದ ರಾಣೀವಾಸದವರು ನಕ್ಕುದು ಆ ರಾಜನಿಗೆ ಬಹಳ ಅವಮಾನವಾಗಿ ತೋರಿತು. ಹೀಗೆ ಅವಮಾನದಿಂದ ಹೊಟ್ಟೆಯಲ್ಲಿಯೇ ಚಿಂತಾಗ್ನಿಯು ಹುಟ್ಟಿ ಬೆಂದು ಉರಿಯುತ್ತಿದ್ದರೂ ಆವೇಳೆಯಲ್ಲಿ ಅದನ್ನು ಬಹಿರಂಗಪಡಿಸುವುದು ಸರಿಯಲ್ಲವೆಂದು

ಭಾವಿಸಿ ಆತನು, ತನ್ನ ಮನೋಭಿಪ್ರಾಯವನ್ನು ಹೊರಪಡಿಸದೆ, ಮೌನವಾಗಿಯೇ ಅರಮನೆಗೆ ಹೊರಟುಬಂದನು. ಆ ದುರ್ಯೋಧನನಿಗೆ ಅಂದಿನಿಂದ ಆಹಾರಪಾನೀಯಗಳಲ್ಲಿ ಸದಾ ಅಪೇಕ್ಷೆತಪ್ಪಿ ಆ ದುಃಖಕ್ಕೆ ಪ್ರತೀಕಾರವಾಗಿ ತತ್ಕಾಲದಲ್ಲಿ ಏನೂಮಾಡಲಾರದೆ, ಜ್ಞಾತಿನಿರ್ಮೂಲಕ್ಕೆ ಮಾರ್ಗವೇನೆಂಬ ಚಿಂತೆಯಿಂದಲೇ ಕೊರಗುತ್ತಿದ್ದನು. ಅವನು ಒಂದೆರಡು ದಿನಗಳು ಅಲ್ಲಿದ್ದು, ಯುಧಿಷ್ಠಿರನ ಅಪ್ಪಣೆಪಡೆದು, ಶಕುನಿಯೊಡನೆ ತನ್ನ ರಾಜಧಾನಿಗೆ ಪ್ರಯಾಣ ಮಾಡಿದನು.

ಆ ಕುರುಪತಿಯು ದಾರಿಯಲ್ಲಿ ಹೋಗುತ್ತಿದ್ದಾಗ ಇದೇ ಮನೋವ್ಯಥೆಯೇ ಬಾಧಿಸುತ್ತಿದ್ದಿತು. ಆತನು ತನ್ನ ಮನಸ್ಸಿನಲ್ಲಿ ಹೀಗೆ ಚಿಂತಿಸಿದನು.

"ಆಹಾ! ಈ ಪಾಂಡವರು ಕಾಡಿನಲ್ಲಿ ಹುಟ್ಟಿ, ಬೆಳೆದು, ಹೊಟ್ಟೆಗಿಲ್ಲದೆ ನರಳುತ್ತಿದ್ದವರು, ಎಂತಹ ಉನ್ನತ ಪದವಿಗೆ ಬಂದುಬಿಟ್ಟರು. ಅಬ್ಬಾ! ಏನು ಆಶ್ಚರ್ಯ ? ಎಂತಹ ಮಹಾಸಭೆ! ಎಷ್ಟು ಮಂದಿ ಸಾಮಂತರಾಜರು! ಎಷ್ಟುದೊಡ್ಡರಾಜ್ಯ! ಭೀಮಾರ್ಜುನರ ಹೆಸರು ಹೇಳಿದರೆ ಎಂತಹ ವೀರರೂ ಹೆದರಿ, ಓಡಿಹೋಗುತ್ತಿರುವರಲ್ಲ! ಆ ಜರಾಸಂಧನು ಸಾಮಾನ್ಯನೇ ? ಶೂರನಾದ ಶಿಶುಪಾಲನನ್ನು ನಿಗ್ರಹಿಸುವ ವೀರರುಯಾರುಂಟು ? ಅಂತಹ ವೀರರನ್ನು ಲೀಲಾಜಾಲವಾಗಿ ಸಂಹರಿಸಿ, ಇತರರಿಗೆ ಸಾಧ್ಯವಲ್ಲದ ರಾಜಸೂಯಯಾಗವನ್ನು ಮಾಡಿ, ಈ ಯುಧಿಷ್ಠಿರನು ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಪಡೆದನಲ್ಲ! ಇಂತಹ ಕೀರ್ತಿಯು ನನಗೆ ಬರುವಬಗೆ ಹೇಗೆ? ಅವರು ಯೋಚಿಸಿದ ಕಾರ್ಯಗಳೆಲ್ಲವೂ ಒಂದಲ್ಲದಿದ್ದರೆ ಮತ್ತೊಂದು ಮಾರ್ಗದಿಂದ ನೆರವೇರುತ್ತಲೇ ಬರುತ್ತಿರುವುವು.

ಮೊದಲಿನಿಂದಲೂ ವಿಜಯಲಕ್ಷ್ಮಿಯು ಆ ಪಾಂಡವರ ಕಡೆಗೇನೇ ಒಲಿಯುತ್ತಾ ಬಂದಿರುವಳು. ದ್ರುಪದರಾಯನನ್ನು ಹಿಡಿದು ಗುರುವಿಗೆ ತಂದೊಪ್ಪಿಸಿದುದು, ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಪಡೆದುದು, ರಾಜಸೂಯ ಯಾಗವನ್ನು ನೆರವೇರಿಸಿದುದು, ಖಾಂಡವವನವನ್ನು ದಹಿಸಿ, ಅಗ್ನಿದೇವನ ಅನುಗ್ರಹವನ್ನು ಪಡೆದುದು, ಇವೇ ಮುಂತಾದ ಮಹತ್ಕಾರ್ಯಗಳಿಂದ ಆ ಪಾಂಡವರ ಕೀರ್ತಿಯು ದಿನೇ ದಿನೇ ಲೋಕವಿಖ್ಯಾತವಾಗುತ್ತಲಿದೆ. ಆ ಪಾಂಡವರನ್ನು ನೀರಿನಲ್ಲಿ ಮುಳುಗಿಸಿದುದು, ಭೀಮನಿಗೆ ವಿಷದ ಕಜ್ಜಾಯಗಳನ್ನು ಇಡಿಸಿದುದು, ಅರಗಿನ ಮನೆ ಕಟ್ಟಿಸಿ ಅವರನ್ನು ದಹಿಸಬೇಕೆಂದು ಪ್ರಯತ್ನಿಸಿದುದು, ಮುಂತಾದ ನಮ್ಮ ಅಕೃತ್ಯಗಳು ಅವರಿಗೆ ಲೇಶವೂ ತೊಂದರೆಯುಂಟುಮಾಡದೆ ಹೋದುವು. ನಾವು ಮಾತ್ರ ಬಹಿರಂಗವಾದ ಅಪಕೀರ್ತಿಗೆ ಭಾಜನರಾದೆವು.''

'ದೈವಬಲವುಳ್ಳವರು ನೀರಿನಲ್ಲಿ ಬೆಳೆಯುತ್ತಿರುವ ಕಮಲಗಳಂತೆ ದಿನೇ ದಿನೇ ಬೆಳೆಯುತ್ತಾ ಅಭಿವೃದ್ಧಿಗೆ ಬರುವರು. ನಮ್ಮಂತಹ ದುರ್ದೈವಿಗಳು ಬಯಲಲ್ಲಿ ಬಿದ್ದ ಮೀನಿನಹಾಗೆ ಕ್ಷಣೇ ಕ್ಷಣೇ ಕೃಶರಾಗಿ ನಾಶವಾಗುವೆವು. ನಾನು ಇನ್ನು ಮುಂದೆ ಜ್ಞಾತಿಗಳ ಏಳಿಗೆಯನ್ನು ನೋಡಿ ಸೈರಿಸಿಕೊಂಡಿರಲಾರೆನು. ಬೆಂಕಿಯಲ್ಲಿ ಬಿದ್ದಾಗಲಿ ನೀರಿನಲ್ಲಿ ಮುಳುಗಿಯಾಗಲಿ, ವಿಷವನ್ನು ಕುಡಿದಾಗಲಿ, ಪ್ರಾಣಗಳನ್ನು ಕಳೆದುಕೊಳ್ಳುವುದೇ ಲೇಸೆಂದು ತೋರುತ್ತದೆ. ನನ್ನ ಈ ಮನೋವ್ಯಥೆಗಳನ್ನು ಇತರರ ಸಂಗಡ ಹೇಳಿಕೊಂಡರೆ ಅವು ಜನರಲ್ಲೆಲ್ಲಾ ಪ್ರಕಟವಾಗಿ ನನಗೆ ಮತ್ತಷ್ಟು ಅಪಕೀರ್ತಿಯನ್ನುಂಟುಮಾಡುವುದರಿಂದ ಈಗ ಮೌನವಾಗಿರುವುದೇ ಉತ್ತಮವಲ್ಲವೇ ? ''

ಇವುಗಳನ್ನೆಲ್ಲಾ ಬಹು ಪ್ರಯತ್ನದಿಂದ ತಡೆದುಕೊಂಡಿರೋ

ಣವೆಂದು ಯೋಚಿಸಿದರೂ, ಸಭಾಮಂಟಪದಲ್ಲಿ ನಾನು ಬಿದ್ದಾಗ ಭೀಮನೂ ದ್ರೌಪದಿಯೂ ಪರಿಹಾಸ್ಯಮಾಡಿದುದನ್ನು ಹೇಗೆ ಮರೆಯಲಿ? ಬಾಗಿಲಿಲ್ಲದಕಡೆ ಬಾಗಿಲಿರುವುದೆಂದು ಭ್ರಾಂತಿಯಿಂದ ನುಗ್ಗಿದಾಗ ನನ್ನ ಹಣೆಗೆ ಜಡಿದು ನೋವಾಯಿತು. ಆಗ ಭೀಮನು 'ಅಯ್ಯಾ! ರಾಜನೇ, ಧೃತರಾಷ್ಟ್ರರಾಯನ ನೂರುಮಂದಿ ಮಕ್ಕಳಲ್ಲಿ ನೀನೇ ಅವನಿಗೆ ಅನುರೂಪನಾದ ಪುತ್ರನು. ಆತನು ಜಾತ್ಯಂಧನಾಗಿದ್ದಾನೆ. ನೀನು ಕಣ್ಣುಗಳಿದ್ದರೂ ಈ ವಿಚಿತ್ರಸಭೆಯಲ್ಲಿ ಕುರುಡನಾಗಿದ್ದೀಯೆ' "ಎಂದು ನುಡಿದನಲ್ಲಾ! ಈ ಮಾತು ನನ್ನ ಹಣೆಗೆ ತಗಲಿದ ನೋವಿಗಿಂತ ಹೆಚ್ಚಾಗಿ ಶಲ್ಯದಂತೆ ನನ್ನ ಮನಸ್ಸಿನಲ್ಲಿ ನೆಟ್ಟುಹೋಗಿದೆ. ಮುಖ್ಯವಾಗಿ ಗಾಂಧಾರಿಯು ಹೆತ್ತ ಮಕ್ಕಳು ಬಂಧುಜನರಿಂದ ಅವಮಾನಿತರಾಗಿ ಬಾಳುವುದಕ್ಕಿಂತ ಸಾಯುವುದೇ ಲೇಸು."

ಈ ಪ್ರಕಾರವಾಗಿ ದುರ್ಯೋಧನನು ಯೋಚಿಸುತ್ತಾ, ಏನೂ ಮಾತನಾಡದೆ ಶಕುನಿಯೊಂದಿಗೆ ಹಸ್ತಿನಾಪುರಿಗೆ ಹೋಗಿ ಇತರರಿಗೆ ತಿಳಿಯದಂತೆ ಅರ್ಧರಾತ್ರಿಯ ಹೊತ್ತಿನಲ್ಲಿ ತನ್ನ ಅರಮನೆಯನ್ನು ಸೇರಿಕೊಂಡನು. ಹಗಲುಹೊತ್ತಿನಲ್ಲಿ ಪುರಪ್ರವೇಶ ಮಾಡಿದರೆ ಪಟ್ಟಣದ ಅಲಂಕಾರ, ಉತ್ಸವ, ವಾದ್ಯವಿಶೇಷಗಳು, ಸ್ವಸ್ತಿವಾಚನಗಳು, ಮುಂತಾದ ಮರ್ಯಾದೆಗಳೆಲ್ಲವೂ ನಡೆಯಬೇಕಾಗುವುದು, ಮನೋವ್ಯಥೆಯಿಂದ ಖಿನ್ನನಾಗಿರುವ ತನಗೆ ಈ ಸಂತೋಷೋತ್ಸವಗಳೊಂದೂ ಬೇಕಾಗಿರಲಿಲ್ಲವಾದುದರಿಂದ ಯಾರಿಗೂ ತಿಳಿಸದೆ ಕತ್ತಲೆಯಲ್ಲಿಯೇ ತನ್ನ ಅರಮನೆಗೆ ಹೋಗಿ ಸೇರಿಕೊಂಡನು.

~~~
~~~

# ಎಂಟನೆಯ ಅಧ್ಯಾಯ.

---:o:---

ಸೂ|| ಕೌರವನು ಪಾಂಡವರ ವೈಭವವನ್ನು ನೋಡಿ ಸೈರಿಸದೆ, ಅವರ ಐಶ್ವರ್ಯವನ್ನು ಕಸಿದುಕೊಳ್ಳಬೇಕೆಂದು ನಿಶ್ಚಯಿಸಿ, ಅವರನ್ನು ಕರಿಸಿಕೊಡಬೇಕೆಂದು ತನ್ನ ತಂದೆಗೆ ತಿಳಿಸಿದನು. ಆತನು ಮಗನ ಇಷ್ಟದಂತೆ ಪಾಂಡವರನ್ನು ಕರೆಯಿಸಿದನು.

ಇಂದ್ರಪ್ರಸ್ಥದಲ್ಲಿ ಬಹು ವಿಜೃಂಭಣೆಯಿಂದ ನಡೆದ ರಾಜಸೂಯಯಾಗದ ಮಹೋತ್ಸವವನ್ನು ನೋಡಿ, ಸೈರಣೆಯಿಲ್ಲದುದರಿಂದಲೂ, ಯುಧಿಷ್ಠಿರನ ಸಭೆಯಲ್ಲಿ ತನಗೆ ಸಂಭವಿಸಿದ ಅಪಮಾನದಿಂದಲೂ, ಖಿನ್ನನಾದ ದುರ್ಯೋಧನನು ತನ್ನ ಮನಸ್ಸಿನಲ್ಲಿ ತುಂಬ ಚಿಂತಿಸುತ್ತಿದ್ದನು. ಆತನ ಮನಸ್ಸಿಗೆ ಯಾವಬಗೆಯ ಸುಖವೂ ಬೇಕಾಗಿರಲಿಲ್ಲ. ಮನುಷ್ಯರು ಚಿಂತಾದೇವಿಗೆ ಅಧೀನರಾದರೆ ಅವರಿಗೆ ತಮ್ಮ ಇಷ್ಟಾರ್ಥವು ಪೂರಯಿಸುವ ತನಕ ಯಾವಬಗೆಯ ಸುಖಗಳಿಂದಲೂ ಮನಸ್ಸಮಾಧಾನವಾಗುವುದೇ ಇಲ್ಲ. ಕುರುಪತಿಯ ದುಃಖವಂತೂ ದುಸ್ಸಹವಾಗಿದ್ದುದರಿಂದ ಆತನು ತನಗೆ ನಿತ್ಯವೂ ನಡಿಸುತ್ತಿದ್ದ ರಾಜಮರ್ಯಾದೆಗಳೊಂದೂ ಬೇಡವೆಂದು ತಿರಸ್ಕರಿಸುತ್ತಾ ಬಂದನು. ನೃತ್ತಗೀತವಾದ್ಯಗಳ ಕಡೆಗೆ ತನ್ನ ದೃಷ್ಟಿಯೇ ಕೊಡುತ್ತಿರಲಿಲ್ಲ. ಅವನು ಯಾರ ಸಂಗಡಲೂ ಮಾತನಾಡದೆ ಅರಮನೆಯ ಚಿಂತಾಗೃಹದಲ್ಲಿ ಏಕಾಂತವಾಗಿ ಮಲಗಿಬಿಟ್ಟನು. ಆತನ ಪ್ರಿಯಭಾರ್ಯೆಯಾದ ಭಾನುಮತಿಯು ಪತಿಯನ್ನು ಮಾತನಾಡಿಸಬೇಕೆಂದು ಬಂದರೂ ಆಕೆಗೆ ಮುಖಕೊಟ್ಟು ಮಾತನಾಡದೆ ಉದಾಸೀನ ಬುದ್ಧಿಯಿಂದ ನೋಡಿದನು. ಆಕೆಯು ತನ್ನ ಪತಿಯನ್ನು ಸಮಾಧಾನ ಪಡಿಸಲಾರದೆ ಹಿಂದಿರುಗಿ ಹೋದಳು. ದುರ್ಯೋಧನ

ನಿಗೆ ಕಳವಳದಿಂದ ಆ ರಾತ್ರಿಯೆಲ್ಲಾ ನಿದ್ರೆಯೇ ಹಿಡಿಯಲಿಲ್ಲ. ಧರ್ಮರಾಯನು ಬಹು ಸಂಭ್ರಮದಿಂದ ಯಾಗಮಾಡಿದುದನ್ನೂ, ಮಹಾರಾಜರುಗಳು ಆ ರಾಯನ ದರ್ಶನಕ್ಕೆ ಸಮಯಸಿಕ್ಕದೆ ಬಾಗಿಲಲ್ಲಿ ಕಾಯುತ್ತಿದ್ದುದನ್ನೂ, ದೇಶದೇಶಗಳಿಂದ ರಾಶಿರಾಶಿಯಾಗಿ ಬಂದು ಬೀಳುತ್ತಿರುವ ಧನಕನಕಾದಿವಸ್ತುಸಮೂಹವನ್ನೂ, ಮಯನಿರ್ಮಿತವಾದ ಮಹಾಸಭೆಯ ಸೌಂದರ್ಯಾತಿಶಯವನ್ನೂ, ನೆನೆನೆನೆದು ನಿಟ್ಟುಸಿರುಬಿಡುತ್ತಿದ್ದನು. ಇದರ ಜತೆಗೆ ಸಭೆಯಲ್ಲಿ ತನ್ನ ಅಜ್ಞಾನದಿಂದ ಉಂಟಾದ ಅಪಮಾನವೂ, ಭೀಮಾದಿಗಳು ತನ್ನನ್ನು ಹಾಸ್ಯಮಾಡಿದ ವಾಕ್ಯಗಳೂ ಅವನ ಮನಸ್ಸನ್ನುಮತ್ತಷ್ಟು ನೋಯಿಸುತ್ತಿದ್ದುವು. ಅವನು ತನ್ನ ಮನಸ್ಸಿನಲ್ಲಿ "ಅಯ್ಯೋ! ಈಗ ನಾನು ಮಾಡತಕ್ಕುದೇನು? ಶತ್ರುಗಳ ವೈಭವವನ್ನು ಕಂಡು, ಪ್ರತಿಕ್ರಿಯೆಯನ್ನು ಹುಡುಕದ ಮನುಷ್ಯನು ಈ ಲೋಕದಲ್ಲಿ ಬದುಕಿದ್ದು ಫಲವೇನು? ವಿಷವನ್ನು ಕುಡಿದಾಗಲಿ, ಮಡುವಿನಲ್ಲಿ ಬಿದ್ದಾಗಲಿ, ಅಗ್ನಿಪ್ರವೇಶಮಾಡಿಯಾಗಲಿ ಪ್ರಾಣತ್ಯಾಗ ಮಾಡುವುದೇಲೇಸು" ಎಂದು ಯೋಚಿಸುತ್ತಾ ಆ ರಾತ್ರಿಯನ್ನು ಕಳೆದನು. ಅಷ್ಟರಲ್ಲಿಯೇ ತನ್ನ ವಂಶದ ಮಹಾರಾಜನೊಬ್ಬನು ಚಿಂತಾಗ್ನಿಯಿಂದ ಬೇಯುತ್ತಿರುವಾಗ ತಾನು ಸಂತೋಷದಿಂದ ಮೆರೆಯುವುದು ನಾಚಿಕೆಗೇಡೆಂದು ತಿಳಿದೋ ಏನೋ ಎಂಬಂತೆ ಚಂದ್ರನು ಪಡುವಲಲ್ಲಿ ಬಿದ್ದು ಅದೃಶ್ಯನಾದನು. ಜನರ ಅಜ್ಞಾನಾಂಧಕಾರವನ್ನು ತನ್ನ ಕಿರಣಗಳಿಂದ ತೊಲಗಿಸಿ ವಿಚಾರಜ್ಞಾನವೆಂಬ ಬೆಳಕನ್ನು ತೋರಿಸುವನೋ ಎಂಬಂತೆ ಪೂರ್ವಾದ್ರಿಯಲ್ಲಿ ಲೋಕಬಂಧುವಾದ ಸೂರ್ಯನು ಉದಯಿಸಿದನು.

ಆ ಪ್ರಾತಃಕಾಲದಲ್ಲಿ ದುರ್ಯೋಧನನು ಎದ್ದರೂ ಎಂದಿನಂತೆ

ತನ್ನ ನಿತ್ಯಕಟ್ಟಲೆಯ ಕೆಲಸಗಳ ಕಡೆಗೆ ಗಮನವನ್ನೇ ಕೊಡಲಿಲ್ಲ. "ಜ್ಞಾತಿಗಳಾದ ಪಾಂಡವರು ದಿನೇದಿನೇ ಹೆಚ್ಚುತ್ತಾ ಬರುತ್ತಿರುವ ರಲ್ಲಾ! ಇದನ್ನು ತಗ್ಗಿಸಿ, ತಾನು ಅವರಿಗಿಂತ ಹೆಚ್ಚಿನ್ನಿಸಿಕೊಳ್ಳುವಂತೆ ಮಾಡುವ ಮಾರ್ಗವು ಯಾವುದು?" ಎಂಬುದೊಂದೇ ಅವನ ಚಿಂತೆಗೆ ಧ್ಯೇಯವಾಗಿದ್ದಿತು. ಸತ್ಪುರುಷರಾದ ಪಾಂಡವರಿಗೆ ಅಹಿತವ ನ್ನಾಚರಿಸಬೇಕೆಂಬ ತನ್ನ ಅಭಿಪ್ರಾಯವನ್ನು ಯಾರಸಂಗಡ ಹೇಳಿ ಕೊಂಡರೂ ತನ್ನನ್ನು ನಿಂದಿಸುವರೇ ಹೊರತು ಸರಿಯಾದ ಪ್ರತಿ ಕ್ರಿಯೆಯ ಮಾರ್ಗವನ್ನು ಹೇಳತಕ್ಕ ಆಪ್ತರು ಯಾರೂ ಇಲ್ಲವೆಂದು ಭಾವಿಸಿದನು. ಯಾರೊಂದಿಗೂ ಮಾತನಾಡಲಿಕ್ಕೆ ಅವಕಾಶವಿಲ್ಲ ವೆಂದು ಖಂಡಿತವಾದ ಅಪ್ಪಣೆಮಾಡಿ ಮೌನದಿಂದಲೇ ಇದ್ದನು. ಈ ರಾಜನ ಸಮಾಚಾರವನ್ನು ವಿಚಾರಿಸಲಿಕ್ಕೆ ಬಂದ ಭೀಷ್ಮದ್ರೋಣಾ ದಿಗಳಿಗೆ ಸುದಾ ತನ್ನ ಕೊಠಡಿಯೊಳಕ್ಕೆ ಬರಲು ಅವಕಾಶ ಕೊಡ ಲಿಲ್ಲ. ಮಂತ್ರಿಪುರೋಹಿತಾದಿಗಳು ಮಹಾರಾಜನ ಸಂದರ್ಶನಾರ್ಥ ವಾಗಿ ಬಂದು, ಒಳಕ್ಕೆ ಬಿಡಲು ಅಪ್ಪಣೆ ಇಲ್ಲವೆಂಬ ಮಾತನ್ನು ಕೇಳಿ ಹಿಂದಿರುಗಿ ಹೊರಟು ಹೋದರು. ಪಟ್ಟಮಹಿಷಿಯಾದ ಭಾನುಮತಿಗೆ ಸುದಾ ಹತ್ತಿರಹೋಗಿ ಮಾತನಾಡಲಿಕ್ಕೆ ಅವಕಾಶ ದೊರೆಯದೆ ಇರು ವಾಗ ಮತ್ತೆ ಉಳಿದವರ ಪಾಡೇನು?

ಕುರುಪತಿಯ ಸ್ಥಿತಿಯ ಈ ವೃತ್ತಾಂತವು ವಾಯುವೇಗದಿಂದ ಪಟ್ಟಣವೆಲ್ಲಾ ಹಬ್ಬಿತು. ಇದನ್ನು ಕೇಳಿ ಜನಗಳು ಬಗೆಬಗೆಯಾಗಿ ಊಹಿಸ ತೊಡಗಿದರು. ಸಾಮಾನ್ಯವಾಗಿ ಜನರು ದೊಡ್ಡವರ ವಿಷ ಯದಲ್ಲಿ ನಿರಾಧಾರವಾದ ಒಂದು ಸುದ್ದಿಯನ್ನು ಕೇಳಿದರೂ ಅದಕ್ಕೆ ತಕ್ಕ ಅಂಗಗಳನ್ನು ಕಲ್ಪಿಸಿ ಆಕಾಶದಲ್ಲಿಯೇ ಭವ್ಯವಾದ ಅರಮನೆ ಯನ್ನು ಕಟ್ಟಿಬಿಡುವರು. ಈ ಸಂದರ್ಭದಲ್ಲಿ ಮಹಾರಾಜನು ಹಾಸಿಗೆ

ಹತ್ತಿರುವನೆಂಬ ಸುದ್ದಿಗೆ ಅವರು ಅನೇಕ ಕಾರಣಗಳನ್ನು ಕಲ್ಪಿಸಿ ಹೇಳುತ್ತಾಬಂದರು. ಅವರಲ್ಲಿ ಕೆಲವರು ನಮ್ಮ ಮಹಾರಾಜನಿಗೆ ಯಾವುದೋ ಒಂದು ಪ್ರಬಲವಾದ ವ್ಯಾಧಿಯು ತಲೆದೋರಿದೆ ಎನ್ನುತ್ತಿದ್ದರು. ಕೆಲವರು ಆತನಿಗೆ ವಿಚಿತ್ರವಾದ ಮೋಹಿಸೀಗ್ರಹವು ಹಿಡಿದಿರುವುದಂತೆ! ಎಂದರು. ಇನ್ನೂಕೆಲವರು ನಮ್ಮ ರಾಜನಿಗೆ ಶತ್ರುಗಳು ವಿಷಪ್ರಯೋಗವಮಾಡಿರುವರಂತೆ! ಎಂದು ಸುದ್ದಿ ಹುಟ್ಟಿಸಿದರು. ವಿಚಾರಪರರಾದ ಕೆಲವರು ದುರ್ಯೋಧನರಾಯನ ಚಿಂತೆಗೆ ಸರಿಯಾದ ಕಾರಣವು ಯಾವುದೂ ಇಲ್ಲವೆಂದು ನಿರ್ಧರಿಸಿ, ಆತನು ಇಂದ್ರಪ್ರಸ್ಥಕ್ಕೆ ಹೋಗಿ ಬಂದಮೇಲೆ ಈ ವ್ಯಾಧಿ ಬಂದಿರುವುದರಿಂದ ಆ ಪಾಂಡವರ ಮಹದೈಶ್ವರ್ಯವನ್ನು ನೋಡಿ ಸಹಿಸಲಾರದೆ ಮನೋವ್ಯಥೆಗೆ ಸಿಕ್ಕಿರುವನು. ಎಂದುಕೊಂಡರು.

ದುರ್ಯೋಧನನ ಸೋದರಮಾವನಾದ ಶಕುನಿಯು ಈ ವೃತ್ತಾಂತವನ್ನು ಕೇಳಿ, ಅಳಿಯನ ರೋಗಕ್ಕೆ ಪಾಂಡವರ ಏಳಿಗೆಯೇ ಕಾರಣವೆಂದು ನಿಶ್ಚಯಿಸಿದನು. ಈ ವೇಳೆಯಲ್ಲಿ ತನ್ನ ಹೊರತು ಮತ್ತಾರಿಂದಲೂ ದುರ್ಯೋಧನನ ಚಿಂತಾಪರಿಹಾರವು ಅಸಾಧ್ಯವೆಂದು ತಿಳಿದು ಕೂಡಲೇ ರಾಜನ ಅರಮನೆಗೆ ಬಂದನು. ಪಾಂಡವರಿಗೆ ಕೆಡುಕು ಮಾಡುವುದರಲ್ಲಿ ಮೊದಲಿನಿಂದಲೂ ಸಹಾಯಕನಾಗಿದ್ದ ಶಕುನಿಯು ಬಂದುದನ್ನು ದ್ವಾರಪಾಲಕನಿಂದ ಕೇಳಿ, ದುರ್ಯೋಧನನು ಅವನನ್ನುಮಾತ್ರ ಒಳಕ್ಕೆ ಬರಮಾಡಿಕೊಂಡನು. ಆತನು ಬಂದು ದುರ್ಯೋಧನನ ಸ್ಥಿತಿಯನ್ನು ನೋಡಿ, ಬಹಳವಾಗಿ ಗಾಬರಿಗೊಂಡು ಇಂತೆಂದನು.

ಶಕು.—ಎಲೈರಾಯನೇ, ಇದೇನು! ಅಕಸ್ಮಾತ್ತಾಗಿ ಹೀಗೆ ಮಲಗಿಬಿಟ್ಟೆಯಲ್ಲಾ? ನಿನಗೆ ಸಂಭವಿಸಿರುವ ವ್ಯಾಧಿಯಾವುದು?

ಶಾರೀರಕವೇ, ಅಥವಾ ಮನಸ್ಸಂಬಂಧವಾದುದೇ ? ನನ್ನಲ್ಲಿ ಮರೆ ಮಾಜದೆ ಹೇಳು.

ದುರ್ಯೋ.—(ನಿಟ್ಟುಸಿರು ಬಿಡುತ್ತಾ, ಬಹು ಕಷ್ಟದಿಂದ) ಮಾವಯ್ಯಾ, ನನಗೆ ಮಾತನಾಡಲಿಕ್ಕೂ ಶಕ್ತಿಯಿಲ್ಲ. ಶರೀರ ಸಂಬಂಧವಾದ ವ್ಯಾಧಿಯು ನನಗೆ ಬರಲಿಕ್ಕೆ ಯಾವ ಕಾರಣವೂ ಇಲ್ಲ. ನನಗೆ ಹಿಡಿದಿರುವ ಮನೋವ್ಯಥೆಯು ಅಪರಿಹಾರ್ಯವಾದುದರಿಂದ ಯಾರಸಂಗಡಲೂ ಹೇಳಲಾರದೆ ನನ್ನಲ್ಲಿ ನಾನೇ ನೆನೆನೆನೆದು ಕೊರಗುತ್ತಿದ್ದೇನೆ. ನನಗೆ ಮತ್ತಾವ ರೋಗವೂ ಇಲ್ಲ.

ಶಕುನಿ.—ರಾಜನೇ, ಪರಿಹಾರಮಾರ್ಗವಿಲ್ಲದ ರೋಗವು ಒಂದೂ ಇರುವುದಿಲ್ಲ. ಮನುಷ್ಯರು ಮನೋವ್ಯಥೆಗೆ ಗುರಿಯಾದರೆ ಬಹುಬೇಗ ಕುಗ್ಗಿ ಹೋಗುವುದು ಸಹಜವು. ನಿನಗೆ ಅಂತಹ ಚಿಂತೆಗೆ ಕಾರಣವೇ ತೋರಲಿಲ್ಲವಲ್ಲ ! ಐಶ್ವರ್ಯದಲ್ಲಿಯಾಗಲಿ, ರಾಜ್ಯದಲ್ಲಿಯಾಗಲಿ, ಸಹೋದರರಲ್ಲಿಯಾಗಲಿ, ಸಂಸಾರದಲ್ಲಿಯಾಗಲಿ ಸಮೃದ್ಧಿ ಇರುವಾಗ ಮನೋವ್ಯಥೆ ಏತಕ್ಕಪ್ಪಾ, ಹೇಳು.

ದುರ್ಯೋ.—ಮಾವಾ, ನೀನು ಹೇಳಿದಂತೆ ನನಗೆ ಎಲ್ಲಾ ಅನುಕೂಲತೆಗಳಿರುವುದು ನಿಜವೇ, ಆದರೂ ಆ ಇಂದ್ರಪ್ರಸ್ಥಕ್ಕೆ ಹೋಗಿ ಯುಧಿಷ್ಠಿರನ ಮಹದೈಶ್ವರ್ಯವನ್ನು ನೋಡಿದ ಮೇಲೆ ಈ ನಮ್ಮ ಸ್ಥಿತಿಯು ಸೂರ್ಯನ ತೇಜಸ್ಸಿನಮುಂದೆ ದೀವಟಿಗೆಯ ಬೆಳಕಿನಂತೆ ಬಹು ತುಚ್ಛವಾದುದೆಂದು ತೋರಿತು. ಇದಲ್ಲದೆ ನಿನ್ನ ಜತೆಯಲ್ಲಿ ಇಂದ್ರಪ್ರಸ್ಥದಲ್ಲಿ ಆ ಪಾಂಡವರ ಸಭಾಮಂಟಪವನ್ನು ನೋಡುತ್ತಿದ್ದಾಗ ಆ ನೀಚನಾದ ಭೀಮನು ಆಡಿದ ಮಾತುಗಳನ್ನು ನೀನೂ ಕೇಳಿದೆಯಷ್ಟೆ ? ಅಂತಹ ಮಾತನ್ನು ಕೇಳಿ ಸಹಿಸಿಕೊಂಡಿರಬಹುದೆ? ನಾನು ಆಗಲೇ ಪ್ರಾಣತ್ಯಾಗಮಾಡಿಬಿಡಬೇಕೆಂದು ಸಂಕಲ್ಪಿಸಿದೆನು.

ಆದರೂ ನನ್ನ ಮನಸ್ಸಿನ ಅಭಿಪ್ರಾಯವನ್ನು ನಿನ್ನಂತಹ ಆಪ್ತನ ಸಂಗಡ ತಿಳಿಸಿ ದೇಹವನ್ನು ಬಿಡಬೇಕೆಂದು ಇದುವರೆಗೂ ತಡೆದಿದ್ದೇನೆ. ನನ್ನ ಅಂತರಂಗವನ್ನು ಹೇಳಿಬಿಟ್ಟೆನು. ಇನ್ನು ನನಗೆ ಮರಣಕ್ಕೆ ಅಪ್ಪಣೆಕೊಡು.

ಶಕು.—ಅಯ್ಯೋ ಹುಚ್ಚಾ! ಇಷ್ಟೇನೇ? ಇದಕ್ಕಾಗಿ ಪ್ರಾಣತ್ಯಾಗ ಮಾಡುವೆಯಾ? ಬಹುಚೆನ್ನಾಯಿತು! ಮಹಾರಾಜನಾದ ನಿನಗೂ ವಿಚಾರಶಕ್ತಿಯು ಶೂನ್ಯವಾಗಿ ಹೋಯಿತೆ? ಆ ಪಾಂಡವರ ಐಶ್ವರ್ಯವು ಅಷ್ಟು ಹೆಚ್ಚಿನದೆ? ಅದೂ ಕೂಡ ನೀವು ಕೊಟ್ಟುದೇ ಅಲ್ಲವೇ? ಅವರು ತಮ್ಮ ಶಕ್ತಿಸಾಹಸಗಳಿಂದ ಅದನ್ನು ವೃದ್ಧಿಪಡಿಸಿಕೊಂಡರು. ನೀನೂ ನಿನ್ನ ಐಶ್ವರ್ಯವನ್ನು ಬೆಳೆಯಿಸಿಕೊಳ್ಳುವುದಕ್ಕೆ ಬೇಕಾದ ಅನುಕೂಲತೆಗಳಿಲ್ಲವೆ? ಕೋಪಿಷ್ಠನಾದ ಭೀಮನು ಆಡಿದ ಮಾತನ್ನೂ ಕೇಳಿದೆನು. ಅವನಿಗೆ ತಕ್ಕ ಶಿಕ್ಷೆ ಮಾಡಿ ಮುಯ್ಯಿಗೆ ಮುಯ್ಯಿ ತೀರಿಸೋಣ. ಚಿಂತಿಸಬೇಡ, ಏಳು.

ದುರ್ಯೋ.—ಮಾವಯ್ಯಾ, ಇಂತಹ ಸಮಾಧಾನೋಕ್ತಿಗಳಿಂದ ನನ್ನ ಚಿಂತಾಜ್ವರವು ಪರಿಹಾರವಾಗುವಂತೆ ಇಲ್ಲ. ಶತ್ರುಗಳ ವೃದ್ಧಿಯನ್ನು ನೋಡಿ ಸಹಿಸಿಕೊಂಡಿರುವ ನರಾಧಮನು ಈ ಲೋಕದಲ್ಲಿ ತುಂಬ ಹೀನನೆನಿಸುವನು. ತಿರ್ಯಗ್ಜಂತುಗಳು ಸುದಾ ತಮ್ಮ ಜಾತಿಯ ಪ್ರಾಣಿಗಳು ತಮಗಿಂತ ಏಳಿಗೆಯಾಗಿದ್ದರೆ ಸೈರಿಸದೆ, ಅವುಗಳೊಂದಿಗೆ ಹೋರಾಡಿ ಅವುಗಳನ್ನು ಕೊಲ್ಲುವುವು. ಅಥವಾ ತಾವಾದರೂ ಪ್ರಾಣಗಳನ್ನು ಕಳೆದುಕೊಳ್ಳುವುವು. ಮೊದಲಿನಿಂದಲೂ ದಾಯಾದರಾದ ಆ ಪಾಂಡವರನ್ನು ನಾಶಮಾಡಿಬಿಡಬೇಕೆಂದು ನಾವು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾಗಿಹೋಗಿ ಅವರು ಅಭಿವೃದ್ಧಿಪಡೆಯುತ್ತಲೇ ಬಂದರು. ನಾವು ದಿನೇದಿನೇ ಕ್ಷಯಿ

ಸುತ್ತಾ ಬಂದೆವು. ಆ ಪಾಂಡವರಿಗಿಂತ ಒಂದು ಕೈ ಮೇಲಾಗಿದ್ದರೆ ನಮಗೆ ಸಂತೋಷವೇ ಹೊರತು ಇದೇ ಸ್ಥಿತಿಯಲ್ಲಿದ್ದರೆ ಹಾವಿನ ಹೆಡೆಯ ನೆರಳಲ್ಲಿ ಸೇರಿ ಬದುಕುವೆನೆಂಬ ಕಪ್ಪೆಯಗತಿ ನಮಗೆ ಬರುವುದೆಂಬ ಚಿಂತೆ ಹಿಡಿದುಬಿಟ್ಟಿದೆ.

ಶಕು.—ರಾಜನೇ, ನಾನು ಈಗ ಸಮಾಧಾನದಮಾತು ಹೇಳ ಹೋದರೆ ನಿನಗೆ ರುಚಿಸಲಾರದು. ಸನ್ನಿಪಾತಜ್ವರದಿಂದ ಪೀಡಿತನಾದವನಿಗೆ ಸಿಹಿಯಾದ ದ್ರಾಕ್ಷೆಯಹಣ್ಣು ಕೂಡ ಕಹಿಯಾಗಿ ತೋರುವುದಲ್ಲವೆ? ಅದು ಇರಲಿ, ಈಗ ಏನುಮಾಡಬೇಕೆಂಬುದು ನಿನ್ನ ಅಭಿಪ್ರಾಯ?

ದುರ್ಯೋ.—ಮಾವಯ್ಯಾ ಕೇಳು, ನಮ್ಮ ಕಡೆ ಹನ್ನೊಂದು ಅಕ್ಷೌಹಿಣಿಯ ಸೈನ್ಯವಿದೆ. ಕರ್ಣ ಭೀಷ್ಮದ್ರೋಣಾದಿ ವೀರರೂ ನಮ್ಮ ಕಡೆ ಇರುವರು. ಆ ಪಾಂಡವರಮೇಲೆ ಯುದ್ಧಮಾಡಿ ಅವರನ್ನು ನಿರ್ನಾಮಗೊಳಿಸಿ ಅವರ ಸಕಲೈಶ್ವರ್ಯವನ್ನೂ ಪಡೆಯುವುದೊಂದು, ಅಥವಾ ಯುದ್ಧದಲ್ಲಿ ಮಡಿದು ವೀರಸ್ವರ್ಗದಲ್ಲಿ ಅವರಿಗಿಂತ ಹೆಚ್ಚಾದ ಸುಖವನ್ನು ಅನುಭವಿಸುವುದೊಂದು, ಇವೇ ನನಗೆ ತೋರಿದ ಉಪಾಯಗಳು.

ಶಕುನಿ.—ತಮ್ಮಾ ಕೇಳು, ಪೂರ್ವಾರ್ಜಿತ ಫಲದಿಂದ ಮನುಷ್ಯರಿಗೆ ಲಾಭಾಲಾಭಗಳು ಪ್ರಾಪ್ತವಾಗುತ್ತಿರುವುವು. ದೈವವು ಅದೃಷ್ಟವಾದುದರಿಂದ ನಮ್ಮ ಪ್ರಯತ್ನಗಳನ್ನು ಮಾಡಿ, ದೈವಸಹಾಯವನ್ನು ಕೋರುವುದೇ ಧೀರರ ಲಕ್ಷಣವು. ಈ ಸಂದರ್ಭದಲ್ಲಿ ನಿನ್ನ ಯೋಚನೆಯು ಹಿತವಾಗಿ ತೋರುವುದಿಲ್ಲ. ಮೊನ್ನೆತಾನೇ ಆ ಪಾಂಡವರು ದಿಗ್ವಿಜಯಮಾಡಿ, ಸಮಸ್ತ ಭೂಮಂಡಲದ ರಾಜರನ್ನೂ ಸ್ವಾಧೀನಪಡಿಸಿಕೊಂಡಿರುವುದರಿಂದ ನೀನು ಯುದ್ಧಕ್ಕೆ ತೊಡ

ಗಿದರೆ ಪೃಥ್ವಿಯ ಸಕಲರಾಜರೂ ಅವರಕಡೆ ಸೇರುವುದರಿಂದ ನಮ್ಮ ಬಲವು ಅವರೊಂದಿಗೆ ಹೋರಲು ತಡೆಯಲಾರದು. ಪರಾಕ್ರಮಶಾಲಿಗಳಾದ ಭೀಮಾರ್ಜುನರ ಎದುರಿಗೆ ನಿಲ್ಲಲು ದೇವತೆಗಳುಸುದಾ ಶಕ್ತರಲ್ಲವೆಂಬಲ್ಲಿ ನಮ್ಮ ಪಾಡೇನು? ಶಿಶುಪಾಲ ಜರಾಸಂಧರೇನಾದರೆಂಬುದನ್ನು ನೀನೇ ಪ್ರತ್ಯಕ್ಷದಲ್ಲಿ ನೋಡಿರುವೆಯಷ್ಟೆ? ಭೀಷ್ಮದ್ರೋಣರು ನಮ್ಮ ಕಡೆ ಇರುವರೆಂದು ನೀನು ಭಾವಿಸಿದ್ದೀಯೆ. ಅವರಿಗೆ ಪಾಂಡವರಲ್ಲಿ ಪಕ್ಷಪಾತವಿರುವಂತೆ ನಿನ್ನಲ್ಲಿ ಇಲ್ಲವೆಂದು ನೀನೇ ಆಗಾಗ್ಗೆ ಹೇಳುತ್ತಿರುವೆ. ಅಂತಹ ಪ್ರಬಲರಸಂಗಡ ಯುದ್ಧಮಾಡಿ, ಕಾರ್ಯವನ್ನು ಸಾಧಿಸಿಕೊಳ್ಳುವುದು ಅಸಾಧ್ಯವೆಂದು ತಿಳಿ. ಆದುದರಿಂದ ಈ ಮಾರ್ಗವು ಈಗ ಚೆನ್ನಾಗಿ ಕಾಣಲಿಲ್ಲ.

ದುರ್ಯೋ.—ಹಾಗಾದರೆ, ನನ್ನ ಇಷ್ಟವು ನೆರವೇರುವುದು ಹೇಗೆ? ಹೀಗೆ ನೀನು ಅಧೈರ್ಯಗೊಳಿಸಿದರೆ ಇನ್ನು ಮರಣವೇ ನನಗೆ ಶರಣವೆಂದು ತಿಳಿಯುತ್ತೇನೆ.

ಶಕು.—ರಾಜನೇ, ಸ್ವಲ್ಪ ಸೈರಣೆತಂದುಕೋ. ನನ್ನಮಾತಿನಲ್ಲಿ ವಿಶ್ವಾಸವಿಡು. ಆ ಪಾಂಡವರ ಐಶ್ವರ್ಯವನ್ನು ಕಸಿದುಕೊಂಡು ಅವರಿಗಿಂತ ಪ್ರಬಲನೆನಿಸಿಕೊಳ್ಳಬೇಕೆಂಬುದೇ ನಿನ್ನ ಇಷ್ಟವಷ್ಟೆ? ರಕ್ತಪಾತವಿಲ್ಲದೆ, ಜನಸಮ್ಮತವಾಗಿ ನಮ್ಮ ಕಾರ್ಯಸಾಧನೆ ಮಾಡಿಕೊಂಡರೆ ಸಾಕು. ಇದಕ್ಕೆ ತಕ್ಕಮಾರ್ಗವನ್ನು ನಾನು ಬಲ್ಲೆನು. ಆ ಪಾಂಡವರ ಜುಟ್ಟು ಹಿಡಿದು ನಿನ್ನ ಕೈಗೆ ಕೊಡುವೆನು. ಸಾರ್ವಭೌಮನಾದ ಶ್ರೀರಾಮನನ್ನುಸುದಾ ಮಾಯೆಯ ಜಿಂಕೆಯಾಗಿ ಮಾರೀಚನು ಬಹುದೂರಕ್ಕೆ ಸೆಳೆದೊಯ್ಯಲಿಲ್ಲವೆ? ಇಂತಹ ಸಂದರ್ಭದಲ್ಲಿ ಸರಳಮಾರ್ಗವು ಕಾರ್ಯಕಾರಿಯಲ್ಲ. ಕಾಪಟ್ಯದಿಂದ ನಮ್ಮ ಕಾರ್ಯವನ್ನು ಕಾಣಬೇಕಾಗಿದೆ.

ದುರ್ಯೋ.—ಮಾವಾ, ನಾವಿನ್ನೂ ಹುಡುಗರು. ನಮಗೆ ದುಡುಕುಹೆಚ್ಚು. ಚಿಂತೆಯಲ್ಲಿ ಸಿಕ್ಕಿರುವಾಗ ತಕ್ಕಯೋಚನೆಯೂ ಹಾಯುವುದಿಲ್ಲ. ನೀನು ಹೇಳುವ ಮಾರ್ಗವನ್ನು ಕೇಳಿ, ಯುಕ್ತವಾಗಿ ತೋರಿದರೆ ತಕ್ಕಪ್ರಯತ್ನಮಾಡೋಣ.

ಶಕು.—ಪಾಂಡವರು ಬಲಶಾಲಿಗಳೆಂಬುದನ್ನೂ, ಅವರಿಗೆ ಶ್ರೀಕೃಷ್ಣನ ಸಹಾಯವು ಪೂರ್ಣವಾಗಿರುವುದೆಂಬುದನ್ನೂ ನೀನೇ ಬಲ್ಲೆ. ಆ ಪಾಂಡವರನ್ನು ಏನಾದರೂ ಒಂದು ನೆವದಿಂದ ಇಲ್ಲಿಗೆ ಕರೆಯಿಸು. ಯುಧಿಷ್ಠಿರನಿಗೆ ಜೂಜಾಡುವುದರಲ್ಲಿ ಬಹು ಇಷ್ಟ. ಆದರೂ ನ್ಯಾಯಮಾರ್ಗದಿಂದ ಆಡಬಲ್ಲನೇ ಹೊರತು ಕಪಟಸಂಧಾನಗಳು ಅವನಿಗೆ ತಿಳಿಯವು. ನಾನು ಅಕ್ಷವಿದ್ಯಾಪಾರಂಗತನಾಗಿದ್ದೇನೆ. ಮೋಸದಿಂದ ಆಟದಲ್ಲಿ ಅವನನ್ನು ಸೋಲಿಸಿ, ಅವನ ಸಕಲೈಶ್ವರ್ಯವನ್ನೂ ಗೆದ್ದು ನಿನಗೆ ಕೊಡುವೆನು. ಧೈರ್ಯದಿಂದಿರು. ಪಾಂಡವರನ್ನು ಇಲ್ಲಿಗೆ ಕರೆಯಿಸುವಯೋಚನೆಮಾಡು.

ದುರ್ಯೋ.—ಈ ಯೋಚನೆ ತಕ್ಕುದೆಂದು ತೋರುತ್ತದೆ. ನೀನು ನನ್ನ ಹಿತಚಿಂತಕನಾಗಿಯೂ ಆಪ್ತನಾಗಿಯೂ ಇರುವುದರಿಂದ ನಿನ್ನ ಅನುಮತಿಯಂತೆ ನಡೆಯಲು ಸಿದ್ಧನಾಗಿದ್ದೇನೆ. ಅವರನ್ನಿಲ್ಲಿಗೆ ಕರೆಯಿಸುವ ವಿಷಯದಲ್ಲಿ ನಮ್ಮ ತಂದೆಯವರ ಬಳಿಗೆ ಹೋಗಿ ನನ್ನ ಈ ದುರವಸ್ಥೆಯನ್ನು ತಿಳಿಸಿ ನಿನ್ನಕಾರ್ಯಕ್ಕೆ ತಕ್ಕಪ್ರಯತ್ನಮಾಡು.

ಶಕುನಿಯು ರಾಜನಿಗೆ ಅಭಯವಿತ್ತು ಧೃತರಾಷ್ಟ್ರನ ಅರಮನೆಗೆ ಹೋದನು. ಪ್ರಜ್ಞಾಚಕ್ಷುವಾದ ಆ ರಾಯನು ಶಕುನಿಯನ್ನು ಆದರಪೂರ್ವಕ ಸನ್ಮಾನಿಸಲು ಆತನು ಉಚಿತವಾದ ಪೀಠದಲ್ಲಿ ಕುಳಿತು ಧೃತರಾಷ್ಟ್ರನನ್ನು ಕುರಿತು ಇಂತೆಂದನು.

ಶಕುನಿ.---ಭಾವಾ, ನಿಮ್ಮ ಸೀಮಂತಪುತ್ರನಾದ ದುರ್ಯೋಧನನು ಚಿಂತೆಯಲ್ಲಿ ಮುಳುಗಿ ಬಿದ್ದಿದ್ದಾನೆ. ಬೇಗ ಅವನನ್ನು ಕರೆಯಿಸಿ ತಕ್ಕ ಪ್ರತಿಕ್ರಿಯೆ ಮಾಡದಿದ್ದರೆ ನೀನು ನಿನ್ನ ಮಗನನ್ನು ಕಳೆದುಕೊಳ್ಳಬೇಕಾಗುವುದು.

ಧೃತ.—(ಗಾಬರಿಯಾಗಿ) ಅಯ್ಯೋ, ಶಕುನಿ! ಏನಿದು! ಹೀಗೆ ಹೇಳುವೆಯಲ್ಲ! ನಮ್ಮ ದುರ್ಯೋಧನನಿಗೆ ಮೈಯಲ್ಲಿ ಸ್ವಲ್ಪ ಆಲಸ್ಯವೆಂದು ಕೇಳಿದ್ದೆನು. ಅಂತಹ ಪ್ರಬಲವಾದ ಚಿಂತೆಗೆ ಕಾರಣವೇನು ಇರಬಹುದು?

ಶಕುನಿ.---ಕಾರಣವೇನೋ ಆತನಿಂದಲೇ ತಿಳಿಯತಕ್ಕದು. ಆ ರಾಜಕುಮಾರನು ಇಂದ್ರಪ್ರಸ್ಥದಿಂದ ನಿನ್ನೆಯೇ ಬಂದನು. ಇಲ್ಲಿಗೆ ಸೇರಿದಮೊದಲು ಆತನ ಮೈಯ್ಯಸ್ಥಿತಿ ನೆಟ್ಟಗಿಲ್ಲವಂತೆ! ಕೇವಲ ದುರ್ಬಲನಾಗಿದ್ದಾನೆ.

ಧೃತರಾಷ್ಟ್ರನು ಈಮಾತನ್ನು ಕೇಳಿ ಮನದಲ್ಲಿ ನೊಂದು ಕೂಡಲೇ ತನ್ನ ಹಿರಿಯ ಮಗನನ್ನು ಕರೆದುತರಬೇಕೆಂದು ಒಬ್ಬ ದೂತನನ್ನು ಕಳುಹಿದನು. ಅವನು ತತ್ಕ್ಷಣವೇ ಅರಮನೆಗೆ ಹೋಗಿ ರಾಯನ ಅಪ್ಪಣೆಯನ್ನು ತಿಳಿಸಿದನು. ದುರ್ಯೋಧನನು ಜಾಗ್ರತೆಯಿಂದ ತಂದೆಯ ಅರಮನೆಗೆ ಬಂದು ವಂದಿಸಿ, ಆತನ ಅಪ್ಪಣೆಯಿಂದ ತನಗೆ ಉಚಿತವಾದ ಸಿಂಹಾಸನದಮೇಲೆ ಕುಳಿತುಕೊಂಡನು.

ಧೃತ.—ದುರ್ಯೋಧನಾ, ನೀನು ತುಂಬ ಚಿಂತೆಯಿಂದ ನರಳುತ್ತಿರುವೆಯೆಂದು ಈಗ ಶಕುನಿಯ ಮೂಲಕ ತಿಳಿಯಿತು. ನಿನ್ನ ಮನೋವ್ಯಥೆಗೆ ಕಾರಣವೇನಪ್ಪಾ! ನಿನಗೆ ಐಶ್ವರ್ಯದಲ್ಲಿ ಕೊರತೆಯೇ? ಸಹೋದರರಪ್ರೀತಿ ಕಡಮೆಯೇ? ರಾಜ್ಯವುಸಾಲದೆ? ಹಿತಚಿಂತಕರಿಲ್ಲವೆ? ರಾಣಿವಾಸದ ಸೌಖ್ಯದಲ್ಲಿ ಏನಾದರೂ ನ್ಯೂನ

ತೆಯೇ? ನಿನಗೆ ರಾಜಕಾರ್ಯಗಳಲ್ಲಿಯೂ ಸ್ವಂತ ವ್ಯವಹಾರಗಳಲ್ಲಿಯೂ ಜುಗುಪ್ಸೆ ಹುಟ್ಟಿರುವುದೆಂದು ಕೇಳುತ್ತೇನೆ. ಈಶ್ವರನು ಸರ್ವ ಸಮೃದ್ಧಿಯನ್ನು ಅನುಗ್ರಹಿಸಿರುವಾಗ ಅದನ್ನು ಸುಖವಾಗಿ ಅನುಭವಿಸಿಕೊಂಡು, ಶಾಂತಚಿತ್ತನಾಗಿ, ಗುರು ಹಿರಿಯರಸೇವೆ ಮಾಡಿಕೊಂಡು, ಭಗವದ್ಧ್ಯಾನತತ್ಪರನಾಗಿರಬಾರದೆ? ಚಿಂತೆಯು ಜೀವಸಹಿತನಾಗಿರುವವನನ್ನೇ ಕೊಂದುಬಿಡುವುದೆಂದು ಕೇಳಿಲ್ಲವೆ? ನೀನು ಸಮಾಧಾನದಿಂದಿದ್ದರೆ ನನಗೆ ಸಂತೋಷ.

ದುರ್ಯೋ.—(ಕಣ್ಣಿನಲ್ಲಿ ನೀರು ಹಾಕುತ್ತಾ) ಅಯ್ಯನವರೇ, ಇದೇಸ್ಥಿತಿಯಲ್ಲಿದ್ದರೆ ನನಗೆ ಸಮಾಧಾನವುಂಟಾಗುವುದಿಲ್ಲ. ನೀವು ಅಪ್ಪಣೆಕೊಡಿಸಿದ ಹಿತೋಪದೇಶಗಳು ಈ ವೇಳೆಯಲ್ಲಿ ನನ್ನ ಮನಸ್ಸಿಗೆ ಹಿಡಿಯುವುದಿಲ್ಲ. ವೃದ್ಧರಾದ ನೀವು ವಿರಕ್ತರಾಗಿ ಕಾಮಕ್ರೋಧಾದಿಗಳನ್ನು ಪರಿತ್ಯಜಿಸಿ, ಪ್ರಾಪಂಚಿಕ ಸುಖಗಳಿಗೆ ವಿಮುಖರಾಗಿರುವುದರಿಂದ ಅಂತಹ ಸಮಾಧಾನ ತಂದುಕೊಳ್ಳುವುದು ನಿಮಗೆ ಸಾಧ್ಯವಾಗಿರಬಹುದು. ನೀವು ರಾಜರ್ಷಿಗಳಾಗಿ ಸಾತ್ವಿಕಸ್ವಭಾವವುಳ್ಳವರಾಗಿರುವುದರಿಂದ ನಿಮ್ಮಂತೆಯೇ ಎಲ್ಲರನ್ನೂ ತಿಳಿದಿರುವಿರಿ. ನಾವಾದರೋ ಇನ್ನೂ ಹುಡುಗರು, ನಮ್ಮಹೊಟ್ಟೆಯ ದುಃಖವನ್ನು ನಾವೇ ಬಲ್ಲೆವು. ಅದನ್ನು ಸೈರಿಸುವುದು ನಮ್ಮಿಂದ ಸಾಧ್ಯವಲ್ಲದೆ ಇದೆ. ನೀವು ನನ್ನನ್ನು ಇಲ್ಲಿಗೆ ಕರಿಸಿದಾಗ ನನ್ನ ಮನೋರಥವು ಪೂರ್ಣವಾಗುವುದೆಂಬ ಭರವಸೆಯಿತ್ತು. ನಿಮ್ಮಮಾತಿನ ಧೋರಣೆಯಿಂದ ಅಂತಹ ಪ್ರತ್ಯಾಶೆಗೆ ಅವಕಾಶವಿಲ್ಲವೆಂದು ತೋರುತ್ತದೆ. ನನ್ನ ದುಃಖವು ನನಗೇ ಇರಲಿ. ನಾನೇ ಇದರ ಫಲವನ್ನು ಅನುಭವಿಸುವೆನು. ಯಾರಲ್ಲಿ ಹೇಳಿದರ ಏನುಫಲ?

ಧೃತ.—ದುರ್ಯೋಧನಾ, ಏಕೆ ಹೀಗೆ ಹೇಳುತ್ತೀಯೆ!

ನಿನ್ನಲ್ಲಿ ನನಗೆ ಅಭಿಮಾನವಿಲ್ಲವೆ? ಎಲ್ಲರೂ ಸುಖವಾಗಿರಬೇಕೆಂಬುದೇ ನನ್ನ ಅಭಿಲಾಷೆ. ನಿನ್ನ ಮನೋವ್ಯಥೆಗೆ ಕಾರಣವನ್ನೇ ಹೇಳದೆ ನನ್ನನ್ನೇಕೆ ನಿಷ್ಠುರಮಾಡುವೆ? ನಿನ್ನ ಅಂತರಂಗವನ್ನು ಮರೆಮಾಜದೆ ಹೇಳಪ್ಪಾ.

ದುರ್ಯೋ.—ಆರ್ಯನೇ ಕೇಳು, ಸಂಕ್ಷೇಪವಾಗಿ ಹೇಳುತ್ತೇನೆ. ಪಾಂಡವರು ಮಾಡಿದ ರಾಜಸೂಯಯಾಗವೇ ನನ್ನ ಚಿಂತೆಗೆ ಮೂಲ ಕಾರಣವಾಯಿತು. ಸಾರ್ವಭೌಮ ಪದವಿಯಲ್ಲಿರುವ ನಿಮಗೆ ಆಗಲಿ, ನಿಮ್ಮ ಮಕ್ಕಳಾದ ನಮಗೇ ಆಗಲಿ ಅಂತಹ ಐಶ್ವರ್ಯವುಂಟಾಗುವುದು ಸ್ವಪ್ನಪ್ರಾಯವೆಂದು ತಿಳಿಯುತ್ತೇನೆ. ಈ ಲೋಕದಲ್ಲಿ ಅಂತಹ ಸಂಪತ್ತು ಮತ್ತಾರಲ್ಲಿಯೂ ಇಲ್ಲವೆಂದು ಹೇಳಬಹುದು. ಆಹಾ! ಎಷ್ಟರ ಐಶ್ವರ್ಯ! ಎಷ್ಟು ದೊಡ್ಡ ರಾಜ್ಯ? ಮಹಾಮಹಾ ದೊರೆಗಳೂ, ಶ್ರೇಷ್ಠರಾದ ಮುನಿವರ್ಯರೂ, ದೊಡ್ಡದೊಡ್ಡ ಮಾಂಡಲಿಕರೂ, ಆತನ ಆಜ್ಞೆಯನ್ನು ಎದುರುನೋಡುತ್ತಿರುವರು. ಯದುವಲ್ಲಭನಾದ ಶ್ರೀಕೃಷ್ಣನು ಅವರು ಹೇಳಿದಂತೆ ನಡೆಯುತ್ತಾ ಅವರಿಗೆ ಸಹಾಯಕನಾಗಿರುವನು. ಜರಾಸಂಧನನ್ನು ಭೀಮನು ಕೊಂದು, ಅವನು ಸೆರೆಯಲ್ಲಿ ಇಟ್ಟಿದ್ದ ರಾಜರನ್ನು ಬಿಡಿಸಿದಮೇಲೆ ಅವರೆಲ್ಲರೂ ಆ ಯುಧಿಷ್ಠಿರನ ಅಧೀನರಾದರು. ಆ ರಾಯನ ಪ್ರಭಾವವು ಮತ್ತಷ್ಟು ಹೆಚ್ಚಿತು. ಆ ಇಂದ್ರಪ್ರಸ್ಥದಲ್ಲಿಯೇ ಹಲವು ತಿಂಗಳು ವಾಸವಾಗಿದ್ದು ಪ್ರತ್ಯಕ್ಷದಲ್ಲಿ ಪ್ರತಿ ಒಂದನ್ನೂ ನೋಡುತ್ತಿದ್ದ ನಾನು ಶತ್ರು ಸಮೃದ್ಧಿಯನ್ನು ನೋಡಿ ಸೈರಿಸಿಕೊಂಡು ಜೀವದಿಂದಿರಬಹುದೆ? ಹಾ! ಹಾ!

ಧೃತ.—ಮಗುವೇ, ಏಕೆ ಹೀಗೆ ಹೇಳುತ್ತಿರುವೆ? ಆ ಪಾಂಡವರು ನಮಗೆ ಅನ್ಯರೆ? ಅವರು ನನ್ನ ಸಾಕ್ಷಾತ್ಸಹೋದರನ ಮಕ್ಕಳೇ

ಅಲ್ಲವೆ? ಅವರ ಸಂತೋಷವೇ ನಮ್ಮ ಸಂತೋಷವೆಂದು ತಿಳಿಯು ಲಾರದೆ ಹೋದೆಯಾ? ಪಾಪ! ಧರ್ಮಾತ್ಮರಾದ ಆ ಪಾಂಡವರು ಯಾರಮನಸ್ಸನ್ನೂ ನೋಯಿಸತಕ್ಕವರೇ ಅಲ್ಲ. ಅವರು ಸುಖವಾಗಿದ್ದರೆ ನಿನಗೇನು ನಷ್ಟ!

ದುರ್ಯೋ.—ಅಪ್ಪಾ! ನಾನು ಮೊದಲೇ ಹೇಳಲಿಲ್ಲವೆ? ಆ ಪಾಂಡವರನ್ನು ಕಂಡರೆ ನಿಮಗೆ ಪ್ರೀತಿ ಹೆಚ್ಚಾಗಿರುವುದರಿಂದ ನೀವು ಅವರ ಭಾಗ್ಯಕ್ಕಾಗಿ ಸಂತೋಷಪಡುವುದು ಸಹಜವೇ ಸರಿ. ನನಗೆ ಮಾತ್ರ ನಿಮ್ಮಂತೆ ಸಂತೋಷವಿಲ್ಲ. ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ನನಗೆ ನಾನಾವಿಧ ಸಂಕಟಗಳು ಪ್ರಾಪ್ತವಾದುವು. ನೀವು ಹೀಗೆ ಸಮಾಧಾನದ ಮಾತುಗಳು ಹೇಳುವಾಗ ನನ್ನ ದುಃಖಗಳನ್ನು ಹೆಚ್ಚಾಗಿ ನಿಮ್ಮಲ್ಲಿ ಹೇಳುವುದರಿಂದ ಲಾಭವಿಲ್ಲ.

ಧೃತ.—ಮಗನೇ, ನಿನಗೆ ಉಂಟಾದ ಸಂಕಟಗಳನ್ನು ವಿವರಿಸು. ಪಾಂಡವರ ವೈಭವದ ವಿಷಯದಲ್ಲಿ ನಾನು ಸಂತೋಷಪಟ್ಟರೂ ನಿನ್ನ ಸಂಕಟಗಳನ್ನು ವಿಚಾರಮಾಡಿ ಮರುಗದೆ ಇರಲಾರೆನು. ನಿನ್ನ ತೊಂದರೆಗಳನ್ನು ಹೇಳಪ್ಪಾ!

ದುರ್ಯೋ.—ಜೀಯಾ ಲಾಲಿಸು, ಅರ್ಜುನನು ಖಾಂಡವವನವನ್ನು ದಹಿಸಿದಾಗ ರಾಕ್ಷಸಶಿಲ್ಪಿಯಾದ ಮಯನನ್ನು ಕೊಲ್ಲದೆ ಸಲಹಿದುದರಿಂದ ಆ ಕೃತಜ್ಞತೆಗಾಗಿ ಮಯನು ಬಂದು ವಿಚಿತ್ರವಾದ ಸಭೆಯನ್ನು ಆ ಪಾಂಡವರಿಗೆ ಕಟ್ಟಿಕೊಟ್ಟಿರುವನು. ಇಂದ್ರಾದ್ಯಷ್ಟ ದಿಕ್ಪಾಲಕರ ಸಭೆಗಳು ಸುದಾ ಆ ಸಭೆಯಮುಂದೆ ನಿಕೃಷ್ಟಗಳಾಗಿ ತೋರುತ್ತಿರುವುವು. ಸಹಸ್ರಸ್ತಂಭಗಳಿಂದ ವಿರಾಜಮಾನವಾದ ಆ ಸಭೆಯಲ್ಲಿ ಅಪೂರ್ವವಾದ ರತ್ನಗಳಿಂದಲೇ ಗೋಡೆಗಳೂ, ಬಾಗಿಲುಗಳೂ, ಗವಾಕ್ಷಗಳೂ ನಿರ್ಮಿಸಲ್ಪಟ್ಟಿರುವುವು. ಸಭೆಯ ಅಂಗಳ

ವೆಲ್ಲವೂ ಸ್ಫಟಿಕಶಿಲಾಮಯವಾಗಿವೆ. ಅಲ್ಲಲ್ಲಿ ಮರಕತಗಳ ಜಗಲಿಗಳೂ, ವಜ್ರಸ್ತಂಭಗಳೂ, ಗೋಮೇಧಕದ ಬೋದಿಗೆಗಳೂ. ವೈಡೂರ್ಯಮಣಿಯ ಸೋಪಾನಗಳೂ, ಪುಷ್ಪರಾಗದ ಕವಾಟಗಳೂ ಶೋಭಿಸುತ್ತಿರುವುವು. ಅಲ್ಲಿ ಕೃತಕ ಸರೋವರಗಳಿದ್ದರೂ ಇಲ್ಲದಂತೆ ಕಾಣುತ್ತಾ ಸ್ಥಲಭ್ರಾಂತಿಯನ್ನುಂಟುಮಾಡುತ್ತಿರುವುವು. ಕೊಳಗಳಿಲ್ಲದಕಡೆ ಕಲ್ಪನಾಚಾತುರ್ಯದಿಂದ ಸ್ವಚ್ಛವಾದ ನೀರೂ ಕಮಲಕಲ್ಹಾರ ನೀಲೋತ್ಪಲಾದಿ ಕುಸುಮಗಳೂ ಹೊಳೆಯುತ್ತಿರುವುದರಿಂದ ಸ್ವಾಭಾವಿಕವಾಗಿ ಸರೋವರಗಳಂತೆಯೇ ಕಾಣಬರುತ್ತಿರುವುವು. ರಚನಾಚಾತುರ್ಯದಿಂದ ಗೋಡೆಗಳಿದ್ದಕಡೆ ಬರಿಯಬಯಲಾಗಿಯೂ, ಗೋಡೆಗಳಿಲ್ಲದಕಡೆ ಗೋಡೆಗಳಿರುವಂತೆಯೂ ಕಾಣುತ್ತಿರುವುದು. ಕಂಬಗಳಿರುವಕಡೆ ಇಲ್ಲದಂತೆಯೂ ಇಲ್ಲದಕಡೆಗಳಲ್ಲಿ ಸ್ತಂಭವಿರುವಂತೆಯೂ ಭ್ರಾಂತಿಗೊಳಿಸುತ್ತಿರುವುದು. ಸೂರ್ಯಕಾಂತ ಚಂದ್ರಕಾಂತಶಿಲೆಗಳ ಪ್ರಭೆಯಿಂದ ಒಂದುಕಡೆಯಲ್ಲಿ ಬಿಸಿಲೂ, ಮತ್ತೊಂದುಕಡೆ ಬೆಳುದಿಂಗಳೂ ಬೀಳುತ್ತಿರುವುವು. ಅಕಾಲದಲ್ಲಿ ಗುಡುಗು, ಮಿಂಚುಗಳಿಂದ ಕೂಡಿ ಮಳೆ ಸುರಿಯುತ್ತಿರುವಂತೆ ತೋರುವುದು. ಸಭಾಮಧ್ಯದಲ್ಲಿ ಸ್ವಚ್ಛೋದಕದಿಂದ ಪೂರ್ಣವಾದ ಯಮುನಾ ನದಿಯು ಪ್ರವಹಿಸುವಂತೆ ಕಂಡುಬಂದರೂ ಅಲ್ಲಿಒಂದು ತೊಟ್ಟು ನೀರಾದರೂ ಇಲ್ಲ. ಸ್ಥಲಪ್ರದೇಶವೆಂದು ಕಾಲಿಟ್ಟಕಡೆ ನೀರು ತುಂಬಿ ಬಟ್ಟೆಗಳೆಲ್ಲಾ ತೋದು ಹೋಗುವುವು. ಅಲ್ಲಿಯ ನಿಲುವುಗನ್ನಡಿಗಳು ಚಿತ್ರವಿಚಿತ್ರಕಲ್ಪಿತಗಳಾಗಿ ಬಗೆಬಗೆಯ ದೇವತಾವಿಗ್ರಹಗಳೂ, ನಾಗಕನ್ಯೆಯರೂ, ಪ್ರತ್ಯಕ್ಷದಲ್ಲಿ ಬಂದು ನಿಂತಂತೆ ಕಾಣುತ್ತಿರುವುವು. ಇಂತಹ ಸಭೆಯಲ್ಲಿ ಮಂಡಿಸುವ ಆ ರಾಯನ ವೈಭವವನ್ನು ಎಷ್ಟೆಂದು ಹೇಳಲಿ? ಅವನ ಅರಮನೆಯಲ್ಲಿ ನಿತ್ಯವೂ

ಎಂಭತ್ತೆಂಟುಸಾವಿರ ಮಂದಿ ಬ್ರಾಹ್ಮಣರು ಊಟಮಾಡುತ್ತಿರುವರು. ಹತ್ತುಸಾವಿರಮಂದಿ ಸ್ನಾತಕರು ಬಂದು ಸ್ವಯಂಪಾಕವನ್ನು ಪಡೆಯುತ್ತಿರುವರು, ಹತ್ತುಸಾವಿರ ಜನ ಸಾಧುಗಳು ಚಿನ್ನದತಟ್ಟೆಗಳಲ್ಲಿ ಆಹಾರವನ್ನು ತೆಗೆದುಕೊಂಡು ಹೋಗುತ್ತಾ ಇರುವರು. ನಿತ್ಯವೂ ಆ ಮಹಾರಾಜನ ಆತಿಥ್ಯವನ್ನು ಪಡೆದು ಹೋಗುವ ಋಷಿಗಳ ಸಂಖ್ಯೆಯು ಅಸಂಖ್ಯಾತವಾಗಿರುವುದು. ಆ ರಾಯನು ನನಗೆ ತನ್ನ ಭಂಡಾರದ ಅಧ್ಯಕ್ಷತೆಯನ್ನು ಕೆಲವು ದಿನಗಳು ವಹಿಸಿಕೊಟ್ಟಿದ್ದನು. ಆಹಾ! ಎಷ್ಟರ ಐಶ್ವರ್ಯ! ಎಂತಹ ವೈಭವ! ಕುಬೇರನಿಗೆ ಸುದಾ ಆ ಸಿರಿಯು ಉಂಟೋ ಇಲ್ಲವೋ ಹೇಳಲಾರೆನು. ಅಷ್ಟುಮಹದೈಶ್ವರ್ಯವು ಈ ಪೃಥ್ವಿಯಲ್ಲಿ ಯಾವ ರಾಜನಿಗೂ ಇಲ್ಲ. ಇದನ್ನು ನೆನೆದುಕೊಂಡರೆ ನನ್ನ ಮನಸ್ಸೇ ನನ್ನ ಸ್ವಾಧೀನ ತಪ್ಪುವುದು.

ಹೀಗೆ ವಿಚಿತ್ರವಾಗಿ ತೋರುತ್ತಿರುವ ಸ್ಫಟಿಕಶಿಲಾಭಿತ್ತಿಗಳಲ್ಲಿ ಚಿತ್ರಿಸಿರುವ ಮೃಗಪಕ್ಷ್ಯಾದಿಜಂತುಗಳು ಸಾಕ್ಷಾತ್ತಾಗಿಯೇ ಅಲ್ಲಿ ನೆಲಸಿರುವಂತೆ ಕಾಣುತ್ತಿರುವುವು. ಇದನ್ನು ನೋಡಿದರೆ ಪರಸ್ಪರ ವೈರವುಳ್ಳ ವಿಜಾತೀಯ ಪ್ರಾಣಿಗಳೂ ಕೂಡ ತಮ್ಮ ಸಹಜವಾದ ಜಾತಿ ವೈರವನ್ನುಳಿದು ಸ್ನೇಹಭಾವದಿಂದ ಇರುವುದರಿಂದ ಇದು ಮಹಾ ಮಹಿಮೆಯುಳ್ಳ ಯಾವನೋ ಒಬ್ಬ ಮಹರ್ಷಿಯ ಆಶ್ರಮವಿರಬಹುದೋ ಏನೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿರುವುದು. ಬಿಂದು ಸರೋವರದಲ್ಲಿಯೂ ರತ್ನಾಕರದಲ್ಲಿಯೂ ಇಲ್ಲದ ಅನರ್ಘ್ಯರತ್ನಗಳೂಕೂಡ ಆ ಸಭಾಮಂಟಪದ ಬೇರೆಬೇರೆ ಕಡೆಗಳಲ್ಲಿ ಸೇರಿಸಲ್ಪಟ್ಟಿವೆ. ಇಂತಹ ಪರಮಾಶ್ಚರ್ಯಕರವಾದ ಸಭೆಯನ್ನು ಪೂರ್ವದಲ್ಲಿ ಯಾರೂ ನಿರ್ಮಿಸಿರಲಿಲ್ಲ. ಮುಂದೆಯೂ

ಇಂತಹ ಸಭೆಯನ್ನು ಯಾರೂ ರಚಿಸಲಾರರೆಂದು ಹೇಳಬಹುದು. ಅದು ಎಂತಹ ಶಿಲ್ಪಕಲಾಚಾತುರ್ಯವೋ ನಾನರಿಯೆನು.

ಧೃತ.—ದುರ್ಯೋಧನಾ, ದೇವತಾಶಿಲ್ಪಿಗಳ ರಚನಾ ಚಾತುರ್ಯವು ಅಮೋಘವಾದುದು. ಈ ಲೋಕದಲ್ಲಿ ನಮ್ಮ ವಂಶೀಯರಿಗೇನೇ ಅಂತಹ ಅಪೂರ್ವ ಸಭೆ ಸಿಕ್ಕಿತೆಂದು ನಾವು ಹೆಮ್ಮೆ ಪಡಬೇಕಾಗಿದೆ. ನಿನಗೆ ಅಪೇಕ್ಷೆಯುಂಟಾದರೆ ನೀನೂ ಅದರಂತಹ ಸಭೆಯೊಂದನ್ನು ನಿರ್ಮಿಸು.

ದುರ್ಯೊ.—ಸಭೆಯೊಂದನ್ನು ನಿರ್ಮಿಸಿದ ಮಾತ್ರದಿಂದಲೇ ಆಯಿತೇ? ಅದಕ್ಕೆ ತಕ್ಕಷ್ಟು ಐಶ್ವರ್ಯವಿರಬೇಡವೇ ? ಆ ಸಭೆಯ ಮಾತು ಹಾಗಿರಲಿ, ಆ ಯುಧಿಷ್ಠಿರನ ಐಶ್ವರ್ಯವನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ಕಾಂಭೋಜರಾಜನು ಅಸಂಖ್ಯಾತವಾದ ಕುದುರೆಗಳನ್ನೂ, ಯವನ ಸಹಿತನಾದ ಭಗದತ್ತನು ಲಕ್ಷಸಂಖ್ಯೆಯ ಆನೆಗಳನ್ನೂ ತೆಗೆದುಕೊಂಡು ಬಂದು ರಾಜದ್ವಾರದಲ್ಲಿ ನಿಂತು ಸಮಯ ದೊರೆಯದೆ ಕಾದಿದ್ದರು: ನಾನಾ ದೇಶಾಧೀಶ್ವರರೂ ತಮ್ಮಲ್ಲಿದ್ದ ಅಪೂರ್ವ ರತ್ನಾಭರಣಗಳನ್ನು ಕಾಣಿಕೆಯಾಗಿ ತಂದೊಪ್ಪಿಸಲು ಸಿದ್ಧರಾಗಿ ನಿಂತಿದ್ದರು. ಧನಕನಕಗಳು ಆ ರಾಯನ ಭಂಡಾರಕ್ಕೆ ಎಷ್ಟೆಷ್ಟು ಬಂದು ಬೀಳುತ್ತಿದ್ದುವೋ ಅವುಗಳನ್ನು ಲೆಕ್ಕಿಸುವುದೇ ಕಷ್ಟವಾಗಿತ್ತು. ಆ ರಾಜನಿಗೆ ಕಪ್ಪಗಳನ್ನು ತಂದೊಪ್ಪಿಸದ ರಾಜನೊಬ್ಬನೂ ಇಲ್ಲ. ಕೆಲವರು ಆ ಯುಧಿಷ್ಠಿರನಲ್ಲಿ ತಮಗಿರುವ ಭಕ್ತಿಯಿಂದಲೂ, ಕೆಲವರು ಭೀಮಾರ್ಜುನರ ಪರಾಕ್ರಮ ಭಯದಿಂದಲೂ ಕೆಲವರು ಶ್ರೀಕೃಷ್ಣನ ಅನುಗ್ರಹಾಪೇಕ್ಷೆಯಿಂದಲೂ ನಾನು ಮುಂದು, ತಾನುಮುಂದೆಂದು ಬಂದು ಕಾದಿದ್ದರು.

ಧೃತ.— ಎಲೈ ಮಗನೇ, ಪರರ ಐಶ್ವರ್ಯವನ್ನು ನೋಡಿ

ಸಂತೋಷಪಡಬೇಕೇ ಹೊರತು ಕರುಬಬಾರದು. ಹೊಟ್ಟೆಕಿಚ್ಚುಪಡುವವನಿಗೆ ತನಗಿಲ್ಲವೆಂಬ ದುಃಖವೊಂದು, ಅವನಿಗೆ ಇರುವುದಲ್ಲಾ! ಎಂಬ ವ್ಯಥೆಯೊಂದು, ಇವೆರಡು ದುಃಖಗಳೂ ಪೀಡಿಸುವುದರಿಂದ ಅಸೂಯೆಯೇ ಮನುಷ್ಯನಿಗೆ ದೊಡ್ಡ ಶತ್ರುವೆಂದು ಹೇಳಬೇಕಾಗಿದೆ. ನಮ್ಮ ಜನರೇ ಅಂತಹ ಐಶ್ವರ್ಯ ಸಂಪನ್ನರಾಗಿರುವುದಕ್ಕೆ ನಾವು ಮತ್ತಷ್ಟು ಸಂತೋಷಪಡಬೇಕೇ ಹೊರತು ಹೀಗೆ ಅಸೂಯೆ ಪಡಬಾರದು. ದೇವರ ದಯೆ ಇದ್ದರೆ ನಿನಗೂ ಅಂತಹ ಐಶ್ವರ್ಯವು ಏಕೆ ಲಭಿಸಬಾರದು? ನಿನಗೆ ಬೇಕಾಗಿದ್ದರೆ ನೀನೂ ಆತನಂತೆಯೇ ಒಂದು ಯಾಗವನ್ನು ಮಾಡಬಹುದಲ್ಲಾ!

ದುರ್ಯೋ.—ತಂದೆಯೇ ಕೇಳು, ಲೋಕದ ಸಮಸ್ತೈಶ್ವರ್ಯವನ್ನು ಅವರು ಮೊದಲೇ ಆಕ್ರಮಿಸಿಬಿಟ್ಟಿರುವುದರಿಂದ ನಾವು ದಿಗ್ವಿಜಯಕ್ಕೆ ಹೋದರೂ ನಮಗೆ ವಿಶೇಷ ಧನಸಹಾಯವಾಗುವುದೆಂಬ ಆಶೆಗೆ ಅವಕಾಶವಿಲ್ಲ. ಶಿಶುಪಾಲ ಜರಾಸಂಧಾದಿ ವೀರರು ಸುದಾ ಭೀಮಾರ್ಜುನರ ಪರಾಕ್ರಮದಿಂದ ನಿಗ್ರಹಿಸಲ್ಪಟ್ಟಿರುವಾಗ ಶೂರರಾದ ಆ ಸಹೋದರರಿಗೆ ಹೆದರಿದಂತೆ ನಮಗೆ ಯಾವರಾಜರು ಹೆದರುವರು? ಅಷ್ಟು ಐಕಮತ್ಯವೂ ಸಹಾಯ ಸಂಪತ್ತಿಯೂ ನಮಗೆ ಇಲ್ಲದುದರಿಂದ ಆ ಯೋಚನೆಗೆ ಇದು ಸಮಯವಲ್ಲ. ಮತ್ತೊಂದು ರಹಸ್ಯವನ್ನು ಹೇಳುವೆನು ಕೇಳು. ಆ ಸಭಾ ಮಂಟಪದಲ್ಲಿ ನನಗೆ ಆದ ಅವಮಾನವು ಶೂಲದಂತೆ ಪ್ರತಿ ನಿಮಿಷದಲ್ಲಿಯೂ ನನ್ನ ಹೃದಯವನ್ನು ಚುಚ್ಚುತ್ತಲಿದೆ,

ಧೃತ.—ಅದೇನಪ್ಪಾ! ಅಂತಹ ಅವಮಾನವು ನಿನಗೆ ಹೇಗೆ ಉಂಟಾಯಿತು?

ದುರ್ಯೋ.—ಆರ್ಯನೇ, ಒಂದುದಿನ ಆ ಸಭೆಯನ್ನು ನೋಡ

ಲಿಕ್ಕೆ ಆ ಪಾಂಡವರೊಂದಿಗೆ ನಾನು ಶಕುನಿ ಸಹಿತನಾಗಿ ಹೋಗಿದ್ದೆನು. ಮೊದಲು ನಾನು ಹೇಳಿದ್ದಂತೆ ಆ ಮಂಟಪದಲ್ಲಿ ಸ್ಥಲ ಜಲ ಪ್ರದೇಶಗಳನ್ನೇ ತಿಳಿಯದೆ ಮರುಳಾದೆನು. ನೀರಿಲ್ಲದ ಒಂದು ಪ್ರದೇಶವು ಕಲ್ಪನಾಚಾತುರ್ಯದಿಂದ ಸರೋವರವಿರುವಂತೆ ಕಾಣಿಸಿದುದರಿಂದ ಉಟ್ಟಬಟ್ಟೆಗಳು ನೆನೆಯುವುವೆಂದು, ನನ್ನ ವಸ್ತ್ರಗಳನ್ನು ಮೇಲಕ್ಕೆ ಎತ್ತಿಹಿಡಿದುಕೊಂಡೆನು. ಅದು ಕೊಳವಲ್ಲವೆಂದು ಅರ್ಜುನನು ತಿಳಿಸಿದನು. ಮುಂದೆ ಸ್ವಲ್ಪದೂರ ಹೋಗುವಾಗ ನೀರಿರುವ ಒಂದು ಕಡೆ ಒಣ ನೆಲದಂತೆಯೇ ಕಾಣುತ್ತಿತ್ತು. ನಡೆದುಹೋಗುವಾಗ ಆ ಸರೋವರದಲ್ಲಿ ಬಿದ್ದು ಬಿಟ್ಟೆನು. ನಕುಲ ಸಹದೇವರು ನನ್ನ ಕೈಹಿಡಿದು ಮೇಲಕ್ಕೆತ್ತಿದರು. ಯುಧಿಷ್ಠಿರನ ಅಪ್ಪಣೆಯಿಂದ ಮಡಿವಸ್ತ್ರಗಳನ್ನು ಸೇವಕರು ತಂದುಕೊಡಲು ಅವುಗಳನ್ನು ಧರಿಸಿದೆನು. ಇನ್ನೊಸ್ವಲ್ಪ ಮುಂದಕ್ಕೆ ಹೋದೆನು. ಕಂಬಗಳಿರುವ ಪ್ರದೇಶದಲ್ಲಿ ತಿಳಿಯದೆ ನುಗ್ಗಿದೆನು. ಪೆಟ್ಟಾಯಿತು. ಗೋಡೆಯಿಲ್ಲದ ಕಡೆ ಗೋಡೆ ಇರುವುದೆಂದು ಭ್ರಾಂತಿಗೊಂಡು ತಡವರಿಸುತ್ತಾಹೋಗಲು ಅಲ್ಲಿ ಏನೂ ಇಲ್ಲವೆಂದು ಶಿಲ್ಪಿಗಳು ಹೇಳಲು ನಾಚಿಕೊಂಡೆನು. ಬಯಲಾಗಿ ಕಾಣುತ್ತಿದ್ದ ಒಂದುಕಡೆ ಧಾರಾಳವಾಗಿ ನುಗ್ಗಿದೆನು. ಅಲ್ಲಿ ಸ್ಫಟಿಕದ ಬಾಗಿಲು ಇದ್ದುದರಿಂದ ಹಣೆಗೆ ಬಡಿದು ಬುಗುಟು ಕಟ್ಟಿಕೊಂಡಿತು. ನನ್ನಭ್ರಮೆಯಿಂದ ಉಂಟಾದ ಇಂತಹ ದುರವಸ್ಥೆಯನ್ನು ನೋಡಿ ಪ್ರತಿ ಸಂದರ್ಭದಲ್ಲಿಯೂ ಆ ಸಭೆಯಲ್ಲಿದ್ದ ಸ್ತ್ರೀಯರೂ, ದ್ರೌಪದಿಯೂ ಸಹ ಕೈಹೊಯ್ದು ನಗುತ್ತಿದ್ದರು. ಆಗ ಭೀಮಸೇನನು ನನ್ನನ್ನು ನೋಡಿ ''ಎಲೈ ಕುರುರಾಯನೇ, ಪ್ರಜ್ಞಾಚಕ್ಷುವಾದ ನಿಮ್ಮಯ್ಯನ ನೂರೊಂದು ಮಂದಿ ಮಕ್ಕಳಲ್ಲಿ ನೀನೇ ನಿಜವಾದ ಮಗನು. ಆತನು ಕಣ್ಣಿಲ್ಲದ ಕುರುಡನು. ನೀನು

ಕಣ್ಣಿರುವ ಕುರುಡನು.'' ಎಂದು ಅಪಹಾಸ್ಯಮಾಡಿದನು. ಇಂತಹ ಅಪಮಾನವನ್ನು ಕೇಳಿ ನಾನು ಬದುಕಿರಬೇಕೆ?

ಧೃತ.—ಮಗುವೇ, ಆ ಭೀಮನು ಒರಟನು. ಯಾವಾಗಲೂ ಬಿಡುನುಡಿಗಳನ್ನಾಡುತ್ತಿರುವುದು ಅವನ ಸ್ವಭಾವವು. ಇಂತಹ ಒರಟುತನದ ದೂಷಣ ಭೂಷಣಗಳಿಂದ ನಮಗೆ ಆಗಬೇಕಾದುದೇನು? ಇದನ್ನು ನಾವು ಮನಸ್ಸಿನಲ್ಲಿಡಬಾರದು.

ದುರ್ಯೋ.—ರಾಜನೇ, ನಾನು ಎಷ್ಟು ಹೇಳಿಕೊಂಡರೂ ಆ ಮಕ್ಕಳ ಮೇಲೆ ನಿಮಗಿರುವ ವಿಶ್ವಾಸದಿಂದ ನನ್ನ ನುಡಿಗಳು ನಿಮ್ಮ ಮನಸ್ಸಿಗೆ ಹಿಡಿಯಲಾರವು. ಇನ್ನು ನನಗೆ ಅಪ್ಪಣೆಕೊಟ್ಟರೆ ತೋರಿದ ದಾರಿಯಲ್ಲಿ ಹೋಗುವೆನು. ಆ ಪಾಂಡವರು ವಿನಯಶೀಲರು, ಸಂಪನ್ನರು, ಉತ್ತಮರು, ಅವರಲ್ಲಿಯೇ ನೀನು ಪ್ರೀತಿಯನ್ನು ಬೆಳೆಸಿಕೊಂಡಿರು. ಎತ್ತಹೋದರೂ ನಾವು ನೂರುಮಂದಿ ಮಕ್ಕಳು ತಾನೇ ಪೊರಗು. ನಿಮ್ಮ ದಯೆಯೊಂದಿದ್ದರೆ ನಾವು ಮತ್ತೆಲ್ಲಿಗಾದರೂ ಹೋಗಿ ಹೊಟ್ಟೇ ಹೊರೆದುಕೊಳ್ಳಲಾರೆವೆ?

ಧೃತ.—ಮಗನೇ! ಏಕೆ ಹೀಗೆ ಅಸೂಯೆಯಿಂದ ಕೊರಗುವೆ? ಸ್ವೈರಣೆಯನ್ನು ತಂದುಕೋ, ನನ್ನಿಂದ ನಿನಗೆ ಏನು ಸಹಾಯವಾಗಬೇಕು. ಅದನ್ನು ಮಾಡಿಕೊಡುವೆನು, ಹೇಳು. ಚಿಂತಿಸಬೇಡ.

ದುರ್ಯೋ.—ಅಪ್ಪಾ? ನೀವು ಎಷ್ಟು ಸಮಾಧಾನ ಹೇಳಿದರೂ ನನ್ನ ಹೊಟ್ಟೆಯಲ್ಲಿರುವ ಉರಿಯು ತಗ್ಗುವಹಾಗಿಲ್ಲ. ನಿಮ್ಮಲ್ಲಿ ನಿಜವಾಗಿ ಹೇಳುವೆನು ಕೇಳಿರಿ. ಆ ಭೀಮಸೇನನಿಗೆ ಒಂದೆರಡುಸಲ ವಿಷವನ್ನು ಕುಡಿಸಿದೆನು. ಅದನ್ನು ಅರಗಿಸಿಕೊಂಡನು. ಆಳವಾದ ಮಡುವಿನಲ್ಲಿ ಕೆಡಹಿದೆನು; ಅದರಿಂದಲೂ ಅವನು ಸಾಯಲಿಲ್ಲ. ಸುಖವಾಗಿ ಸ್ನಾನಮಾಡಿಕೊಂಡು ಬಂದನು. ಅರಗಿನ ಅರ

ಮನೆಯಲ್ಲಿ ಕೂಡಿ ಸುಡಿಸಬೇಕೆಂದು ಪ್ರಯತ್ನಿಸಿದೆನು. ಅವರಬಂದು ಕೂದಲೂ ಸುದಾ ಸೀಯದೆ ಸುರಕ್ಷಿತರಾಗಿ ಹೊರಟು ಹೋದರು. ನನ್ನಪ್ರಯತ್ನಗಳೆಲ್ಲವೂ ಈ ರೀತಿಯಲ್ಲಿ ವಿಫಲವಾಗುತ್ತಾಬಂದುವು. ಇನ್ನೊಂದು ಉಪಾಯವನ್ನು ಯೋಚಿಸಿದ್ದೇನೆ. ನೀವು ಹೇಳಿದಂತೆ ಭವ್ಯವಾದ ಸಭಾ ಮಂಟಪವನ್ನೂ ಕಟ್ಟಿಸುತ್ತೇನೆ. ನೀವು ಆ ಪಾಂಡವರನ್ನೂ ಇಲ್ಲಿಗೆ ಕರೆಯಿಸಿಕೊಟ್ಟರೆ ವಿನೋದವಾಗಿ ಜೂಜ ನಾಡಿ ಸೋಡಿಸಿಡುವೆನು. ದೈವಾನುಕೂಲವಿದ್ದು ಗೆದ್ದರೆ ಅವರ ಐಶ್ವರ್ಯವೆಲ್ಲಾ ನನ್ನ ಸ್ವಾಧೀನವಾಗುವುದು. ನಾವು ಸೋತಾಗ್ಯೂ ನಮ್ಮ ಸ್ಥಿತಿಯು ಈಗಿರುವುದಕ್ಕಿಂತ ಹೀನವಾಗಲಾರದು. ನೀವು ಇಷ್ಟುಮಟ್ಟಿಗೆ ಅನುಕೂಲಪಡಿಸಿದರೆ ಸಾಕು. ಇದೇ ಕಡೆಯ ಉಪಾಯವೆಂದು ತಿಳಿದಿರುವೆನು.

ಧೃತ. —ದುರ್ಯೋಧನಾ, ಸಭಾಮಂಟಪವನ್ನು ನಿನ್ನ ಇಷ್ಟ ಬಂದಂತೆ ಕಟ್ಟಿಸಿಕೊಳ್ಳಬಹುದು. ಈ ವಿಷಯದಲ್ಲಿ ನನ್ನ ಅಡ್ಡಿ ಏನೂ ಇಲ್ಲ. ಜೂಜನಾಡುವ ವಿಷಯದಲ್ಲಿಮಾತ್ರ ಜಯಾಪಜಯ ಗಳು ಹೇಗಾಗುವವೋ ನನಗೆ ತಿಳಿಯದು. ಪ್ರಾಜ್ಞನಾದ ವಿದುರನ ಸಂಗಡ ಆಲೋಚನೆಮಾಡಿ ಇದಕ್ಕೆ ಉತ್ತರ ಹೇಳುವೆನು.

ದುರ್ಯೋ.—ತಂದೆಯೇ, ಈವಿಷಯದಲ್ಲಿ ಆ ವಿದುರನನ್ನು ಏತಕ್ಕೆ ಕೇಳಬೇಕು. ಅವನಿಗೆ ನಮ್ಮ ನೆರಳು ಕಂಡರೆ ಸೇರದು. ನಾವು ದುಷ್ಟರೆಂದು ಯಾವಾಗಲೂ ದೂರುತ್ತಲೇ ಇರುವನು. ಅವನ ಕಿವಿಯಲ್ಲಿ ಈ ಸುದ್ದಿ ಬಿದ್ದರೆ ನಮ್ಮ ಕೆಲಸಕ್ಕೆ ಕಲ್ಲೇಬಿದ್ದು ಹೋಗು ವುದು. ಆದುದರಿಂದ ಅವನನ್ನು ಕೇಳಿ ಫಲವಿಲ್ಲ. ನೀನೇ ಯೋಚಿಸಿ, ಅವರನ್ನು ಇಲ್ಲಿಗೆ ಕರಿಸಿಕೊಡು.

ಧೃತ. —ಮಗೂ, ಹೀಗೆ ದುಡುಕಬಾರದು. ಇದುವರೆಗೆ

ನೀನು ಹೇಳಿದ ಮಾತುಗಳಿಂದ ನೀನೇ ಆ ಪಾಂಡವರನ್ನು ಅನ್ಯಾಯವಾಗಿ ನಾಶಮಾಡಿಬಿಡಬೇಕೆಂದು ಹಲವು ಪ್ರಯತ್ನಗಳನ್ನುಮಾಡಿದುದಾಗಿ ಒಪ್ಪುತ್ತೀಯೆ. ಇದರಿಂದ ಈ ಲೋಕದಲ್ಲಿ ನಮಗೆ ಅಪವಾದವೂ, ಪರಲೋಕದಲ್ಲಿ ನರಕವೂ ಬಾರದೆ ತಪ್ಪುವಹಾಗಿಲ್ಲ. ಮುಂದೆಮಾಡುವ ಕೆಲಸಗಳನ್ನಾದರೂ ಸಿದಾನವಾಗಿ ಯೋಚಿಸಿ ಮಾಡತಕ್ಕದು ಪ್ರಾಜ್ಞರ ಲಕ್ಷಣವು. ಈಗ ಅಂತಹ ಆತುರವೇನೂ ಇಲ್ಲ. ನೀನು ಸಭೆಯನ್ನು ಕಟ್ಟಿಸಲಿಕ್ಕೆ ತಕ್ಕ ಪ್ರಯತ್ನಗಳನ್ನು ಮಾಡಬಹುದು. ಇತರ ವಿಷಯಗಳನ್ನು ಮುಂದೆ ನೋಡೋಣ.

ದುರ್ಯೋಧನನು ಈ ಮಾತಿಗೆ ಉತ್ತರ ಹೇಳಲು ತೋರದೆ, ಆತನ ಅಪ್ಪಣೆಪಡೆದು ಶಕುನಿಯೊಂದಿಗೆ ಹೊರಟುಬಂದನು. ಕೂಡಲೆ ಚತುರರಾದ ಶಿಲ್ಪಿಗಳನ್ನು ಕರೆಯಿಸಿ, ಉತ್ತಮವಾದ ಪ್ರದೇಶದಲ್ಲಿ ರಮಣೀಯವಾದ ಮಹಾಸಭೆಯೊಂದನ್ನು ಕಟ್ಟಿಸುವುದಕ್ಕೆ ಏರ್ಪಡಿಸಿದನು. ಆ ಸಭೆಯು ಅನರ್ಘ್ಯಮಣಿಕಾಂಚನಮಯವಾಗಿ ಈ ಪ್ರಪಂಚದಲ್ಲಿ ಅತ್ಯುತ್ತಮವೆನಿಸುವಹಾಗೆ ಇತ್ತು. ಆದರೂ ಮಯ ನಿರ್ಮಿತವಾದ ಇಂದ್ರಪ್ರಸ್ಥದ ಸಭೆಗಿಂತ ಎಡಗೈಯೆನಿಸಿತ್ತೇ ಹೊರತು ಮೇಲುಗೈಯಾಗಿರಲಿಲ್ಲ. ಹಿಂದೆ ಎಂದೂ ನೋಡದೆ ಇದ್ದ ಇಂತಹ ಅಪೂರ್ವಸಭೆಯನ್ನು ಕಂಡು, ಆ ಹಸ್ತಿನಾಪುರದಲ್ಲಿದ್ದ ಆಬಾಲವೃದ್ಧರೂ ಬಹು ಸಂತೋಷದಿಂದ ಹೊಗಳುತ್ತಿದ್ದರು. ಸಭಾ ನಿರ್ಮಾಣಕಾಲದಲ್ಲಿ ಧೃತರಾಷ್ಟ್ರನು ಭೀಷ್ಮದ್ರೋಣಾದಿ ಹಿರಿಯರಿಗೆ ಆಗಾಗ್ಗೆ ಅದನ್ನು ತೋರಿಸಿ, ಅವರಿಂದ ತಕ್ಕ ಸೂಚನೆಗಳನ್ನು ಪಡೆಯುತ್ತಾ ಬಂದುದರಿಂದ ಆ ಮಂಟಪದಲ್ಲಿ ಆಕ್ಷೇಪಣೀಯವಾದ ಭಾಗಗಳು ಒಂದಾದರೂ ಇರಲಿಲ್ಲ.

ಬಳಿಕ ಒಂದು ದಿನ ಧೃತರಾಷ್ಟ್ರನು ವಿದುರನನ್ನು ತನ್ನ ಅರಮನೆಗೆ ಕರೆಯಿಸಿಕೊಂಡು ಅವನೊಂದಿಗೆ ಇಂತೆಂದನು.

ಧೃತ.—ನಾವು ಇಂದ್ರಪ್ರಸ್ಥಕ್ಕೆ ಹೋಗಿ ಪಾಂಡವರ ಆತಿಥ್ಯವನ್ನು ಪಡೆದು ರಾಜಸೂಯಯಾಗವನ್ನು ನೋಡಿಬಂದೆವಷ್ಟೆ! ಆಕಾಲದಲ್ಲಿ ಮಯನಿಂದ ನಿರ್ಮಿತವಾದ ಆ ಸಭಾಭವನವನ್ನು ನೋಡಿ ಬಂದ ನಮ್ಮ ದುರ್ಯೋಧನನು ಅಂತಹ ಸಭೆಯೊಂದನ್ನು ನಮ್ಮ ಹಸ್ತಿನಾಪುರದಲ್ಲಿಯೂ ಕಟ್ಟಿಸಬೇಕೆಂಬ ಅಪೇಕ್ಷೆಯನ್ನು ನನ್ನಲ್ಲಿ ತಿಳಿಸಿದನು. ನಾನು ಅದಕ್ಕೆ ಅನುಮತಿಕೊಟ್ಟದ್ದರಮೇಲೆ ಒಂದು ಸಭೆಯನ್ನು ಕಟ್ಟಿಸಿರುವನು. ನೀನು ಇದನ್ನು ನೋಡಿಯೇ ಇರುವೆಯಲ್ಲವೆ! ಈ ಸಭಾಪ್ರವೇಶಮಹೋತ್ಸವಕ್ಕೆ ನೀನೇ ಹೋಗಿ, ಆ ಪಾಂಡವರನ್ನು ಕರೆದುಕೊಂಡು ಬಾ. ತಂದೆಯಿಲ್ಲದ ಆ ಮಕ್ಕಳು ರಾಜಧಾನಿಯನ್ನು ಬಿಟ್ಟುಹೋಗಿ ಬಹು ದಿನಗಳಾದುವು. ಅವರನ್ನು ಒಂದುಸಲ ನೋಡಬೇಕೆಂಬ ಆಶೆಯು ನನಗೆ ಬಲವಾಗಿದೆ. ಈ ಪುರನಿವಾಸಿಗಳೂ ಆ ಪಾಂಡವರನ್ನು ನೋಡಬೇಕೆಂದು ಬಯಸುತ್ತಿರುವರು. ಬಂಧುಜನರು ಆಗಾಗ್ಗೆ ಬಂದು ಹೋಗುತ್ತಿದ್ದರೆ ಪರಸ್ಪರ ಪ್ರೀತಿವಿಶ್ವಾಸಗಳು ಹೆಚ್ಚುವುವೆಂದು ಬಲ್ಲವರು ಹೇಳುವರು. ಆದುದರಿಂದ ಅವರು ಬಂದು ಇಲ್ಲಿ ಸುಖದ್ಯೂತಮುಂತಾದ ವಿನೋದಗಳಿಂದ ಸಂತೋಷವಾಗಿ ಕೆಲವು ದಿನಗಳಿರಲಿ.

ವಿದು.—ರಾಜನೇ, ನಿನ್ನ ಮಾತು ಕಿವಿಗಿಂಪಾಗಿ ತೋರಿದರೂ ಸುಖದ್ಯೂತ ಮುಂತಾದ ವಿನೋದವೆಂದು ಹೇಳುವುದರಿಂದ ನನ್ನ ಮನಸ್ಸಿಗೆ ಭಯವಾಗುತ್ತಿದೆ. ಹೊಲಸಿನ ನಾತದಿಂದ ಕೂಡಿದ ಸುಂದರಪುಷ್ಪದಂತೆ ನಿನ್ನಮಾತು ಅಸಹ್ಯವಾಗಿದೆ. ನೀನು ಹೀಗೆ ವಿಧಿಪ್ರೇರಿತನಾಗಿ ನಮ್ಮೆಲ್ಲರಿಗೂ ಅಪಾಯತರಲು ಮೃತ್ಯುದೇವತೆಯನ್ನು ಕರೆಯುತ್ತಿರುವೆಯೋ, ಅಥವಾ ನಿನ್ನಮಗನ ಕಪಟದ ನುಡಿಗಳಿಗೆ ಮರುಳಾಗಿ ಹೀಗೆ ಹೇಳುವೆಯೋ ತಿಳಿಯದು. ಖಂಡಿತವಾಗಿ ಹೇಳು.

ವೆನು. ಕೇಳು, ನಿನ್ನ ಮಕ್ಕಳು ಪೂರ್ವಾಪರಜ್ಞಾನವಿಲ್ಲದ ಮೂರ್ಖಾಗ್ರೇಸರರು. ಅವರ ಮಾತನ್ನು ಕೇಳಿದರೆ ಪರಿಣಾಮದಲ್ಲಿ ಯಾರಿಗೂ ಸುಖವಿಲ್ಲ. ಛೀ, ಛೀ, ಸುಖದ್ಯೂತವೇ? ಯಾರಿಗೆ ಸುಖ? ಆ ಪಾಂಡವರಿಗೋ ಅಥವಾ ದುರ್ಯೋಧನಾದಿಗಳಿಗೋ? ನಿನ್ನ ಬುದ್ಧಿಯು ಎಲ್ಲಿಗೆ ಹೋಯಿತು? ಆ ಪಾಂಡವರಿಗೆ ಯಾವ ಸುಖದಲ್ಲಿಯೂ ಕೊರತೆಯಿಲ್ಲ. ನಿನ್ನ ಮಗನಿಗೆ ಸುಖವಾಗಬೇಕಾದರೆ ಅವರನ್ನು ಕೆಣಕಿ, ತನ್ನ ಕುಲಕ್ಕೆ ಕೊಡಲಿಯನ್ನು ಹಾಕಿಕೊಳ್ಳಬೇಕಾಗುವುದು. ನನ್ನ ಮನಸ್ಸಿಗೆ ನೀನು ಹೇಳುವ ಜೂಜಿನ ವಿಚಾರವೇ ಹಿತವಾಗಿ ಕಾಣುವುದಿಲ್ಲ. ಧಾರಾಳವಾದ ಮನಸ್ಸಿನಿಂದ ಅವರನ್ನು ಕರೆಯಿಸು. ಊಟ ಉಪಚಾರಗಳಿಂದ ಸಂತೋಷಪಡಿಸು. ಬೇಕಾದ ಬುದ್ಧಿಯ ಮಾತುಗಳನ್ನು ಹೇಳಿಕೊಂಡು ಕೆಲವು ದಿನಗಳತನಕ ಇರಿಸಿಕೊಂಡಿರು. ಕಪಟಿಗಳಾದ ದುರ್ಯೋಧನಾದಿಗಳ ಮಾತಿನಬಲೆಗೆಸಿಕ್ಕಿ ಆ ಪಾಂಡವರನ್ನು ಕೆಣಕಿದರೆ ನಿಮಗೆ ಎಂದಿಗೂ ಶ್ರೇಯಸ್ಸಾಗುವುದೆಂದು ತಿಳಿಯಬೇಡ.

ಧೃತ.—ವಿದುರನೇ, ನೀನು ಲೋಕಾನುಭವವನ್ನು ಚೆನ್ನಾಗಿ ಬಲ್ಲ ಪ್ರಾಜ್ಞನು. ಆದುದರಿಂದಲೇ ಪ್ರತಿಒಂದು ಕಾರ್ಯವನ್ನೂ ನಿನ್ನನ್ನು ಕೇಳದೆ ನಾನು ಮಾಡುವುದೇ ಇಲ್ಲವಷ್ಟೆ! ಕೌರವಪಾಂಡವರ ಶೀಲಸ್ವಭಾವಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡಿದ್ದೇನೆ. ನಾನು ಆ ಯುಧಿಷ್ಠಿರಾದಿಗಳ ಹಿತವನ್ನು ಬಯಸುವವನೇ ಹೊರತು ಅವರ ಕೇಡನ್ನು ಹಾರೈಸುವವನಲ್ಲ. ನನಗೆ ಆ ಮಕ್ಕಳೂ ಒಂದೇ, ಈ ಮಕ್ಕಳೂ ಒಂದೇ. ಸ್ವಲ್ಪವೂ ಭೇದ ಬುದ್ಧಿ ಇಲ್ಲ. ವಿನೋದಕ್ಕಾಗಿ ಜೂಜನಾಡುವೆನೆಂದು ದುರ್ಯೋಧನನು ಬಹಳವಾಗಿ ಕೇಳಿಕೊಳ್ಳುತ್ತಿದ್ದಾನೆ. ಹೀಗೆ ಆಡುವುದರಲ್ಲಿ ಯಾವ ಅಪಾಯವೂ ಇಲ್ಲವಷ್ಟೆ!

ವಿದುರ.— ಓಹೋ! ಇದು ದುರ್ಯೋಧನನ ಯೋಚನೆಯೋ? ಸರಿ ಸರಿ. ಮೊದಲಲ್ಲಿ ವಿನೋದ, ಆಮೇಲೆ ವಿಷಾದ. ಹಾವಿನೊಂದಿಗೆ ಆಟವಾಡುವಂತೆ ಅವರನ್ನು ವಿನೋದಕ್ಕೆ ತಿವಿಯುವೆನೆಂದರೆ ಮೈಯಲ್ಲಿ ರಂಧ್ರವು ಬೀಳದಿರುವುದೆ? ಇದು ನನಗೆ ಪಥ್ಯವೆನಿಸದು. ನಿನ್ನಮಕ್ಕಳ ವಿನಾಶಕ್ಕೆ ನೀನೇ ಈ ಬೀಜವನ್ನು ಬಿತ್ತಿದಂತೆ ಆಗುವುದು. ನಾನು ಮೊದಲೇ ಹೇಳಿದ್ದೇನೆ. ಇಷ್ಟರಮೇಲೆ ನಿನ್ನ ಇಷ್ಟ.

ಧೃತ.—ತಮ್ಮಾ, ಕೋಪಿಸಬೇಡ. ನೀನು ಹೋಗಿ ಅವರನ್ನು ಇಲ್ಲಿಗೆ ಕರೆದುಕೊಂಡು ಬಾ. ನಾನು ಅವರನ್ನು ಉಪಚರಿಸುವ ಕ್ರಮವನ್ನು ನೋಡು. ನನ್ನ ಮಕ್ಕಳು ದುರುಳರೆಂದು ಜನರು ಎಂದುಕೊಂಡರೂ ನೀನೂ ಹಾಗೆಯೇ ಅವರನ್ನು ನಿಂದಿಸಬೇಡ. ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಇಲ್ಲವೆ? ಹೋಗಿಬಾರಪ್ಪಾ!

ವಿದುರನು ಧೃತರಾಷ್ಟ್ರನಿಗೆ ಎಷ್ಟೆಷ್ಟು ವಿವೇಕ ಹೇಳಿದರೂ ಅವನು ಕೇಳಲಿಲ್ಲ. ವಿದುರನು ಹಾಗೆಯೇ ಆಗಲೆಂದು ಆಮಾತಿಗೆ ಒಪ್ಪಿ, ಭೀಷ್ಮದ್ರೋಣ ಕೃಪಾಚಾರ್ಯರಬಳಿಗೆ ಬಂದು ಧೃತರಾಷ್ಟ್ರನು ನುಡಿದ ಮಾತುಗಳನ್ನು ತಿಳಿಸಿದನು. ಅವರೂ ಬಹುವಿಚಾರಪಟ್ಟು "ಅಯ್ಯೋ! ಪಾಪಿ! ಅನ್ಯಾಯವಾಗಿ ತನ್ನ ಮಗನಾದ ದುರ್ಯೋಧನನ ಮಾತಿಗೆ ಮರುಳಾಗಿ, ಕುರುವಂಶಲತೆಯನ್ನು ಕಿತ್ತುಹಾಕುವನಲ್ಲ! ಏನುಮಾಡೋಣ. ಏನಾದರೂ ಪ್ರತಿ ಹೇಳಲಿಕ್ಕೆ ಹೋದರೆ ನೀವೆಲ್ಲರೂ ಪಾಂಡವ ಪಕ್ಷಪಾತಿಗಳು. ರಾಜನಾದ ನನ್ನ ಮಾತನ್ನು ನಡಿಸದೆ ಅಲಕ್ಷ್ಯಮಾಡುವಿರಾ? ಎಂದು ನೊಂದುಕೊಳ್ಳುವನು. ಉಪಾಯವಿಲ್ಲ. ಆತನ ಅಪ್ಪಣೆಯಂತೆ ನೀನು ಇಂದ್ರಪ್ರಸ್ಥಕ್ಕೆ ಹೋಗಿ ಅವರನ್ನು ಕರೆದುಕೊಂಡುಬಾ" ಎಂದು ಹೇಳಿದರು.

ಬಳಿಕ ವಿದುರನು ಒಂದು ಶುಭ ಮುಹೂರ್ತವನ್ನು ಗೊತ್ತು ಮಾಡಿ, ಪ್ರಯಾಣಕ್ಕೆ ಬೇಕಾದ ಸನ್ನಾಹಗಳನ್ನು ಸಿದ್ಧಪಡಿಸಿಕೊಂಡು, ಆ ಪಾಂಡವರಿಗೂ, ಅಂತಃಪುರ ಸ್ತ್ರೀಯರಿಗೂ ಕೊಡತಕ್ಕ ವಸ್ತ್ರಾಭರಣಾದಿ ವಸ್ತುಗಳನ್ನು ತೆಗೆದುಕೊಂಡು ಪ್ರಯಾಣಮಾಡಿ, ಹೊರಟು ಜಾಗ್ರತೆಯಲ್ಲಿ ಅವರ ರಾಜಧಾನಿಗೆ ತಲಪಿದನು. ತಮ್ಮ ಹಿತಚಿಂತಕನಾದ ವಿದುರನು ಬರುತ್ತಿರುವನೆಂಬ ವರ್ತಮಾನವನ್ನು ಕೇಳಿ ಯುಧಿಷ್ಠಿರನು ತಮ್ಮಂದಿರೊಂದಿಗೆ ಬಂದು ನಮಸ್ಕರಿಸಿ ಅವನನ್ನು ಅರಮನೆಗೆ ಕರೆದೊಯ್ದನು. ಅಲ್ಲಿ ಯಥಾಯೋಗ್ಯವಾಗಿ ಉಪಚಾರಮಾಡಿ, ಕುಶಲಪ್ರಶ್ನೆಗಳಿಂದ ಸ್ವಲ್ಪಹೊತ್ತು ಕಾಲಹರಣೆ ಮಾಡಿದರು. ವಿದುರನು ತಾನು ತಂದಿದ್ದ ವಸ್ತ್ರಾಭರಣಾದಿಗಳನ್ನು ಅವರವರಿಗೆ ಒಪ್ಪಿಸಿ, ಸ್ನಾನಾಹ್ನಿಕಗಳನ್ನು ಮಾಡಿಕೊಂಡು, ಮೃಷ್ಟಾನ್ನ ಭೋಜನಮಾಡಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡನು. ಬಳಿಕ ಆ ರಾತ್ರಿಯಲ್ಲಿ ಒಂದು ಸಭೆಮಾಡಿಸಿ, ಆಪಾಂಡವರೊಂದಿಗೆ ಇಂತೆಂದನು.

ವಿದು.—ಯುಧಿಷ್ಠಿರಾದಿ ವೀರರಿರಾ, ನಿಮ್ಮ ಹಿರಿಯ ತಂದೆ ಧೃತರಾಷ್ಟ್ರರಾಯನು ಹೇಳಿ ಕಳುಹಿರುವುದೇನಂದರೆ,—“ನೀವೈವರೂ ರಾಜಸೂಯಯಾಗದ ವ್ರತವನ್ನು ಪಾಲಿಸುತ್ತಾ ಏಕ ಭುಕ್ತಗಳನ್ನುಮಾಡಿ ನವೆದಿರಿ. ಬಂದ ಜನರನ್ನು ಆದರಿಸುವುದರಲ್ಲಿ ಬಹು ಕಷ್ಟಪಟ್ಟು ಬಳಲಿರುವಿರಿ. ಈ ಕಷ್ಟ ನಿವಾರಣೆಗಾಗಿ ಕೆಲವು ದಿನಗಳು ವಿನೋದದಿಂದ ಕಾಲಹರಣೆಮಾಡಿದರೆ ನಿಮ್ಮ ಮನಸ್ಸಿಗೆ ನೆಮ್ಮದಿಯಾಗಬಹುದು. ನಮ್ಮವರೂ ಒಂದು ಸಣ್ಣ ಸಭೆಯನ್ನು ಮಾಡಿರುವರು. ನೀವು ಈ ರಾಜಧಾನಿಯನ್ನು ಬಿಟ್ಟುಹೋಗಿ ಹಲವು ವರುಷಗಳಾದುವು. ಒಂದುಸಾರಿ ನೀವೆಲ್ಲರೂ ಬಂದು ಕೆಲವು ದಿನ

ಗಳಿದ್ದು ಮನಸ್ಸಂತೋಷಪಡುವುದಲ್ಲದೆ ನಮ್ಮ ಮನಸ್ಸನ್ನೂ ಸಂತೋಷಪಡಿಸಬೇಕು. ದ್ಯೂತಾದಿವಿನೋದಕ್ರಿಯೆಗಳಿಂದ ಸುಖವಾಗಿ ಕಾಲಕಳೆಯುತ್ತಿರಬಹುದು.'' ಇದೇ ರಾಜನ ಸಂದೇಶವು.

ಯುಧಿ.—ಹಿರಿಯನಾದ ಆ ಧೃತರಾಷ್ಟ್ರನ ಆಜ್ಞೆಯು ಮಹಾಪ್ರಸಾದವೆಂದು ತಿಳಿಯುವೆನು. ಪೂಜ್ಯರಾದ ವೇದವ್ಯಾಸಮಹರ್ಷಿಗಳು ನೀವು ಎಲ್ಲಿಗೂ ಹೋಗಕೂಡದೆಂತಲೂ, ದ್ಯೂತಾದಿವಿನೋದಗಳಲ್ಲಿ ಸೇರಬಾರದೆಂತಲೂ ಆಜ್ಞಾಪಿಸಿರುವರು. ನನಗೆ ಅವರು ಬೇರೆಅಲ್ಲ. ನೀವು ಬೇರೆ ಅಲ್ಲ. ನಿಮ್ಮ ಅಭಿಮತದಂತೆಯೂ ಹಿರಿಯರ ಅಪ್ಪಣೆಯಂತೆಯೂ ನಡೆಯುವುದು ನನ್ನ ಧರ್ಮವು.

ವಿದು.—ರಾಯನೇ, ನಿನ್ನ ಸೌಜನ್ಯವು ಶ್ಲಾಘ್ಯವಾದುದು. ಧೃತರಾಷ್ಟ್ರರಾಯನ ಮನಸ್ಸು ಸರಳವಾಗಿಲ್ಲ. ಆತನ ಮಕ್ಕಳಂತು ನಿಮ್ಮ ಏಳಿಗೆಯನ್ನು ಸೈರಿಸದೆ ನಿಮ್ಮ ಕೇಡನ್ನೇ ಹಾರೈಸುತ್ತಿರುವರು. ನಿಮ್ಮನ್ನು ನಂಬಿಸಿ ಕೆಡಿಸಬೇಕೆಂಬುದು ಅವರ ಉದ್ದೇಶವೆಂದು ತೋರುತ್ತದೆ. ಭೀಷ್ಮದ್ರೋಣರು ಈ ಕಾರ್ಯವು ಸಲ್ಲದೆಂದು ನಿಷೇಧಿಸುತ್ತಿರುವರು. ಉಳಿದ ಜನರು ತಟಸ್ಥರಾಗಿ ನಿಂತಿರುವರು. ಶಕುನಿ ಕರ್ಣ ಸೈಂಧವಾದಿಗಳು ಮಾಯಾವಿಗಳು. ಈ ವೇಳೆಯಲ್ಲಿ ಧೃತರಾಷ್ಟ್ರನಿಗೆ ನಾನು ಮಾಡಿದ ಹಿತೋಪದೇಶವು ವ್ಯರ್ಥವಾಯಿತು.

ಯುಧಿ.—ಆರ್ಯನೇ, ಹಿರಿಯನಾದ ಧೃತರಾಷ್ಟ್ರನು ನಮ್ಮನ್ನು ಕರೆಯ ಕಳುಹಿರುವನು. ಆತನನ್ನು ನಮ್ಮ ತಂದೆಯಾದ ಪಾಂಡುರಾಯನಂತೆಯೇ ನಾವು ಭಾವಿಸಿದ್ದೇವೆ. ಅವನಲ್ಲಿ ನಮಗೆ ಸ್ವಲ್ಪವೂ ಭೇದಬುದ್ಧಿ ಇಲ್ಲವು. ಆತನ ಆಜ್ಞೆಯಂತೆ ನಡೆಯುವುದಕ್ಕೆ

ಸಿದ್ಧರಾಗಿಯೇ ಇದ್ದೇವೆ. ಇದರಿಂದ ಹಿತವೇ ಆಗಲಿ, ಅಹಿತವೇ ಆಗಲಿ ಮಹಾಪ್ರಸಾದವೆಂದು ತಿಳಿದಿದ್ದೇವೆ.

ವಿದು.—ಎಲೈ ಯುಧಿಷ್ಠಿರನೇ, ನಿನ್ನಮಾತು ಧರ್ಮಯುಕ್ತ ವಾದುದು. ಆದರೂ ರಾಜರಿಗೆ ಜೂಜು, ಬೇಟೆ, ಕಠಿನವಾಕ್ಯ, ಮದ್ಯಪಾನ, ಸ್ತ್ರೀವ್ಯಾಮೋಹ, ಆಜ್ಞೋಲ್ಲಂಘನೆ, ಸಿಂದೆ ಮುಂ ತಾದ ವ್ಯಸನಗಳು ಅಪಾಯಕರವಾದುವು. ಕೌರವರಾದರೋ ಕಪಟಿಗಳು, ಜೂಜಿನ ನೆವದಿಂದ ನಿಮ್ಮನ್ನುಕೆಡಿಸುವರು. ಶಕುನಿಯು ಜೂಜಿನ ಜಾಣನು, ಸೈಂಧವನು ಬಹುನೀಚನು. ಕರ್ಣನು ದೌರ್ಜನ್ಯ ಯಾಗಕ್ಕೆ ದೀಕ್ಷಾಗುರುವು. ಭೀಷ್ಮದ್ರೋಣಾದಿಗಳ ಮಾತನ್ನು ಆ ಸಭೆಯಲ್ಲಿ ಕೇಳತಕ್ಕವರೇ ಇಲ್ಲ. ಇಂತಹ ಜನವಿರುವಕಡೆ ನೀವು ಹೇಗೆ ಸುರಕ್ಷಿತರಾಗಿರಬಲ್ಲಿರೋ ನಾನು ಕಾಣೆನು.

ಯುಧಿ.—ಚಿಕ್ಕಪ್ಪ, ಶಕುನಿ ಕರ್ಣ ದುರ್ಯೋಧನಾದಿಗಳ ಕು ತಂತ್ರಗಳು ಲೋಕ ವಿಖ್ಯಾತವಾಗಿಯೇ ಇವೆ. ಆ ಕೌರವನ ಸಭೆ ಯಲ್ಲಿ ಭೀಷ್ಮಾದಿಗಳ ಸರಳವಾಕ್ಯಗಳಿಗೆ ಪುರಸ್ಕಾರವಿಲ್ಲವೆಂಬುದನ್ನು ಬಲ್ಲೆನು. ಅಯ್ಯನಾದ ಧೃತರಾಷ್ಟ್ರನು ಕನ್ನಡಿಯಲ್ಲಿ ಜನರ ಮುಖಗಳೂ ಪ್ರತಿಬಿಂಬಿಸುವಂತೆ ಎದುರಿನಲ್ಲಿದ್ದವರಮಾತಿಗೆ ಒಳ ಪಟ್ಟು ನಡೆಯುತ್ತಿರುವನು. ಹೇಗೆಯೇ ಆಗಲಿ, ಜೂಜಿಗೂ ಯುದ್ಧಕ್ಕೂ ಕರೆದರೆ ಬರಲಾರೆನೆಂಬುದು ಕ್ಷತ್ರಧರ್ಮವಲ್ಲ. ಧೃತ ರಾಷ್ಟ್ರನೇ ನಮ್ಮ ಪಾಲಕನಾಗಿರುವುದರಿಂದಲೂ ನಿನ್ನ ಮೂಲ ಕವೇ ಆಮಂತ್ರಣ ಕಳುಹಿರುವುದರಿಂದಲೂ ಆತನ ಅಪ್ಪಣೆಯನ್ನು ಗೌರವಿಸುವುದಕ್ಕಾಗಿ ನಾನು ಹಸ್ತಿನಾಪುರಕ್ಕೆ ಬರುವೆನು.

ವಿದು.—ಎಲೈ ಧರ್ಮಪುತ್ರನೇ, ದುಡುಕಬೇಡ. ನಿನ್ನ ಮಂತ್ರಿ, ಪ್ರಧಾನಿ ಮುಂತಾದ ಅಧಿಕಾರಿಗಳನ್ನು ಕರೆಯಿಸಿ ಸಭೆಮಾಡಿ

ಅವರ ಅಭಿಪ್ರಾಯವನ್ನು ತಿಳಿ. ಭೀಮಾದಿ ಸಹೋದರರು ಏನು ಹೇಳುವರೋ ತಿಳಿದುಕೊಂಡು, ಮುಂದಿನ ಕರ್ತವ್ಯವನ್ನು ನಿಶ್ಚಯಿಸು.

ಯುಧಿ.—ಎಲೈ ಅರ್ಜುನನೇ, ನಿನ್ನ ಆಜ್ಞೆಯಂತೆ ನಡೆಯುವುದೇ ಧರ್ಮವು. ನಿನ್ನ ಇಷ್ಟದಂತೆ ಮಾಡುವೆನು.

ಈಪ್ರಕಾರ ಹೇಳಿ, ಯುಧಿಷ್ಠಿರನು ಮರುದಿನವೇ ಮಿತವಾದ ಸಭೆ ಕೂಡಿಸಿ ಭೀಮಾದಿಗಳನ್ನು ನೋಡಿ ಇಂತೆಂದನು.

ಯುಧಿ.—ತಮ್ಮಂದಿರಾ, ಧೃತರಾಷ್ಟ್ರನ ಅಪ್ಪಣೆಯಂತೆ ನಾವು ಹಸ್ತಿನಾಪುರಕ್ಕೆ ಹೋಗಿ ಬರುವುದು ನಿಮ್ಮೆಲ್ಲರಿಗೂ ಸಮ್ಮತವಾಗಿದೆಯೆ? ಅಲ್ಲಿ ಧೂರ್ತರ ಬಳಗವೇ ತುಂಬಿರುವುದು. ಭೀಷ್ಮ ದ್ರೋಣಾದಿ ಹಿರಿಯರು ಪರಾಕ್ರಮಿಗಳಾಗಿದ್ದರೂ ಅವರನ್ನು ರಹಸ್ಯ ಯೋಚನೆಗಳಿಗೆ ಕರೆಯುವುದೇ ಇಲ್ಲವಂತೆ. ದುರಾತ್ಮರಾದ ಕೌರವರು ನಮ್ಮಲ್ಲಿ ಕಲಹಿಸಲು ಕಾರಣವೇನೂ ತೋರುವುದಿಲ್ಲ. ಆದರೂ ಸುಖ ದ್ಯೂತಾದಿ ವಿನೋದಗಳಿಂದ ಇರಬೇಕೆಂದು ಹೇಳಿ ಕಳುಹಿಸುವರು. ಈವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?

ಭೀಮಾದಿಗಳು.—ಅಣ್ಣಯ್ಯಾ, ನೆರಳು ಶರೀರವನ್ನಗಲಿ ಪ್ರತ್ಯೇಕವಾಗಿರುವುದೆ? ಒಡಹುಟ್ಟಿದವರಾದ ನಾವೆಲ್ಲರೂ ಸ್ವಾಭಿಮಾನವಿಲ್ಲದೆ ನಿಮ್ಮ ಚಿತ್ತಾನುವರ್ತಿಗಳಾಗಿಯೇ ನಡೆದುಕೊಳ್ಳುವುದೇ ಧರ್ಮವೆಂದು ತಿಳಿದಿರುವೆವು. ನೀನು ಸಂತೋಷಿಸಿದರೆ ನಾವೂ ಸಂತೋಷಿಸುವೆವು. ನೀನು ನೊಂದರೆ ನಾವೂ ದುಃಖಿಸುವೆವು. ನಮಗೆ ಸ್ವಲ್ಪವೂ ಸ್ವಾತಂತ್ರ್ಯವಿಲ್ಲವು. ಈ ವಿಷಯದಲ್ಲಿ ಕೂಡ ನಿಮ್ಮ ಅಪ್ಪಣೆಯಂತೆ ನಡೆಯಲು ಸಿದ್ಧರಾಗಿರುವೆವು.

ಇದನ್ನು ಕೇಳಿ ಯುಧಿಷ್ಠಿರನು ಅವರನ್ನು ನೋಡಿ "ಧೃತ ರಾಷ್ಟ್ರನು ನಮ್ಮನ್ನು ಕರೆಯಿಸಿರುವನು. ಕರೆಯಲಿಕ್ಕೆ ಬಂದಿರುವ ವಿದುರನು ನಮ್ಮ ಹಿತಚಿಂತಕನೇ ಆಗಿರುವನು. ಭೀಷ್ಮದ್ರೋ ಣಾದಿಗಳು ನಮ್ಮ ಪಕ್ಷದವರಾಗಿಯೇ ಇರುವರು. ಕೌರವಾದಿಗಳ ಮಾತಂತಿರಲಿ, ನೀವುಗಳು ನನ್ನ ಬೆಂಬಲವಾಗಿರುವುದರಿಂದ ನಾನು ಯಾವುದಕ್ಕೂ ಹೆದರೆನು. ಹಿರಿಯಯ್ಯನ ಆಜ್ಞೆಯಂತೆ ಪ್ರಯಾಣ ಹೊರಡಬೇಕೆಂದು ನಿಶ್ಚಯಿಸಿದ್ದೇನೆ " ಎಂದನು,

ಕುಂತಿಯು ವಿದುರನನ್ನು ನೋಡಿ, "ಎಲೈ ಪ್ರಾಜ್ಞನೇ, ಯುಧಿಷ್ಠಿರನು ಸತ್ಯಪ್ರತಿಜ್ಞನು. ಕರೆಯಲಿಕ್ಕೆ ಬಂದಿರುವ ನೀನು ನಮ್ಮ ಹಿತಚಿಂತಕನು. ಬೀಳುತ್ತಿರುವ ಮನುಷ್ಯನನ್ನು ಎರಡು ಕೈಗಳೂ ತಡೆದು ರಕ್ಷಿಸುವಂತೆ ಶ್ರೀಕೃಷ್ಣನೂ ನೀನೂ ಇವರಿಗೆ ಕೈಗಳಹಾಗೆ ರಕ್ಷಿಸುತ್ತಿರುವುದರಿಂದ ಈ ಪಾಂಡವರಿಗೆ ಯಾವ ಅಪಾಯವೂ ಬರಲಾರದೆಂದು ತಿಳಿಯುತ್ತೇನೆ. ಇಷ್ಟರಮೇಲೆ ದೈವಾಜ್ಞೆ ಇದ್ದಂತೆ ಆಗಲಿ. ಎಲ್ಲರೂ ಹೊರಡೋಣ " ನಡೆಯಿರಿ ಎಂದಳು.

ಮರುದಿನವೇ ಪ್ರಯಾಣಕ್ಕೆ ಲಗ್ನವಿಡಲ್ಪಟ್ಟಿತು. ಸಹೋದರರೂ, ದ್ರೌಪದಿ ಮೊದಲಾದ ರಾಣಿವಾಸದವರೂ ತಮ್ಮ ಪರಿಜನರೊಂದಿಗೆ ಹೊರಟರು. ಚತುರಂಗ ಸೈನ್ಯವು ಸಿದ್ಧವಾಯಿತು. ವಸ್ತ್ರಾಭರಣಾದಿ ಸಮಸ್ತ ವಸ್ತುಗಳನ್ನೂ ತೆಗೆಯಿಸಿಕೊಂಡು ಪ್ರಯಾಣ ಮಾಡಿದರು. 'ನಿಯತಿಃಕೇನಲಂಘ್ಯತೇ' ಎಂಬಂತೆ ವಿಧಿವಶದಿಂದ ಬರತಕ್ಕುದನ್ನು ತಪ್ಪಿಸುವವರುಯಾರು?

# ಒಂಭತ್ತನೆಯ ಸಂಧಿ.

ಸೂ|| ಯುಧಿಷ್ಠಿರನು ಪಗಡೆಯ ಆಟದಲ್ಲಿ ಸಕಲೈಶ್ವರ್ಯವನ್ನೂ, ಸಹೋದರರನ್ನೂ, ತನ್ನನ್ನೂ ಸೋತಮೇಲೆ ಪತಿವ್ರತೆಯಾದ ದ್ರೌಪದಿಯನ್ನೂ ಸೋತುಬಿಟ್ಟನು.

ವಿದುರನ ಅನುಮತಿಯಿಂದ ಯುಧಿಷ್ಠಿರನು ಮಿತ್ರಪರಿವಾರದೊಡನೆ ಸಹೋದರರನ್ನೂ, ಧರ್ಮಪತ್ನಿಯಾದ ದ್ರೌಪದಿಯನ್ನೂ ತಾಯಿಯಾದ ಕುಂತಿಯನ್ನೂ, ಪ್ರತಿವಿಂದ್ಯಾದಿ ಪುತ್ರರನ್ನೂ ಕರೆದುಕೊಂಡು ತನ್ನ ರಾಜಧಾನಿಯಿಂದ ಹಸ್ತಿನಾಪುರಕ್ಕೆ ಪ್ರಯಾಣಮಾಡಿದನು. ದಾರಿಯಲ್ಲಿ ಅವನಿಗೆ ಹಲವು ಅಪಶಕುನಗಳಾದುವು. ಶನಿ ಗುರು ಕುಜ ಸೂರ್ಯ ಗ್ರಹಗಳು ಆತನ ಜಾತಕದಂತೆ ಅಷ್ಟಮಸ್ಥಾನದಲ್ಲಿದ್ದುವು. ಆಗ ಪ್ರಾಜ್ಞರಾದ ಹಿರಿಯರು ಯುಧಿಷ್ಠಿರನನ್ನು ನೋಡಿ, "ಎಲೈ ರಾಯನೇ. ಕಾಲಗತಿಯು ನಿನ್ನ ವಿಷಯದಲ್ಲಿ ವಿಷಮವಾಗಿ ಕಾಣುತ್ತಿದೆ. ಈ ವೇಳೆಯಲ್ಲಿ ನೀನು ಪರರಾಜ್ಯಕ್ಕೆ ಹೊರಡುವುದು ಹಿತವಾಗಿ ಕಾಣುವುದಿಲ್ಲ. ಹಿಂದಿರುಗಿ ಪಟ್ಟಣಕ್ಕೆ ಬರುವುದು ಲೇಸು" ಎಂದರು. ವಿಧಿವಿಲಾಸವು ಇಂತಹುದೆಂದು ತಿಳಿಯುವುದು ಕಷ್ಟವು. ಯಾವ ಸೂಚನೆಗಳು ಮುಂದಾಳಿ ಎಚ್ಚರಕೊಟ್ಟರೂ, ಎಂತಹ ಆಪ್ತರು ಹಿತವಚನಗಳನ್ನು ಹೇಳಿದರೂ "ಬುದ್ಧಿಃಕರ್ಮಾನುಸಾರಿಣೀ" ಎಂಬಂತೆ ತನ್ನ ಕರ್ಮಾನುಗುಣವಾದ ಬುದ್ಧಿಯು ಅದೃಷ್ಟಾನುಸಾರವಾಗಿ ಸೆಳೆಯುತ್ತಿರುವುದು. ಸ್ವರ್ಣಮೃಗವು ರಾಕ್ಷಸಮಾಯೆಯೇ ಹೊರತು ಸಹಜವಾದುದಲ್ಲವೆಂದು ಲಕ್ಷ್ಮಣನು ಹೇಳಿದಮಾತು ಶ್ರೀರಾಮನಿಗೆ ರುಚಿಸಲಿಲ್ಲ. ಶೋಕಮಾತೆಯಾದ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿ ಶರಣಾ

ಗತನಾಗು. ಆತನಲ್ಲಿ ವಿರೋಧಿಸಿ ಕೆಡಬೇಡವೆಂದು ಹೇಳಿದ ಮಂಡೋದರಿಯ ಹಿತವಾಕ್ಯಗಳು ರಾವಣನ ಮನಸ್ಸಿಗೆ ಹತ್ತಲಿಲ್ಲ. ನಿನ್ನಿಂದಲೇ ಪರಾಜಿತನಾದ ಸುಗ್ರೀವನು ಮರಳಿ ನಿನ್ನಮೇಲೆ ಕಾದಲಿಕ್ಕೆ ಬಂದಿರುವುದರಿಂದ ಆತನಿಗೆ ಪ್ರಬಲವಾದ ಸಹಾಯಸಂಪತ್ತಿಯು ದೊರೆತಿರುವುದು. ಈ ವೇಳೆಯಲ್ಲಿ ಕಾಳಗಕ್ಕೆ ಹೊರಡಬೇಡವೆಂದು ತಡೆದ ತಾರಾದೇವಿಯ ಉಪದೇಶವು ವಾಲಿಯ ಮನಸ್ಸನ್ನು ತಿರುಗಿಸದೆ ಹೋಯಿತು. ಇಂತಹ ನಿದರ್ಶನಗಳು ಬೇಕಾದಷ್ಟು ಸಿಕ್ಕುವುವು. ಯುಧಿಷ್ಠಿರನು ಆವೇಳೆಯಲ್ಲಿ ಆಪ್ತರವಾಕ್ಯಗಳನ್ನೂ ಶಕುನಗಳನ್ನೂ ಗಮನಿಸದಂತೆ ಆತನ ವಿಧಿಯು ಬಲವತ್ತರವಾಗಿ ಪ್ರೇರಿಸಿತು. ಆತನು ಪ್ರಯಾಣವಮಾಡಿದನು.

ಪಾಂಡವರು ಬರುತ್ತಿರುವರೆಂಬ ಸುದ್ದಿಯು ಧೃತರಾಷ್ಟ್ರನಿಗೆ ಮುಟ್ಟಿತು. ಕೂಡಲೇ ಆತನು ಪಟ್ಟಣವನ್ನು ಶೃಂಗಾರವಾಗಿ ಅಲಂಕರಿಸುವುದಕ್ಕೂ, ಭೀಷ್ಮದ್ರೋಣರು ರಾಜಮರ್ಯಾದೆಗಳಿಂದ ಹೋಗಿ ಅವರನ್ನು ಎದುರುಗೊಂಡು ಕರೆದುತರುವುದಕ್ಕೂ ತಕ್ಕ ಏರ್ಪಾಡುಗಳನ್ನು ಮಾಡಿದನು. ಸುವಾಸಿನಿಯರು ರಾಜಕುಮಾರರನ್ನು ಎದುರುಗೊಳ್ಳಲು ಪೂರ್ಣಕಲಶಗಳನ್ನೂ, ಕನ್ನಡಿಗಳನ್ನೂ, ಆರತಿಗಳನ್ನೂ, ತೆಗೆದುಕೊಂಡು ಹೊರಟರು. ಪಾಂಡವರು ಸುವರ್ಣಮಯವಾದ ಅಂಬಾರಿಯುಳ್ಳ ಆನೆಗಳಮೇಲೆಯೂ, ರಾಣಿವಾಸದವರು ಪಲ್ಲಕ್ಕಿಗಳಲ್ಲಿಯೂ ಕುಳಿತು ಹಸ್ತಿನಾಪುರದೊಳಕ್ಕೆ ಪ್ರವೇಶಮಾಡಿ ರಾಜವೀಧಿಗಳಲ್ಲಿ ಬರುತ್ತಿದ್ದರು. ಆಗ ಭೇರೀ ಮೃದಂಗಾದಿ ಮಂಗಳವಾದ್ಯಗಳು ಘೋರ್ಗರೆಯುತ್ತಿದ್ದುವು. ಪೌರನಾರಿಯರು ಸೌಧಗಳ ಮೇಲೆ ನಿಂತು, ಆ ರಾಜಕುಮಾರರ ದರ್ಶನಮಾಡಿ ಅವರಮೇಲೆಲ್ಲಾ ಲಾಜಾಕ್ಷತೆಗಳನ್ನೂ ಮುತ್ತುಗಳನ್ನೂ

ಬಗೆಬಗೆಯ ಪುಷ್ಪಗಳನ್ನೂ ಎರಚುತ್ತಾ ಬಂದರು. ಛತ್ರ ಚಾಮರ ಸಾರೇಪಾನ ಮೊದಲಾದ ಬಿರುದುಗಳನ್ನು ಹಿಡಿದಿರುವ ಆಳುಗಳೂ, ರಾಜಕುಮಾರರ ದರ್ಶನ ಮಾಡಲಿಕ್ಕೆ ನಾನುಮುಂದು ತಾನು ಮುಂದೆಂದು ನುಗ್ಗುತ್ತಿರುವ ಜನರೂ, ರಾಜಮರ್ಯಾದಾರ್ಥವಾಗಿ ನೆರೆದಿರುವ ಚತುರಂಗಸೈನ್ಯವೂ ರಾಜವೀಧಿಗಳಲ್ಲೆಲ್ಲಾ ಕಿಕ್ಕಿರಿದು ನಿಂತಿದ್ದುದರಿಂದ ಸುಜ್ಜಕ್ಕಿಯನ್ನು ಚೆಲ್ಲಲಿಕ್ಕೂ ಸ್ಥಳವಿಲ್ಲದಂತೆಯೂ ವಾಯು ಸಂಚಾರಕ್ಕೆ ಅವಕಾಶವಿಲ್ಲದಂತೆಯೂ ಆಗಿದ್ದಿತು.

ಹಸ್ತಿನಾಪುರದಲ್ಲಿ ಪಾಂಡವರು ಮೊದಲು ಧೃತರಾಷ್ಟ್ರರಾಯನ ಅರಮನೆಗೆ ಬಂದು ಇಳಿದರು. ಯುಧಿಷ್ಠಿರಾದಿಗಳು ಪ್ರಜ್ಞಾಚಕ್ಷುವಾದ ಆ ರಾಯನಿಗೆ ನಮಸ್ಕರಿಸಲು ಆತನು ಅವರನ್ನೆಲ್ಲಾ ಪ್ರೇಮ ಪುರಸ್ಸರವಾಗಿ ಹರಸಿ, ಕುಶಲಪ್ರಶ್ನೆಗಳಿಂದ ಮನಸ್ಸಂತೋಷಗೊಳಿಸಿದನು. ಬಳಿಕ ಅವರು ಭೀಷ್ಮದ್ರೋಣ, ಕೃಪಾಶ್ವತ್ಥಾಮ ಮುಂತಾದ ಗುರು ಹಿರಿಯರಿಗೆಲ್ಲಾ ವಂದಿಸಿ ಯಥಾಯೋಗ್ಯವಾಗಿ ಮನ್ನಣೆಯನ್ನು ಪಡೆದರು. ದುರ್ಯೋಧನ ಕರ್ಣ ಶಕುನಿ ಜಯದ್ರಥಾದಿಗಳೂ, ರಾಜಾಸ್ಥಾನದ ಮುಖ್ಯಾಧಿಕಾರಿಗಳೂ, ಪ್ರಮುಖರಾದ ಪುರಜನರೂ ಬಂದು ಯುಧಿಷ್ಠಿರಾದಿಗಳನ್ನು ಕಂಡು, ತಕ್ಕ ಮರ್ಯಾದೆಗಳನ್ನು ಮಾಡಿ ಸಂತೋಷಪಟ್ಟರು. ಬಳಿಕಲಾ ಪಾಂಡವರು ದ್ರೌಪದೀಸಹಿತರಾಗಿ ಗಾಂಧಾರಿಯ ಅರಮನೆಗೆ ಹೋಗಿ, ಭಾನುಮತಿ ಮೊದಲಾದ ನೂರುಮಂದಿ ಸೊಸೆಯರೊಂದಿಗೆ ಕೂಡಿ ನಕ್ಷತ್ರ ಪರಿವೃತಳಾದ ರೋಹಿಣಿಯಂತೆ ಒಪ್ಪುತ್ತಿರುವ ಆ ರಾಜಮಹಿಷಿಯನ್ನು ಕಂಡು, ಆಕೆಯ ಪಾದಗಳಿಗೆ ನಮಸ್ಕರಿಸಲು ಅವಳು ಎಲ್ಲರನ್ನು ಪ್ರತ್ಯೇಕವಾಗಿ ಹರಸಿ, ಕುಶಲಪ್ರಶ್ನೆಗಳಿಂದ ಮನ್ನಿಸಿದಳು. ಹೀಗೆ ಬಹು ಮರ್ಯಾದೆಯಿಂದ ಬಂಧು ಜನರ ಸತ್ಕಾರ

ವನ್ನು ಪಡೆದ ಪಾಂಡವರು ತಮಗಾಗಿ ಏರ್ಪಡಿಸಿದ್ದ ಅರಮನೆಯಲ್ಲಿ ಇಳಿದರು. ಬಳಿಕ ಅವರೆಲ್ಲರೂ ವ್ಯಾಯಾಮಪೂರ್ವಕವಾಗಿ ನಿರ್ಮಲೋದಕದಲ್ಲಿ ಸ್ನಾನಮಾಡಿ, ಸಂಧ್ಯಾವಂದನೆ, ದೇವತಾರ್ಚನೆ, ಪಾರಾಯಣ ಮುಂತಾದ ನಿತ್ಯಕರ್ಮಗಳನ್ನು ನೆರವೇರಿಸಿ, ಇಷ್ಟಮಿತ್ರರೊಂದಿಗೆ ಮೃಷ್ಟಾನ್ನಭೋಜನಮಾಡಿ ತೃಪ್ತರಾದರು. ತರುವಾಯ ದಿವ್ಯಗಂಧಮಾಲ್ಯಾದಿಗಳಿಂದ ಅಲಂಕೃತರಾಗಿ ಕರ್ಪೂರ ಸಹಿತವಾದ ತಾಂಬೂಲವನ್ನು ಸೇವಿಸುತ್ತಾ ಸುಖ ಸತ್ಕಥಾ ವಿನೋದಗಳಿಂದ ಆ ದಿನವೆಲ್ಲಾ ಕಳೆದು, ಆ ರಾತ್ರಿಯಲ್ಲಿ ಭೋಜನಾನಂತರ ವಿಶ್ರಮಿಸಿಕೊಂಡರು.

ಅಂದಿನ ರಾತ್ರಿ ಯುಧಿಷ್ಠಿರನ ಸ್ವಪ್ನದಲ್ಲಿ ತನ್ನ ಅರಮನೆಯ ಕಲಶವು ಮುರಿದು ಬಿದ್ದಂತೆಯೂ, ಸಹೋದರ ಸಹಿತನಾದ ತಾನು ಅರಣ್ಯದಲ್ಲಿ ಅಲೆಯುತ್ತಿದ್ದಂತೆಯೂ ಕಾಣಿಸಿತು. ಮರುದಿನದುದಯದಲ್ಲಿ ಆತನು ಪುರೋಹಿತನಾದ ಧೌಮ್ಯನನ್ನು ನೋಡಿ ಕನಸಿನ “ವೃತ್ತಾಂತವನ್ನು ತಿಳಿಸಿದನು. ಆತನು ರಾಜನನ್ನು ನೋಡಿ ಅಯ್ಯಾ! ಈ ಸ್ವಪ್ನವು ನಿಮಗೆ ಹಿತವಾದುದಲ್ಲ. ಶ್ರೀಕೃಷ್ಣಸ್ಮರಣೆಯಿಂದ ಅರಿಷ್ಟಗಳೆಲ್ಲಾ ಪರಿಹರವಾಗುವುವು. ಭಕ್ತಿಯಿಂದ ಆತನನ್ನು ಧ್ಯಾನಿಸು, ಚಿಂತಿಸಬೇಡ” ಎಂದು ಹೇಳಿ ಮನಸ್ಸಮಾಧಾನಗೊಳಿಸಿದನು.

ನೂತನ ಸಭಾಮಂಟಪದ ಪ್ರವೇಶ ಮಹೋತ್ಸವಕ್ಕೆ ಧೃತರಾಷ್ಟ್ರನು ತಕ್ಕ ಏರ್ಪಾಡುಗಳನ್ನೆಲ್ಲಾ ಮಾಡಿದ್ದನು. ಶುಭಲಗ್ನದಲ್ಲಿ ತಕ್ಕ ಶಾಂತಿ ಬಲಿ ಕರ್ಮಾದಿಗಳೊಂದಿಗೆ ವಿಧಿವತ್ತಾಗಿ ಉತ್ಸವವು ನೆರವೇರಿತು. ಸಕಲಜನರಿಗೂ ಉತ್ತಮವಾದ ಸಂತರ್ಪಣೆಯೂ, ಭೂರಿದಕ್ಷಿಣೆಯೂ, ದಾನಮಾನಾದಿ ಸತ್ಕಾರಗಳೂ ನಡೆದುವು. ಆ ಪಟ್ಟಣದಲ್ಲಿ ಎಲ್ಲಿ ನೋಡಿದರೂ ಒಂದೆರಡು ವಾರಗಳತನಕ ಸಂತೋಷೋತ್ಸವಗಳೇ ಜರುಗುತ್ತಿದ್ದುವು.

ಹೊಸ ಸಭಾ ಮಂಟಪದಲ್ಲಿಯೇ ನಿತ್ಯವೂ ದರಬಾರುಗಳು ನಡೆಯುತ್ತಿದ್ದುವು. ಅಲ್ಲಿ ವಿಧವಿಧವಾದ ಆಟಗಳೂ, ವಾದ್ಯಗಳೂ, ಸಂಗೀತದ ಕಚ್ಚೇರಿಗಳೂ, ಜಟ್ಟೀಕಾಳಗಗಳೂ, ಪೌರಾಣಿಕ ಕಥೆಗಳೂ, ತರ್ಕಶಾಸ್ತ್ರದ ವಾಕ್ಯಾರ್ಥಗಳೂ, ನಡೆಯುತ್ತಲೇ ಇದ್ದುವು. ಒಂದು ದಿನ ದುರ್ಯೋಧನನು ಶಕುನಿಯ ಸಹಾಯದಿಂದ ತನ್ನ ಉದ್ದೇಶಗಳನ್ನು ನೆರವೇರಿಸಿಕೊಳ್ಳಬೇಕೆಂದು ನಿಶ್ಚಯಿಸಿ ಆದಿನ ವಿಶೇಷ ಸಭೆಯನ್ನು ಕೂಡಿಸಿದ್ದನು. ಭೀಷ್ಮದ್ರೋಣಾದಿ ಗುರುಜನರೂ, ಸಾಮಂತನರಪತಿಗಳೂ, ಮುಖ್ಯಾಧಿಕಾರಿಗಳೂ, ಪ್ರಮುಖರಾದ ಜನರೂ ಬಂದು ಸೇರಿದ್ದರು. ಕುರುಪತಿಯಾದ ದುರ್ಯೋಧನನು ಯುಧಿಷ್ಠಿರನ ಬಳಿಗೆ ತಾನೇ ಹೋಗಿ, ನಮಸ್ಕರಿಸಿ "ಅಣ್ಣಯ್ಯಾ, ನಿಮ್ಮ ಇಂದ್ರಪ್ರಸ್ಥದ ಸಭೆಯು ದೇವನಿರ್ಮಿತವಾದುದು. ಅಷ್ಟು ವಿಚಿತ್ರವಾದ ಸಭೆಯು ಈ ಲೋಕದಲ್ಲಿಯೇ ಇಲ್ಲವೆಂದು ಹೇಳಬಹುದು. ನಾನು ಯಾಗಕ್ಕೆ ಬಂದಿದ್ದಾಗ ಅದನ್ನು ನೋಡಿಕೊಂಡು ಬಂದೆನಷ್ಟೆ! ಅದನ್ನೇ ಮಾದರಿಯಾಗಿಟ್ಟುಕೊಂಡು ಈ ಸಭಾ ಮಂಟಪವನ್ನು ನಿರ್ಮಿಸಿದೆನು. ನೀವೂ ದಯೆಯಿಟ್ಟು ಬಂದು ನಮ್ಮ ಮನಸ್ಸಂತೋಷಪಡಿಸುತ್ತಿರುವಿರಿ. ಈ ನಮ್ಮ ಸಭೆಯನ್ನು ಇನ್ನೂ ಚೆನ್ನಾಗಿ ಕಟಾಕ್ಷಿಸಿ, ಇದರ ಗುಣದೋಷಗಳನ್ನು ತಿಳಿಸಬೇಕೆಂದು ಅಪೇಕ್ಷಿಸುತ್ತೇನೆ" ಎಂದನು ನಿಷ್ಕಪಟಿಯಾದ ಯುಧಿಷ್ಠಿರನು ತನ್ನ ಶೀಲಸ್ವಭಾವಗಳಿಗೆ ಅನುಗುಣವಾಗಿ, ಆತನ ವಿನಯವಾಕ್ಯಗಳೆಲ್ಲಾ ನಿಜವಾದುವುಗಳೆಂದು ನಂಬಿ ತನ್ನ ತಮ್ಮಂದಿರೊಂದಿಗೆ ಆ ಸಭಾಮಂಟಪವನ್ನು ನೋಡುವುದಕ್ಕೆ ಹೊರಟನು. ಆ ವೇಳೆಯಲ್ಲಿ ಯುಧಿಷ್ಠಿರನಿಗೆ ಎಡಗಣ್ಣೂ ದ್ರೌಪದಿಗೆ ಬಲಗಣ್ಣೂ ಹಾರಿದುವು. ಆತನು ಆ ವೇಳೆಯಲ್ಲಿ ಶ್ರೀಕೃಷ್ಣಸ್ಮರಣೆಮಾಡಿ,

ಆ ಅಪಶಕುನವನ್ನು ಲಕ್ಷ್ಯಮಾಡದೆ ಹೊರಟನು. ದುರ್ಯೋಧನನು ಒಂದುಕಡೆಯಿಂದ ಹೊರಟು ಆತನಿಗೆ ಆ ಸಭೆಯ ವಿಚಿತ್ರಗಳನ್ನೆಲ್ಲಾ ಒಂದೊಂದಾಗಿ ತೋರಿಸುತ್ತಾ ಬಂದನು. ಒಂದು ಸ್ಥಳದಲ್ಲಿ ಶಕುನಿ, ದುಶ್ಶಾಸನ, ದುರ್ಮರ್ಷಣ, ಚಿತ್ರಸೇನ, ಮುಂತಾದವರು ಸುಂದರವಾದ ಪಗಡೆಯ ಕಾಯಿಗಳನ್ನೂ ದಾಳಗಳನ್ನೂ ಇಟ್ಟುಕೊಂಡು, ಆಟವಾಡುತ್ತಿದ್ದರು. ದುರ್ಯೋಧನನ ಸಂಗಡ ಆ ಪ್ರದೇಶದಲ್ಲಿ ಹೋಗುತ್ತಿದ್ದ ಯುಧಿಷ್ಠಿರನನ್ನು ನೋಡಿ, ಮಾಯಾವಿಯಾದ ಶಕುನಿಯು ಇಂತೆಂದನು.

ಶಕುನಿ.—ಎಲೈ ಯುಧಿಷ್ಠಿರನೇ, ಈ ಆಟದ ಚಮತ್ಕಾರ ನೋಡಿದೆಯಾ? ಅಪರೂಪವಾಗಿ ಇಲ್ಲಿಗೆ ದಯಮಾಡಿಸಿರುವ ನೀನು ಒಂದು ಗಳಿಗೆಯಾದರೂ ವಿನೋದವಾಗಿ ಈ ಸುಖದ್ಯೂತವನ್ನಾಡಿ ಮನಸ್ಸಂತೋಷಗೊಳಿಸಬಾರದೆ?

ಯುಧಿ.—ಶಕುನಿಯೇ, ಮನೋವಿನೋದಕ್ಕೆ ಈ ಜೂಜನ್ನೇ ಆಡಬೇಕೆ? ಈ ಸಭೆಯಲ್ಲಿ ಬೇರೆ ಎಷ್ಟೋಬಗೆಯ ವಿಷಯಗಳಿಲ್ಲವೆ? ಈ ಪಗಡೆಯ ಆಟದಲ್ಲಿ ಕ್ಷಾತ್ರವಾಗಲಿ ಪರಾಕ್ರಮವಾಗಲಿ ಏನೂ ಇಲ್ಲ. ಈ ಆಟವು ನೀಚರಿಗೂ ಕಪಟಿಗಳಿಗೂ ತಕ್ಕುದೇಹೊರತು ಸಜ್ಜನರಿಗೆ ಹಿತವಾದುದಲ್ಲ. ಇದರಲ್ಲಿ ನನಗೆ ಅಷ್ಟೇನೂ ಅಭಿರುಚಿ ಇಲ್ಲ.

ಶಕು,—ರಾಯನೇ, ಏಕೆ ಹೀಗೆನ್ನುವೆ? ನೀನು ಅಕ್ಷಕ್ರೀಡೆಯಲ್ಲಿ ಚತುರನೆಂದು ಕೇಳಿರುವೆನು. ಪ್ರತಿಒಂದು ಆಟದಲ್ಲಿಯೂ ಗುಣದೋಷಗಳು ಇಲ್ಲದೆ ಇಲ್ಲ. ಬುದ್ಧಿ ಕೌಶಲ್ಯವನ್ನೂ, ವೀರಾವೇಶವನ್ನೂ ಹುಟ್ಟಿಸುವ ಈ ಆಟವು ಉತ್ತಮ ಕ್ಷತ್ರಿಯರಿಗೆ ಯೋಗ್ಯವಲ್ಲವೆಂದು ಹೇಳಬಹುದೆ? ಆಟಕ್ಕೆ ಕುಳಿತರೆ ಮನಸ್ಸನ್ನು ಇತರ ಕಡೆಗೆ ಹೋಗಗೊಡಿಸದೆ ಇರುವುದರಿಂದ ತದೇಕಧ್ಯಾನ

ಮಾಡುವ ಭಗವದ್ಭಕ್ತಿಗಿಂತಲೂ ಇದರಲ್ಲಿ ಮಾಹಾತ್ಮ್ಯವಿರುವುದೆಂದು ಹೇಳುತ್ತೇನೆ.

ಯುಧಿ.—ಗಾಂಧಾರ ರಾಜನೇ, ಜನರು ತಮಗೆ ಅಭಿಮತವಾದ ವಸ್ತುವಿನಲ್ಲಿ ಗುಣಗಳನ್ನಾರೋಪಿಸುವುದೂ, ಇಷ್ಟವಿಲ್ಲದ ವಸ್ತುಗಳಲ್ಲಿ ದೋಷಗಳನ್ನು ಕಲ್ಪಿಸುವುದೂ ಸಹಜವಾದುದು. ನೀನು ಹೇಳಿದಂತೆ ನನಗೆ ಪಗಡೆಯ ಆಟದಲ್ಲಿ ಅಭಿರುಚಿಯಿದ್ದರೂ ಈ ಸ್ಥಾನದಲ್ಲಿ ಈ ಕಾಲದಲ್ಲಿ ಆಡುವುದು ಅನುಚಿತವೆಂದು ತಿಳಿಯುತ್ತೇನೆ. ಪೂರ್ವದಲ್ಲಿ ಈ ದುರ್ಯೋಧನಾದಿಗಳಮೂಲಕ ಹಲವುಸಾರಿ ವಿರುದ್ಧ ಭಾವದಿಂದ ನೊಂದಿರುವೆವು. ಈಗ ತಾನೇ ದೈವವಶದಿಂದ ನಮ್ಮ ನಮ್ಮಲ್ಲಿ ಸ್ನೇಹಭಾವವು ಕುದುರಿ, ಮನಸ್ಸುಗಳು ಸಮಾಧಾನಸ್ಥಿತಿಯಲ್ಲಿರುವಂತೆ ಕಾಣುತ್ತಿದೆ. ಇಂತಹ ಸಂದರ್ಭದಲ್ಲಿ ಜೂಜಿಗೆ ಕುಳಿತರೆ ಪರಸ್ಪರ ಈರ್ಷ್ಯಾಸೂಯೆಗಳು ಹುಟ್ಟಿ ದ್ವೇಷಗಳು ಬೆಳೆಯಬಹುದೆಂಬ ಭಯವು ಬಾಧಿಸುತ್ತಿದೆ. ಸೋಲು ಗೆಲವುಗಳಲ್ಲಿ ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿಡುವುದು ಕಷ್ಟವಲ್ಲವೆ? ಇದೂ ಅಲ್ಲದೆ ಆಟದಲ್ಲಿ ಕುಳಿತವರು ದ್ರವ್ಯಲೋಭದಿಂದ ಅರ್ಥ ಧರ್ಮಗಳಿಗೆ ದೂರರಾಗಿ, ಕಷ್ಟದಲ್ಲಿ ಸಿಕ್ಕುವುದಲ್ಲದೆ ದುರ್ಗತಿಯ ಪಾಲೂ ಆಗುವರು.

ಶಕು.—ಎಲೈ ರಾಯನೇ, ಪರಸ್ಪರ ವಿರುದ್ಧಭಾವದಿಂದ ಆಟವಾಡಿದರೆ ನೀನು ಹೇಳಿದ ಅನರ್ಥಗಳು ಸಂಭವಿಸಬಹುದೆಂದು ಶಂಕಿಸಬಹುದೇ ಹೊರತು ವಿನೋದಕ್ಕಾಗಿ ಆಡುವುದರಿಂದ ಯಾವ ತೊಂದರೆಯೂ ಉಂಟಾಗಲಾರದೆಂದು ತಿಳಿದಿದ್ದೇನೆ. ಎಲ್ಲರೂ ವಿನೋದದಿಂದ ಕಾಲಹರಣೆ ಮಾಡುತ್ತಿರುವಾಗ ನೀನುಮಾತ್ರ ಇಂತಹ ವ್ಯರ್ಥಕಲ್ಪನೆಗಳನ್ನು ಕಲ್ಪಿಸಿಕೊಂಡು ಕುಳಿತಿರುವುದು ಸರಿಯಲ್ಲ. ದಾಯಾದರಾದ ನೀವು ನೀವೇ ಆಡುತ್ತಿದ್ದಲ್ಲಿ ನೀನು

ಮನಸ್ಸಿನಲ್ಲಿ ಶಂಕಿಸಿದಂತೆ ಕಲಹ ಸಂಭವಿಸುವುದೆಂದು ಹೆದರಬಹುದು. ನಮ್ಮಂತಹ ಮಧ್ಯಸ್ಥರು ಇರುವಕಾಲದಲ್ಲಿಅಂತಹ ಭಯಕ್ಕೆಅವಕಾಶವೆತ್ತಣದು? ಮನಸ್ಸಿನಲ್ಲಿ ಅನ್ಯಥಾ ಚಿಂತಿಸದೆ ಆಟಕ್ಕೆ ಬಾ.

ಯುಧಿ.—ಎಲೈ ಸೌಬಲನೇ, ಪರಸ್ಪರ ಕಲಹವಿಲ್ಲದಂತೆ ನೋಡಿಕೊಳ್ಳುವುದಾದರೆ ನಿನ್ನ ಇಷ್ಟದಂತೆ ಸುಖದ್ಯೂತದಲ್ಲಿ ಪ್ರವರ್ತಿಸಬಹುದು. ಯುದ್ಧಕ್ಕಾಗಲಿ, ಜೂಜಿಗಾಗಲಿ, ಕರೆದರೆ ಒಲ್ಲೆನೆಂಬುದು ಕ್ಷತ್ರಿಯಧರ್ಮವಲ್ಲವು. ನನಗೆ ಈ ಆಟದಲ್ಲಿ ಮನಸ್ಸಿಲ್ಲದಿದ್ದರೂ ನೀನು ಇಷ್ಟುಬಗೆಯಾಗಿ ಕರೆದುದರಿಂದ ಒಲ್ಲೆನೆನ್ನದೆ ಒಪ್ಪಿಕೊಳ್ಳುವೆನು.

ಶಕು.—ಬಹು ಸಂತೋಷ. ನಿನ್ನ ಮನಸ್ಸು ಇಷ್ಟು ಧಾರಾಳವಾಗಿರದಿದ್ದರೆ ನಿನ್ನನ್ನು ಧರ್ಮರಾಯನೆಂದು ಜನರು ಕರೆಯುತ್ತಿದ್ದರೆ? ದ್ಯೂತವೆಂಬುದು ಯಜ್ಞಕ್ಕೆ ಸಮವಾದುದು. ಯಜ್ಞದಲ್ಲಿ ಆಹುತಿಗಳನ್ನು ಕೊಡುವಂತೆ ಈ ದ್ಯೂತ ಯಜ್ಞಕ್ಕೂ ಶಾಂತಿ, ಬಲಿ ಮುಂತಾದುವುಗಳನ್ನು ಕೊಡಲೇಬೇಕು. ಆದುದರಿಂದ ಈ ಆಟದಲ್ಲಿ ತಕ್ಕ ಪಣಗಳನ್ನು ಇಟ್ಟು ಆಡುವುದಕ್ಕೆ ಇಷ್ಟಪಡುವೆಯಾ?

ಯುಧಿ.—ಎಲೈ ಶಕುನೀ ! ಇದೇನು ಹೀಗೆ ಹೇಳುವೆ ? ಮಹಾರಾಜನಾದ ನನಗೆ ಪಣ ದ್ರವ್ಯಕ್ಕೆ ಕಡಿಮೆಯೇ? ಪರರಾಜ್ಯದಲ್ಲಿರುವ ನೀನು ಪಣದ್ರವ್ಯವನ್ನು ಎಲ್ಲಿಂದ ತರಬೇಕೆಂದು ಚಿಂತಿಸಬೇಕೇಹೊರತು ನನಗೆ ಇಂತಹ ಭಯಕ್ಕೆ ಅವಕಾಶವೇ ಇಲ್ಲ.

(ಸಮೀಪದಲ್ಲಿ ನಿಂತಿದ್ದ) ದುರ್ಯೋ.—ಎಲೈಯುಧಿಷ್ಠಿರನೇ, ನಮ್ಮ ಮಾವನಿಗೆ ಹಣವಿಲ್ಲವೆಂದು ತಿಳಿಯಬೇಡ. ಈತನು ನನ್ನ ಪರವಾಗಿ ಆಟವನ್ನಾಡುವುದಾದರೆ ಆಟದ ಪಣಕ್ಕಾಗಿ ನನ್ನ ಸರ್ವಸ್ವವನ್ನೂ ಅಂದರೆ ರಾಜ್ಯ ದೇಶ ಕೋಶಗಳನ್ನೂ, ಸಹೋದರ ಬಂಧು

ಮಿತ್ರಾದಿಗಳನ್ನೂ ಇತರ ಸಮಸ್ತ ವಸ್ತುಗಳನ್ನೂ ಈತನ ಸ್ವಾಧೀನ ಮಾಡಿರುವೆನು. ಈ ಸಭೆಯಲ್ಲಿರುವ ಮಹಾಜನರೆಲ್ಲರ ಸಮಕ್ಷದಲ್ಲಿ ಇದಕ್ಕೆ ಭರವಸೆಯಾಗಿ ನನ್ನ ಮುಂಗೈಯ ಕಡಗವನ್ನು ಈತನಿಗೆ ತೊಡಿಸುವೆನು. ಇದನ್ನು ನಂಬಿ, ನೀವು ಆಟಕ್ಕೆ ಪ್ರಾರಂಭಿಸಬಹುದು. (ಶಕುನಿಯನ್ನು ನೋಡಿ) ಮಾವೈಯಾ, ನನ್ನ ಆಸ್ತಿಯಲ್ಲಿ ಬೇಕಾದ ವಸ್ತುಗಳನ್ನು ನಿನ್ನ ಇಷ್ಟಾನುಸಾರ ಪಣವಾಗಿಟ್ಟು ಆಡಲು ನಿನಗೆ ಸ್ವಾತಂತ್ರ್ಯವನ್ನು ಕೊಟ್ಟಿರುವೆನು.

ಈ ಪ್ರಕಾರ ಹೇಳಿ ದುರ್ಯೋಧನನು ತನ್ನ ಕೈ ಕಡಗವನ್ನು ಶಕುನಿಯ ಕೈಗೆ ತೊಡಿಸಿದನು, ಬಲೆಯಲ್ಲಿ ಬೀಳುವ ಮೃಗದಂತೆ ಶಕುನಿ ದುರ್ಯೋಧನರ ಕಪಟವಾಕ್ಯಗಳಿಂದ ಮೋಹಿತನಾದ ಯುಧಿಷ್ಠಿರನು ವಿಧಿಪ್ರೇರಣೆಯಿಂದ ದ್ಯೂತದಲ್ಲಿ ಪ್ರವರ್ತಿಸಿದನು. ಭವಿತವ್ಯತೆಯು ಎಂದಿಗೂ ತಪ್ಪತಕ್ಕದಲ್ಲ. ಅದು ಕರ್ಮಾನುಗುಣವಾಗಿ ಬುದ್ಧಿಯನ್ನು ಎಳೆದುಕೊಂಡು ಹೋಗುತ್ತಿರುವುದು. ಕುರುಕುಲದ ನಾಶಕ್ಕೆ ಈ ಸುಖದ್ಯೂತವೇ ಮೂಲಕಾರಣವಾಗಿ ದುರ್ಯೋಧನ ಪ್ರೇರಿತನಾದ ಶಕುನಿಯಿಂದಲೇ ವಿಷಬೀಜವು ನೆಡಲ್ಪಟ್ಟಿತು.

ಮೊದಮೊದಲು ಒಂದೊಂದು ಹಲಗೆಗೆ ಹತ್ತುಸಾವಿರ ವರಹಾಗಳನ್ನುಮಾತ್ರ ಇಟ್ಟು ಆಡಬೇಕೆಂದು ಗೊತ್ತುಮಾಡಿಕೊಂಡರು. ಶಕುನಿಯು ತಾನು ಆಟಬಾರದವನಂತೆ ನಾಲ್ಕಾರು ಸಾರಿ ಆಡಿ ಸೋತು, ಯುಧಿಷ್ಠಿರನಿಗೆ ಆಟದಲ್ಲಿ ಅಭಿರುಚಿಯನ್ನು ಹುಟ್ಟಿಸುತ್ತಾ ಬಂದನು: ಪದೇಪದೇ ಸೋಲುತ್ತಾಬಂದ ಶಕುನಿಯು ಯುಧಿಷ್ಠಿರನನ್ನು ನೋಡಿ "ಎಲೈ ರಾಯನೇ, ನೀನು ಇಷ್ಟುಸಾರಿ ಗೆದ್ದರೆ ಏನಾಯಿತು. ನನ್ನ ದ್ರವ್ಯವು ಒಂದು ಲಕ್ಷ ತಾನೇ ಹೋಯಿತು. ಈ ಸಾರಿ ಲಕ್ಷ ದ್ರವ್ಯವನ್ನು ಒಡ್ಡಿ ಆಡುವೆನು. ಬಂದರೆ

ನಾನು ಸೋತಿರುವ ಲಕ್ಷ ಧನವೂ ಬರಲಿ, ಹೋದರೆ ಇಷ್ಟೂ ಹೋಗಲಿ,'' ಎಂದು ದಾಳವನ್ನು ಹೊರಳಿಸಿದನು. ಆ ಸಾರಿ ಶಕುನಿಯೇ ಗೆದ್ದುದರಿಂದ ಹಿಂದೆಸೋತ ಹಣವೆಲ್ಲಾ ಅವನ ವಶವೇ ಆಯಿತು. ಹೀಗೆ ಶಕುನಿಯ ಕಾಪಟ್ಯದಿಂದ ಹತ್ತುಸಾವಿರದಲ್ಲಿ ಪ್ರಾರಂಭಿಸಿದ ಪಣದ ದ್ರವ್ಯವು ಒಂದು ಲಕ್ಷಕ್ಕೇರಿತು. ಅನಂತರ ಪ್ರತಿಯೊಂದು ಆಟದಲ್ಲಿಯೂ ಧರ್ಮರಾಯನೇ ದುರ್ದೈವದಿಂದ ಸೋಲುತ್ತಾ ಬಂದನು. ಶಕುನಿಯು ಹಾಕಿದ ಮೇಲುಪಜ್ಞೆಯಂತೆ ಲಕ್ಷವೆಂದು ಗೊತ್ತಾದ ಪಣವು ಹತ್ತುಲಕ್ಷಕ್ಕೂ ಅಲ್ಲಿಂದ ಕೋಟಿಗೂ, ಅಲ್ಲಿಂದ ಹತ್ತುಕೋಟಿಗೂ ಏರಿಸುತ್ತಾ ಬಂದುದರಿಂದ ಒಂದೆರಡುಗಳಿಗೆಯೊಳಗಾಗಿ ಯುಧಿಷ್ಠಿರನ ಭಂಡಾರದ ದ್ರವ್ಯವನ್ನೆಲ್ಲಾ ಶಕುನಿಯು ಗೆದ್ದು ತನ್ನ ವಶಮಾಡಿಕೊಂಡನು. ಅಷ್ಟು ದ್ರವ್ಯವನ್ನು ಸೋತರೂ ಯುಧಿಷ್ಠಿರನು ಆಟದಿಂದ ತಾನಾಗಿ ನಿವೃತ್ತನಾಗುವುದು ಕ್ಷತ್ರಧರ್ಮಕ್ಕೆ ವಿರುದ್ಧವಾದುದೆಂದು ತಿಳಿದು, ಮೊದಲಿನಂತೆ ಆಡುತ್ತಲೇ ಬಂದನು.

ರೊಕ್ಕದ ಹಣವನ್ನೆಲ್ಲಾ ಅಪಹರಿಸಿದಮೇಲೆ ಶಕುನಿಯು ಆ ಯುಧಿಷ್ಠಿರನ ಚರಸ್ಥಿರ ಸ್ವತ್ತುಗಳನ್ನೆಲ್ಲಾ ಕಸಿದುಕೊಳ್ಳಬೇಕೆಂದು ನಿಶ್ಚಯಿಸಿ, ತನ್ನ ಸ್ವಾಭಾವಿಕವಾದ ಕಾಪಟ್ಯವನ್ನು ಹೊರಪಡಿಸದೆ ವಿನಯವಾದ ಮೃದುಮಧುರವಾಕ್ಯಗಳಿಂದ ಯುಧಿಷ್ಠಿರನನ್ನು ಮರುಳುಗೊಳಿಸುತ್ತಾ ಗಜರಥತುರಗ ಪದಾತಿಗಳೆಂಬ ಚತುರಂಗಸೈನ್ಯವನ್ನೂ, ಶಸ್ತ್ರಾಸ್ತ್ರಗಳನ್ನೂ, ಅರಮನೆಗಳನ್ನೂ, ಒಂದೊಂದಾಗಿ ಒಡ್ಡಿಸಿ ಗೆದ್ದುಕೊಳ್ಳುತ್ತಾ ಬಂದನು. ಇದನ್ನು ನೋಡಿ ಹಿರಿಯರಾದ ಭೀಷ್ಮದ್ರೋಣರು ಮುಂದೆ ಮಹತ್ತಾದ ಅನರ್ಥವು ಸಂಭವಿಸಬಹುದೆಂದು ತಿಳಿದು, ''ಸುಖದ್ಯೂತವು ಇಷ್ಟ

ಕ್ಕೇನೇ ಸಾಕು. ಇನ್ನುಮುಂದೆ ಆಡದೆ ಈ ಆಟವನ್ನು ನಿಲ್ಲಿಸಿಬಿಡಿರಿ'' ಎಂದು ಹೇಳಿ ಕಳುಹಿದರು. ಶಕುನಿಯು ತಾನು ಸಂಕಲ್ಪಿಸಿದಂತೆ ಪಾಂಡವರ ಸರ್ವಸ್ವವನ್ನೂ ಅಪಹರಿಸದೆ ಬಿಡಬಾರದೆಂದು ಯೋಚಿಸಿ, ಆತನಿಗೆ ವೀರಾವೇಶ ಹುಟ್ಟುವ ಮಾತುಗಳಿಂದ ಇಂತೆಂದನು.

ಶಕು.—ಎಲೈ ಧರ್ಮರಾಯನೇ, ಈಗ ಬಹಳವಾಗಿ ಸೋತಿರುವ ನಿನಗೆ ಎರಡು ಮಾರ್ಗಗಳಿವೆ. ''ಇದುವರೆಗೂ ಸೋಲುತ್ತಲೇ ಬಂದೆನು. ಇನ್ನು ಜಯವು ಸಿಕ್ಕಲರಿಯದು'' ಎಂದು ಹೇಡಿಯಂತೆ ಹೆದರಿ ಈ ಆಟವನ್ನು ಇಲ್ಲಿಗೇನೇ ನಿಲ್ಲಿಸಿಬಿಟ್ಟು, ಮರಳಿ ಇಂದ್ರಪ್ರಸ್ಥದದಾರಿಹಿಡಿಯುವುದೊಂದು, ಅಥವಾ ವೀರ ಕ್ಷತ್ರಿಯನಂತೆ ನಿನ್ನ ಕುಲಧರ್ಮವನ್ನನುಸರಿಸಿ, ಪ್ರಾರಂಭಿಸಿದ ಆಟವನ್ನು ಸೋಲಾಗಲಿ, ಗೆಲವಾಗಲಿ ಕಡೆಯತನಕ ಸೋಡಿ ಅದೃಷ್ಟ ಪರೀಕ್ಷೆಮಾಡಿಬಿಡುವುದೊಂದು, ಇವುಗಳಲ್ಲಿ ನಿನಗೆ ಸಮ್ಮತವಾದುದುಯಾವುದು? ಮುಂದೆ ಸಂಭವಿಸುವ ನಷ್ಟಗಳಿಗೆ ಹೆದರಿ ಆಟವನ್ನು ನಿಲ್ಲಿಸಿಬಿಡುವೆಯಾ? ಅಥವಾ ಇನ್ನೂ ಸ್ವಲ್ಪ ಆಡಿನೋಡೋಣವೆಂಬ ಚಪಲಗೊಳ್ಳುವೆಯಾ?

ಈ ಪ್ರಕಾರ ತಿರಸ್ಕಾರಭಾವದಿಂದ ನುಡಿದ ಶಕುನಿಯ ಮಾತುಗಳನ್ನು ಕೇಳಿ, ಯುಧಿಷ್ಠಿರನು ಆಟವನ್ನು ನಿಲ್ಲಿಸಲೊಲ್ಲದೆ ವಿಧಿಪ್ರೇರಣೆಯಿಂದ ಪುನಃ ಆಟವಾಡತೊಡಗಿದನು. ಆಹಾ! ಈ ಶಕುನಿ ಎಂಬ ಹೆಸರಿನ ಮಧ್ಯಾಕ್ಷರವನ್ನು ತೆಗೆದರೆ ಉಳಿಯುವ ಒಂದು ಗ್ರಹದ ಅನ್ವರ್ಥನಾಮವುಳ್ಳ ಈ ಮಹಾಪುರುಷನು ದೃಷ್ಟಿಯಿಟ್ಟ ಮೇಲೆ ಮತ್ತಾರುತಾನೇ ಸಹಾಯಮಾಡಲಾದೀತು? ಹಿರಿಯರ ಆಜ್ಞೆಯನ್ನು ಕೂಡ ಗಮನಿಸದಂತೆ ಯುಧಿಷ್ಠಿರನ ಮನಸ್ಸನ್ನು ಆಟದಕಡೆಯಿಂದ ಮರಳಿಸದೆ ಮರುಳುಗೊಳಿಸಿ ಆ ಶನಿಯು ಮತ್ತೆ ಅವನನ್ನು ಜೂಜಿಗೆ ಎಳೆದನು.

ಹಿರಿಯರ ಮಾತಿನಂತೆ ಶಕುನಿಯು ಜೂಜಾಟವನ್ನು ನಿಲ್ಲಿಸದೆ ಆಡುತ್ತಲೇ ಇರುವುದನ್ನು ನೋಡಿ, ದೂರದರ್ಶಿಯಾದ ವಿದುರನು ತನ್ನ ಮನಸ್ಸಿನಲ್ಲಿ 'ಆಹಾ! ಎಷ್ಟರ ಪ್ರಮಾದಕ್ಕೆ ಬಂತು ? ಆ ಇಂದ್ರಪ್ರಸ್ಥಕ್ಕೆ ನಾನೇಹೋಗಿ, ಈ ಯುಧಿಷ್ಠಿರಾದಿಗಳನ್ನು ಕರೆದು ಕೊಂಡು ಬಂದುದರಿಂದಲೇ ಅಲ್ಲವೇ ಈ ಪಾಂಡವರು ದ್ಯೂತವೆಂಬ ಮಾರಿಯ ಬಾಯಿಗೆ ತುತ್ತಾಗಬೇಕಾಗುವ ಹೊತ್ತು ಬಂತು. ಈಗ ನಾನೇನು ಮಾಡಲಿ! ವಂಚಕರಾದ ಸುಯೋಧನಾದಿಗಳು ತಮ್ಮ ಅನುಕೂಲಕ್ಕೆ ತಕ್ಕ ಸನ್ನಾಹಗಳನ್ನೆಲ್ಲಾ ಮೊದಲೇಮಾಡಿಕೊಂಡು ಆಟಕ್ಕೆ ಪ್ರಾರಂಭಿಸಿರುವರು. ಈಗ ನಾನು ಏನು ಹೇಳಿದರೂ ಇವರ ಮನಸ್ಸಿಗೆ ಹಿಡಿಯುವಹಾಗಿಲ್ಲ. ವಿಧಿಯ ಆಜ್ಞೆಯು ಅನುಲ್ಲಂಘ್ಯ ವಾದುದು. ಆದರೂ ಈಗ ತಕ್ಕ ಪ್ರಯತ್ನವನ್ನು ಮಾಡದೆ ಬಿಡು ವುದು ಧರ್ಮವಲ್ಲ.

ಹೀಗೆ ಯೋಚಿಸಿ, ಧೃತರಾಷ್ಟ್ರನನ್ನು ನೋಡಿ ಇಂತೆಂದನು.

ಎಲೈ ರಾಯನೇ, ನಿನ್ನಮಗನು ಹುಟ್ಟಿದಾಗ ತೋರಿದ ಉತ್ಪಾತಗಳಿಂದ ಇವನು ಭರತವಂಶವನ್ನು ನಿರ್ನಾಮ ಮಾಡಲಿ ಕ್ಕಾಗಿಯೇ ಹುಟ್ಟಿರುವನೆಂದು ಎಲ್ಲರಿಗೂ ಗೊತ್ತಾಯಿತು. ಆಗಲೇ ಇವನನ್ನು ತ್ಯಜಿಸಿಬಿಡೆಂದು ನಿನಗೆ ಎಷ್ಟುಬಗೆಯಿಂದ ಹೇಳಿದರೂ ಪುತ್ರಮೋಹದಿಂದ ನೀನು ಇವನನ್ನು ಪರಿತ್ಯಾಗಮಾಡದೆ ಉಳಿಸಿದೆ. ಈಚಿಗೆ ಇವನು ಮಾಡಿದ ಅಕೃತ್ಯಗಳಿಂದ ಉಂಟಾದ ಅಪಕೀರ್ತಿಗಳಿಗೆ ನೀನೇ ಗುರಿಯಾಗಬೇಕಾಯಿತು. ಈಗ ನಿನ್ನ ಮಗನು ಏರ್ಪಡಿಸಿದ ಈ ದ್ಯೂತದ ಪರಿಣಾಮವು ಬಹಳ ಅನರ್ಥವನ್ನುಂಟುಮಾಡುವು ದೆಂಬ ಭಯತೋರುತ್ತಿದೆ. ಈ ಆಟದಲ್ಲಿ ಗೆಲ್ಲುತ್ತಾ ಬರುತ್ತಿರುವ ನಿನ್ನ ಮಕ್ಕಳಿಗೆ ಆಪಾತತಃ ಸುಖವಾಗುವುದೆಂದು ಕಾಣಬಂದರೂ

ಪರಿಣಾಮದಲ್ಲಿ ಹಿತವಾಗುವುದಿಲ್ಲವೆಂದು ತಿಳಿ. ಶಕುನಿಯು ಇದುವರೆಗೇನೇ ಈ ಪಾಂಡವರ ಆಸ್ತಿಯಲ್ಲಿ ಬಹು ಭಾಗವನ್ನು ಅಪಹರಿಸಿಬಿಟ್ಟನು. ಇಷ್ಟಾದರೂ ಅವನಿಗೆ ಆಶೆತೀರಿದಹಾಗೆ ಕಾಣಬರುವುದಿಲ್ಲ. ಆದುದಾಯಿತು. ಇದುವರೆಗೆ ನಿಮ್ಮವರು ಗೆದ್ದಿರುವುದೇ ಸಾಕು. ಇನ್ನು ಹೆಚ್ಚು ದುರಾಶೆಪಡದೆ ಈಗಲಾದರೂ ನಿನ್ನ ಮಗನಿಗೆ ತಕ್ಕ ಬುದ್ಧಿವಾದಗಳನ್ನು ಹೇಳಿ, ಕೂಡಲೇ ಆಟವನ್ನು ನಿಲ್ಲಿಸಿ ಬಿಡುವಂತೆ ಏರ್ಪಡಿಸು. ಶಕುನಿಯು ಮರ್ಮಭೇದಕವಾಗಿ ಆಡುತ್ತಿರುವ ತಿರಸ್ಕಾರೋಕ್ತಿಗಳನ್ನು ಕೇಳಿಕೊಂಡು, ಆಟದಲ್ಲಿ ಸೋಲುತ್ತಾ ಬಂದಿರುವ ಯುಧಿಷ್ಠಿರನು ತಾನಾಗಿಯೇ ಆಟವನ್ನು ನಿಲ್ಲಿಸಿ, ಬಿಟ್ಟು ಹೋಗುವುದು ರಾಜಧರ್ಮಕ್ಕೆ ವಿರುದ್ಧವಾದುದು.

ವಿದುರನ ಈ ವಾಕ್ಯಗಳನ್ನು ಕೇಳಿ ಧೃತರಾಷ್ಟ್ರನು ಚಿಂತಾಕ್ರಾಂತನಾಗಿ, ಕೂಡಲೇ ಆಟವನ್ನು ನಿಲ್ಲಿಸಿಬಿಡಬೇಕೆಂದು ದುರ್ಯೋಧನನಿಗೆ ಬಹಳವಾಗಿ ಬುದ್ಧಿಯ ಮಾತುಗಳನ್ನು ಹೇಳಿದರೂ ಅವನು ಕೇಳದೆಹೋದನು. ನೀಚರು ತಮ್ಮ ಕಾರ್ಯಸಾಧನೆಯಾಗುವತನಕ ಯಾರುಬಂದು ಹೇಳಿದರೂ ಅವರ ಮಾತುಗಳಿಗೆ ಕಿವಿಗೊಡಲಾರರಲ್ಲವೆ? ಪಾಂಡವರ ಸರ್ವಸ್ವವನ್ನೂ ಕಾಪಟ್ಯದಿಂದಲೇ ಗೆಲ್ಲಬೇಕೆಂದು ನಿಶ್ಚಯಿಸಿದ್ದ ಶಕುನಿದುರ್ಯೋಧನರು ಯಾರ ಮಾತನ್ನೂ ಲಕ್ಷ್ಯಮಾಡದೆ, ಯುಧಿಷ್ಠಿರನಿಗೆ ಜೂಜಿನಲ್ಲಿ ಮತ್ತಷ್ಟು ಭ್ರಾಂತಿಯುಂಟಾಗುವಂತೆ ರೇಗಿಸುತ್ತಾ ಆಟವನ್ನು ನಿಲ್ಲಿಸದೆ ಇದ್ದರು.

ಧೃತರಾಷ್ಟ್ರನಿಂದ ಹೇಳಿಸಿದರೂ ಆ ಕಪಟಿಗಳು ಆಟವನ್ನು ನಿಲ್ಲಿಸದೆ ಇದ್ದುದನ್ನು ನೋಡಿ ವಿದುರನು ತಾನೇ ದುರ್ಯೋಧನನನ್ನು ಕುರಿತು ಇಂತೆಂದನು.

ವಿದು.—ಎಲೈ ಸುಯೋಧನಾ, ನಿನ್ನ ತಂದೆಯಮಾತೂ ನಿನ್ನಮನಸ್ಸಿಗೆ ಒಪ್ಪದೆ ಹೋಯಿತೆ? ಇದುವರೆಗೆ ಈ ಆಟದಲ್ಲಿ ನೀನು ಗೆದ್ದಿರುವ ದ್ರವ್ಯವೇ ಸಾಲದೆ! ಇನ್ನೆಷ್ಟರವರೆಗೆ ಆಡಿಸುತ್ತೀ! ನ್ಯಾಯಮಾರ್ಗವನ್ನು ಬಿಟ್ಟು ಶಕುನಿಯಿಂದ ಕಪಟದ ಜೂಜನ್ನಾಡಿಸಿ, ಪಾಂಡವರ ಐಶ್ವರ್ಯವನ್ನೆಲ್ಲಾ ಅಪಹರಿಸಿಬಿಟ್ಟೆ. ಇದರಿಂದ ನಿನಗೆ ಇಹದಲ್ಲಿ ನಿಂದೆಯೂ ಪರದಲ್ಲಿ ನರಕವೂ ತಪ್ಪಲಾರವು. ದೈವಭಕ್ತನಾದ ಯುಧಿಷ್ಠಿರನ ಮನಸ್ಸನ್ನು ಇಷ್ಟುದೂರ ನೋಯಿಸಿದುದರಿಂದ ನಿನ್ನಮೇಲೆ ಭಗವಂತನ ಅನುಗ್ರಹವೂ ಉಂಟಾಗಲಾರದು. ಆದುದಾಯಿತು. ಈಗಲಾದರೂ ಈ ದ್ಯೂತವ್ಯಾಪಾರವನ್ನು ನಿಲ್ಲಿಸಿಬಿಡುವುದೇ ನಿನಗೆ ಕ್ಷೇಮಕರವು.

ದುರ್ಯೋ.—ಎಲೈ ವಿದುರನೇ, ನೀನು ಯಾವಾಗಲೂ ಪಾಂಡವರನ್ನೇ ಹೊಗಳುತ್ತಲೂ, ನಮ್ಮನ್ನು ತೆಗಳುತ್ತಲೂ ಇರುವೆ. ಉಂಡಮನೆಗೆ ಎರಡು ಬಗೆಯುವ ಸ್ವಭಾವವುಳ್ಳ ನಿನಗೆ ಆಶ್ರಯಕೊಟ್ಟು ತೊಡೆಯಮೇಲೆ ಹಾವನ್ನಿಟ್ಟುಕೊಂಡಂತೆ ನಮ್ಮಲ್ಲಿ ಸೇರಿಸಿಕೊಂಡುದೇತಪ್ಪು. ನಮಗೆ ಬುದ್ಧೀ ಹೇಳುಬಾರೆಂದು ನಿನ್ನನ್ನು ಯಾರೂ ಕರೆಯಲಿಲ್ಲ. ಸಾಕು. ಸುಮ್ಮನೆ ಇರು.

ವಿದು.—ಎಲೈ ಕಾರವನೇ, ಸಾಯುವ ರೋಗಿಗೆ ಸಂಜೀವನವು ರುಚಿಸದೆಂಬಂತೆ ನನ್ನ ಹಿತೋಕ್ತಿಗಳು ನಿನ್ನ ಮನಸ್ಸಿಗೆ ಹಿಡಿಯದೆ ಇವೆ. ಅರಸರಿಗೆ ತಮ್ಮ ಮನಸ್ಸಿನಲ್ಲಿ ಕೇಡನ್ನೇ ಹಾರೈಸುತ್ತಾ, ಹೊರಗೆ ಇಚ್ಛಕದ ಮಾತುಗಳಿಂದ ಸ್ತೋತ್ರಮಾಡುತ್ತಿರುವವರು ಆಪ್ತರಾಗಿ ತೋರುವರೇ ಹೊರತು ಮನಃಪೂರ್ವಕವಾಗಿ ರಾಜನ ಹಿತವನ್ನೇ ಬಯಸುತ್ತಾ, ಅಹಿತವಾಗಿ ತೋರಿದರೂ ಖಂಡಿತವಾದ ಮಾತನ್ನು ನಿರ್ಭಯದಿಂದ ಹೇಳುವವರು ಹಿತರೆಂದು ತೋ

ರುವುದಿಲ್ಲ. ಮುಖ್ಯವಾಗಿ ತನ್ನೊಡೆಯನ ಕ್ಷೇಮವನ್ನು ಬಯಸುವವರು, ಸ್ವಲ್ಪವೂ ಮುಖದಾಕ್ಷಿಣ್ಯವಿಡದೆ ಮುಂದೆ ಸಂಭವಿಸುವ ಹಿತಾಹಿತಗಳನ್ನು ಬಲವಂತದಿಂದಲಾದರೂ ರಾಜನಿಗೆ ಉಪದೇಶಿಸುತ್ತಲಿರಬೇಕು. ಪ್ರಸಿದ್ಧರಾದ ಭರತದುಷ್ಯಂತರ ವಂಶವು ನಿನ್ನಿಂದ ಹಾಳಾಗಬಾರದೆಂಬ ಯೋಚನೆಯಿಂದ ಆಗ್ರಹಪೂರ್ವಕ ನಿನಗೆ ಈ ಮಾತನ್ನು ಹೇಳುತ್ತಿದ್ದೇನೆಯೇ ಹೊರತು ನನ್ನ ಸ್ವಾರ್ಥಕ್ಕಾಗಿ ಏನೂ ಹೇಳುವುದಿಲ್ಲವೆಂದು ತಿಳಿ. ಈಗಲೂ ಕಡ್ಡಿಮುರಿದು ಹೇಳುವೆನು ಕೇಳು. ನಿನಗೆ ಧರ್ಮಾತ್ಮರಾದ ಪಾಂಡವರೊಂದಿಗೆ ದ್ವೇಷಬುದ್ಧಿಯು ತರವಲ್ಲ. ಈ ಕುತಂತ್ರಗಳಿಂದ ನಿನಗೆ ಸ್ವಲ್ಪವೂ ಹಿತವಾಗಲಾರದೆಂದು ತಿಳಿ. ನೀನೂ ಪಾಂಡವರೂ ಅನ್ಯೋನ್ಯ ಪ್ರೀತಿಯಿಂದ ಇದ್ದು ಬಹುಕಾಲ ಸುಖವಾಗಿರಬೇಕೆಂಬ ಅಭಿಪ್ರಾಯವಿದ್ದರೆ ಈ ದ್ಯೂತಕ್ರೀಡೆಯನ್ನು ಇಷ್ಟಕ್ಕೇನೇ ನಿಲ್ಲಿಸಿಬಿಡು.

ಹೀಗೆ ಹೇಳಿದ ವಿದುರನ ಮಾತುಗಳು ದುರಾತ್ಮನಾದ ಆ ದುರ್ಯೋಧನನ ಮನಸ್ಸಿಗೆ ರುಚಿಸಲಿಲ್ಲ. ಅವನು ಅವಮಾನಕರವಾದ ಮಾತುಗಳಿಂದ ಧರ್ಮಜ್ಞನಾದ ವಿದುರನನ್ನು ತಿರಸ್ಕರಿಸುತ್ತಾ ಬಂದುದರಿಂದ ತನ್ನ ಯತ್ನವು ನಡೆಯದೆ ಆತನು ಸುಮ್ಮನೆ ಇರಬೇಕಾಯಿತು.

ಯುಧಿಷ್ಠಿರನ ಸಕಲೈಶ್ವರ್ಯವನ್ನೂ, ಚರಸ್ಥಿರಾಸ್ತಿಗಳನ್ನೂ ಅಪಹರಿಸಿದರೂ ಆ ಶಕುನಿಗೆ ತೃಪ್ತಿಯಾಗದೆ, ಇನ್ನೂ ಉಳಿದಿರುವುವುಗಳನ್ನೆಲ್ಲಾ ಕಸಿದುಕೊಳ್ಳಬೇಕೆಂದು ಯೋಚಿಸಿ, ಆ ಯುಧಿಷ್ಠಿರನನ್ನು ನೋಡಿ "ಎಲೈ ರಾಯನೇ. ಈಸಾರಿಯ ಆಟಕ್ಕೆ ಯಾವ ಪಣವನ್ನಿಡುವೆ? " ಎಂದು ಕೇಳಿದನು. ಆ ಯುಧಿಷ್ಠಿರನು ಕ್ರೀಡಾಪರವಶತೆಯಿಂದಲೂ ಶಕುನಿಯ ಮಾತುಗಳಿಂದಲೂ ಚೋದಿತನಾಗಿ

ತನ್ನ ಅಧೀನ ರಾಜ್ಯಗಳನ್ನೂ ತನ್ನ ಸ್ವಂತ ಅರಮನೆಯನ್ನೂ, ಅದ ರಲ್ಲಿರುವ ಮೂಲಧನವನ್ನೂ ಒಡ್ಡಿ ಸೋತುಬಿಟ್ಟನು. ಈಪ್ರಕಾರ ತನ್ನ ರಾಜ್ಯದಲ್ಲಿಯ ದೇವಾದಾಯ ಬ್ರಹ್ಮಾದಾಯಗಳ ಹೊರತು ಉಳಿದ ಸಮಸ್ತ ಆಸ್ತಿಯನ್ನೂ ಯುಧಿಷ್ಠಿರನು ಆಟದಲ್ಲಿ ಪಣವಾಗಿ ಒಡ್ಡಿ, ಸೋತುಬಿಟ್ಟುದನ್ನು ಕಂಡು ಶಕುನಿಯು, ಸಂತೋಷಗೊಂ ಡರೂ, ಆತನನ್ನು ಇನ್ನೂ ಹೀನಸ್ಥಿತಿಗೆ ತರಬೇಕೆಂದು ಯೋಚಿಸಿ, ಆವನನ್ನು ಕುರಿತು ಇಂತೆಂದನು.

ಎಲೈ ಧರ್ಮರಾಯನೇ, ನಮಗೆ ತಿಳಿದಿರುವಮಟ್ಟಿಗೆ ನಿನ್ನ ಯಾವತ್ತೂ ಆಸ್ತಿಯನ್ನು ಸೋತುಬಿಟ್ಟೆ. ಮುಂದಿನ ಆಟಕ್ಕೆ ಯಾವ ಪಣವನ್ನಿಡುವೆ. ? ಇದುವರೆಗೆ ಹದಿಮೂರು ಆಟಗಳು ಆಡಿದ್ದಾಯಿತು ಮುಂದೆ ಏನಾದರೂ ಪಣದ ದ್ರವ್ಯವನ್ನು ತೋರಿಸಿದ ಹೊರತು ದಾಳಗಳನ್ನು ಮುಂದಕ್ಕೆ ಬಿಡೆನು.

ಹೀಗೆ ಹೇಳಿ ಆ ಕಪಟದಾಳಗಳನ್ನು ತನ್ನಕಡೆಗೆ ಎಳೆದು ಕೊಂಡನು. ಆಗ ಯುಧಿಷ್ಠಿರನು ಮತ್ತಾವ ಆಸ್ತಿಯನ್ನಿಡಲಿಕ್ಕೂ ತೋರದೆ ತನ್ನಮಕ್ಕಳಾದ ಪ್ರತಿವಿಂದ್ಯಾದಿ ಉಪಪಾಂಡವರೈವರನ್ನೂ ಒಡ್ಡಿ "ಎಲೈ ಶಕುನಿಯೇ ? ಈ ಆಟಕ್ಕೆ ಮಕ್ಕಳನ್ನೊಡ್ಡಿದ್ದೇನೆ. ಇದರಲ್ಲಿ ಗೆದ್ದರೆ ನಾನು ಸೋತಿರುವ ಸರ್ವಸ್ವವನ್ನೂ ಹಿಂದಕ್ಕೆ ಪಡೆ ಯುವೆನು. ದಾಳಗಳನ್ನು ಹೊರಳಿಸು" ಎಂದನು. ಶಕುನಿಯು ಸಂತೋಷಗೊಂಡು, ಆಡಿ, ಉಪಪಾಂಡವರನ್ನೂ ಗೆದ್ದುಕೊಂಡೆ ನೆಂದು ನಕ್ಕನು.

ಆಗಲಾ ವಂಚಕನಾದ ಶಕುನಿಯು "ಎಲೈ ರಾಯನೇ, ಮ ಕ್ಕಳನ್ನೂ ಸೊತುಬಿಟ್ಟೆ. ಇನ್ನೊಂದುಸಾರಿಯ ಆಟಕ್ಕೆ ಮತ್ತಾವ ಪಣವನ್ನು ಸಿದ್ಧಪಡಿಸಿರುವೆ ?" ಎಂದು ಕೇಳಿದನು. ವಿಧಿಪ್ರೇರಿತ

ನಾದ ಯುಧಿಷ್ಠಿರನು ಎದುರಾಳಿಯು ಹೇಳನದ ಮಾತುಗಳನ್ನು ಕೇಳಿ ಏನುಮಾಡಲಿಕ್ಕೂ ಉಪಾಯ ತೋರದೆ ತನ್ನ ತಮ್ಮಂದಿರಲ್ಲಿ ಒಬ್ಬ ನನ್ನು ಒಡ್ಡಿ ಆಡಿದರೆ ಹಿಂದೆ ಕಳೆದುಕೊಂಡಿರುವ ವಸ್ತುಗಳನ್ನೆಲ್ಲಾ ಮುಂದೆ ಪಡೆಯಬಹುದೋ ಏನೋ ಎಂಬ ಪ್ರತ್ಯಾಶೆಯಿಂದ ತನ್ನ ತಮ್ಮನಾದ ಸಹದೇವನನ್ನು ನೋಡಿ ಇಂತೆಂದನು.

ಯುಧಿ.—ಎಲೈ ಸಹದೇವನೇ, ದೈವಾಜ್ಞೆಯು ಬಲವತ್ತರ ವಾದುದು. ನಾನು ಈ ದ್ಯೂತಕ್ಕೆ ಕುಳಿತದ್ದೇ ತಪ್ಪಾಯಿತು. ಸುಖ ದ್ಯೂತವು ದುಃಖದ್ಯೂತವಾಗಿ ಪರಿಣಮಿಸಿತು. ನೀವು ಕಂಡಂತೆ ಈಗ ನಮ್ಮ ಆಸ್ತಿಯಲ್ಲಿ ಒಂದಾದರೂ ಉಳಿಯಲಿಲ್ಲ. ಪ್ರಾಜ್ಞನಾ ಗಿಯೂ ಸುಂದರಾಂಗನಾಗಿಯೂ ಪರಾಕ್ರಮಿಯಾಗಿಯೂ ಇರುವ ನೀನು ನನ್ನಮಾತಿಗೆ ಎಂದಾದರೂ ಎದುರುತ್ತರ ಹೇಳಿದವನಲ್ಲ. ಇಂತಹ ಕಷ್ಟಕಾಲದಲ್ಲಿ ನಿನ್ನನ್ನೊಡ್ಡಿ ಒಂದಾಟವನ್ನು ಆಡುವೆನು. ಅದಕ್ಕೆ ಸಮ್ಮತಿಸುವೆಯಾ?

ಸಹ.—ಎಲೈ ಆರ್ಯನೇ, ನಮ್ಮ ದೇಹಗಳಿಗೂ ಪ್ರಾಣಗಳಿಗೂ ನೀನೇ ಪ್ರಭುವಾಗಿದ್ದೀಯೆ, ನಿನ್ನ ಸ್ವಾಧೀನದಲ್ಲಿರುವ ನಮ್ಮನ್ನು ಪಣವಾಗಿಟ್ಟು ಆಡಲಿಕ್ಕೆ ನಮ್ಮನ್ನೇಕೆ ಕೇಳಬೇಕು? ನಿನ್ನ ಇಷ್ಟಾ ನುಸಾರ ನಡಿಸುವುದರಲ್ಲಿ ನನ್ನ ಆತಂಕವೇನೂ! ಇಲ್ಲ. ನಮಗೆ ನೀನೇ ತಂದೆಯೂ, ಗುರುವೂ ದೈವವೂ ಆಗಿರುವೆಯೆಂದು ತ್ರಿಕರಣದಲ್ಲಿಯೂ ಭಾವಿಸಿಕೊಂಡಿರುವೆವು.

ಇದನ್ನು ಕೇಳಿ ಅಲ್ಲಿದ್ದ ಸಭಿಕರು ಆಹಾ! ಸಹೋದರರೆಂ ದರೆ ಹೀಗಲ್ಲವೇ ಇರಬೇಕು. ಎಂದು ಅವರನ್ನು ಹೊಗಳಿದರು. ಆಗ ಯುಧಿಷ್ಠಿರನು ಆ ಆಟಕ್ಕೆ ಸಹದೇವನನ್ನು ಪಣವಾಗಿಡಲು, ಶಕುನಿಯು, ಇದೋ, ಸಹದೇವನನ್ನು ಗೆದ್ದುಬಿಟ್ಟೆನೆಂದು ಆ ಆಟ

ವನ್ನು ಮುಗಿಸಿದನು. ಇದರಂತೆಯೇ ಮತ್ತೊಂದು ಆಟಕ್ಕೆ ನಕುಲನ ಸಮ್ಮತಿಪಡೆದು ಅವನನ್ನೊಡ್ಡಿ ಅದರಲ್ಲಿಯೂ ಸೋತು ಬಿಟ್ಟನು. ಆಗ ಶಕುನಿಯು ಯುಧಿಷ್ಠಿರನನ್ನು ನೋಡಿ 'ಅಯ್ಯಾ, ಇನ್ನೇನು.! ಮಕ್ಕಳನ್ನೂ ಸೋತೆ, ನಿನ್ನ ಮಲತಾಯಿಯ ಮಕ್ಕಳನ್ನೂ ಸೋತೆ, ಇನ್ನೂ ಉಳಿದಿರುವವರು ನಿನ್ನ ಸಾಕ್ಷಾತ್ಸಹೋದರರಿಬ್ಬರುಮಾತ್ರವೇ ಅಲ್ಲವೇ? ಇವರಿಂದ ಇನ್ನೂ ಎರಡು ಆಟಗಳನ್ನಾಡಬಹುದು' ಎಂದು ಹಾಸ್ಯಮಾಡಿದನು.

ಆಗ ಯುಧಿಷ್ಠಿರನು ಅರ್ಜುನನನ್ನುನೋಡಿ 'ಎಲೈ ಧನಂಜಯನೇ, ಎಂತಹ ವಿಷಮಕಾಲ ಬಂದಿದೆ ! ನೋಡಿದೆಯಾ ದ್ರೋಣಾಚಾರ್ಯರ ಶಿಷ್ಯರಲ್ಲೆಲ್ಲಾ ಅಗ್ರಸ್ಥಾನವನ್ನು ಪಡೆದು ಇತರರಿಂದ ಅಸಾಧ್ಯವಾದ ಅವರ ಗುರುದಕ್ಷಿಣೆಯನ್ನೊಪ್ಪಿಸಿದವನಾಗಿಯೂ ಯಾರಿಂದಲೂ ಜಯಿಸಲಸಾಧ್ಯವಾದ ಮತ್ಸ್ಯಯಂತ್ರವನ್ನು ಭೇದಿಸಿದವನಾಗಿಯೂ, ಖಾಂಡವವನವನ್ನು ದಹನಮಾಡಿ ಯಜ್ಞೇಶ್ವರನ ಅನುಗ್ರಹಕ್ಕೆ ಪಾತ್ರನಾಗಿಯೂ, ನನ್ನ ಪ್ರೇಮಾಸ್ಪದನಾದ ಸಹೋದರನಾಗಿಯೂ ಇರುವ ನಿನ್ನನ್ನು ಒಂದು ಆಟಕ್ಕೆ ಒಡ್ಡಿ ಅದೃಷ್ಟಪರೀಕ್ಷೆ ಮಾಡಿಬಿಡುವೆನು. ಇದಕ್ಕೆ ನೀನು ಒಪ್ಪದೆ ಇರಲಾರೆಯಷ್ಟೆ! ಎನ್ನಲು ಅರ್ಜುನನು ಅಧೋಮುಖನಾಗಿ ವಿನಯದಿಂದ 'ತಮ್ಮ ಇಷ್ಟಾನುಸಾರ ಮಾಡಬಹುದು' ಎಂದನು. ಆ ಆಟದಲ್ಲಿಯೂ ಶಕುನಿಯೇ ಗೆದ್ದುಕೊಂಡನು. ಬಳಿಕಲಾ ಯುಧಿಷ್ಠಿರನು ಬಲಶಾಲಿಯಾದ ಭೀಮಸೇನನನ್ನು ನೋಡಿ 'ಎಲೈ ವಾಯುಪುತ್ರನೇ, ಅನೇಕ ಕಷ್ಟ ಸಮಯಗಳಲ್ಲೆಲ್ಲಾ ನಮ್ಮನ್ನು ರಕ್ಷಿಸಿ ಕಾಪಾಡಿದೆ. ನಿನ್ನ ಸಾಹಸವು ಜಗತ್ಪ್ರಸಿದ್ಧವಾಗಿದೆ. ಈ ವೇಳೆಯಲ್ಲಿ ಒಂದಾಟಕ್ಕೆ ನಿನ್ನನ್ನೂ ಒಡ್ಡಿ ನೋಡುವೆನು' ಎಂದು ಹೇಳಿ ಆಟಕ್ಕೆ ಪ್ರಾರಂಭಿಸಿದನು.

'ಎಡವಿದಕಾಲೇ ಎಡಹುವುದು' ಎಂಬ ನಾಣ್ಣುಡಿಯಂತೆ ಆ ಆಟವೂಕೂಡ ಯುಧಿಷ್ಠಿರನಿಗೆ ವಿರೋಧವಾಗಿಯೇ ಪರಿಣಮಿಸಿ ಶಕುನಿಗೆ ಗೆಲವುಂಟಾಯಿತು.

ಆಗ ಶಕುನಿಯು ಯುಧಿಷ್ಠಿರನನ್ನು ನೋಡಿ ಸೌಜನ್ಯಭಾವ ದಿಂದ ಕನಿಕರಗೊಳ್ಳುವವನಂತೆ ನಟಿಸುತ್ತಾ ಆತನಿಗೆ ಇಂತೆಂದನು.

'ಎಲೈ ಯುಧಿಷ್ಠಿರನೇ, ಮುಂದೆ ಏನುಮಾಡುವೆ? ನಿನ್ನ ಆಸ್ತಿಯಾವತ್ತೂ ನಮ್ಮ ರಾಜನ ಸ್ವಾಧೀನವಾಯಿತು, ನಿನ್ನ ಮಕ್ಕಳೂ ಸಹೋದರರೂ ನಿನ್ನ ಸೋಲಿನಿಂದ ನಮ್ಮ ವಶರಾದರು. ಇನ್ನು ಉಳಿದಿರುವವನು ನೀನೊಬ್ಬನುಮಾತ್ರವೇ ಅಲ್ಲವೇ,! ಈಗ ಏನು ಮಾಡಬೇಕೆಂದಿರುವೆ ? ನಿನ್ನ ರಾಜ್ಯವೂ ನಮ್ಮೊಡೆಯನರಾಜ್ಯವೂ ಒಂದಾಗಿ ಹೋದುದರಿಂದ ಇವುಗಳಲ್ಲಿ ನಿನಗೆ ಸ್ವಲ್ಪವೂ ಸ್ವಾಮಿತ್ವ ವಿಲ್ಲವು. ಈಗ ನೀನು ಸೋತಿರುವುವುಗಳನ್ನೆಲ್ಲಾ ನಮಗೆಕೊಟ್ಟು ಬಿಟ್ಟು, ದೇಶಭ್ರಷ್ಟನಾಗಿ ಮತ್ತೆಲ್ಲಿಗಾದರೂ ಪರರಾಜ್ಯಕ್ಕೆಹೋಗಿ ಕಾಲವನ್ನುಕಳೆಯಬಹುದು. ಅಥವಾ ವೀರಕ್ಷತ್ರಿಯನಂತೆ ಕಡೆಯ ತನಕ ಆಡಿ, ನಿನ್ನ ಅದೃಷ್ಟವನ್ನು ಪರೀಕ್ಷಿಸಿ ಬಿಡಬಹುದು. ಧೀರ ನಾದ ನೀನು ಮೊದಲನೆಯ ಮಾರ್ಗವನ್ನು ಹಿಡಿಯಲಾರೆ ಎಂದು ನಂಬುತ್ತೇನೆ. ನಿನ್ನ ಅಭಿಪ್ರಾಯವನ್ನು ಹೇಳಿಬಿಡು. ಆಟವನ್ನು ಇಷ್ಟಕ್ಕೇನೇ ನಿಲ್ಲಿಸಿಬಿಡೋಣವೇ ?'

ಈಮಾತನ್ನು ಕೇಳಿ ಯುಧಿಷ್ಠಿರನಿಗೆ ಮುಂದಿನ ಕರ್ತವ್ಯವು ತೋರದೆ ಹೋಯಿತು. ಮನುಷ್ಯನಿಗೆ ಎಷ್ಟರಬುದ್ಧಿ ಇದ್ದರೆ ತಾನೇ ಏನುಫಲ? ದೊಡ್ಡಮ್ಮನು ಕಾಲು ಹಾಕುವಾಗ್ಗೆ ಚಿಕ್ಕ ಮ್ಮನು ಆಕಡೆಯಲ್ಲಿ ನಿಲ್ಲದೆ ಹೊರಕ್ಕೆಓಡುವಳು. ಅಂದರೆ ಅಲಕ್ಷ್ಮೀ ಕಟಾಕ್ಷಕ್ಕೆ ಪಾತ್ರನಾದ ಮನುಷ್ಯನಲ್ಲಿ ಲಕ್ಷ್ಮಿಯು ಇರಲೊ

ಲ್ಲಳು. ಆಗಲಾರಾಜನು ಶಕುನಿಯನ್ನು ನೋಡಿ 'ಎಲೈ ಶಕುನಿಯೇ ಇಷ್ಟು ಆಸ್ತಿಯನ್ನೂ ಒಡಹುಟ್ಟಿದವರನ್ನೂ ಸೋತಮೇಲೆ ನಾನೊಬ್ಬನುಮಾತ್ರ ಎಲ್ಲಿಗೆ ಹೋಗಲಿ? ಈ ಆಟಕ್ಕೆ ನನ್ನನ್ನೇ ಪಣವಾಗಿ ಒಡ್ಡಿ, ಭಗವತ್ಕೃಪೆಯಿದ್ದರೆ ಇದುವರೆಗೆ ಸೋತಿರುವುದನ್ನೆಲ್ಲಾ ಗೆದ್ದುಕೊಳ್ಳುವೆನು. ಇನ್ನೊಂದಾಟವನ್ನು ಆಡಿಬಿಡು' ಎಂದು ಹೇಳಲು ಶಕುನಿಯು ಆಡಿ 'ಇಗೋ ಇದರಲ್ಲಿಯೂ ನಾನೇ ಗೆದ್ದೆನು' ಎಂದು ಕೂಗಿದನು.

ಮತ್ತು ಶಕುನಿಯು ಆತನನ್ನು ನೋಡಿ 'ಎಲೈ ರಾಯನೇ, ದೈವವು ನಮ್ಮ ಕಡೆ ಒಲಿದಿರುವಾಗ ನೀನೇನು ಮಾಡಬಲ್ಲೆ! ಪಾಪ! ಪ್ರತಿ ಒಂದು ಆಟದಲ್ಲಿಯೂ ಸೋಲುತ್ತಾಬಂದು, ಎಲ್ಲವನ್ನೂ ಕಳೆದುಕೊಂಡೆ. ನಿನಗೆ ಮತ್ತೊಂದು ಅಮೂಲ್ಯವಾದ ಆಸ್ತಿ ಇರುವುದನ್ನು ಮರೆತುಬಿಟ್ಟಿದ್ದೀಯೆ ನಿನ್ನ ಧರ್ಮಪತ್ನಿಯಾದ ಪಾಂಚಾಲಿಯೇ ಆ ಘನತರವಾದ ಆಸ್ತಿಯು. ಇದನ್ನೊಂದುಸಾರಿ ಪಣವಾಗಿ ಒಡ್ಡಿ ಆಡಿಬಿಡು. ದೈವವಶಾತ್ ನನೀು ಈಸಲ ಗೆದ್ದರೆ ಇದುವರೆಗೆ ಹತ್ತೊಂಭತ್ತು ಆಟಗಳಲ್ಲಿ ಸೋತಿರುವ ಸಮಸ್ತ ವಸ್ತುಗಳೂ ನಿನ್ನವೇ ಆಗುವುವು. ಸೋತುಬಿಟ್ಟರೆ ನಮ್ಮ ರಾಜರಿಗೇನೇ ಎಲ್ಲವೂ ಸೇರಿಹೋಗುವುವು.

ಈಮಾತು ಹೇಳಿದುದನ್ನು ಕೇಳಿ ಯುಧಿಷ್ಠಿರನು ತನಗೆ ಮತ್ತಾವ ಉಪಾಯವೂ ತೋರದ ಕಾರಣ ಇದೇ ಕೊನೆಯ ಆಟವೆಂದು ಪಾಂಚಾಲಿಯನ್ನು ಪಣವಾಗಿ ಒಡ್ಡಿ ಆಡಲು ಒಪ್ಪಿದನು. ಆಗ ಸಭಿಕರಲ್ಲಿ ಕೆಲವರು ಈ ದ್ರೌಪದಿಯ ಪಾತಿವ್ರತ್ಯ ಮಹಿಮೆಯಿಂದಲಾದರೂ ಯುಧಿಷ್ಠಿರನಿಗೆ ಗೆಲವಾಗಲಿ. ಎನ್ನುತ್ತಿದ್ದರು. ಇದನ್ನು ಕಂಡು ಭೀಷ್ಮದ್ರೋಣ ಕೃಪಾದಿಗಳು ಖಿನ್ನರಾಗಿ ತಲೆ

ತಗ್ಗಿಸಿಕೊಂಡರು. ವಿದುರನು ತಲೆಯಮೇಲೆ ಕೈಯಿಟ್ಟುಕೊಂಡು ಯೋಚಿಸುತ್ತಾ ಕುಳಿತನು. ಸಭಾಸದರ ಕಣ್ಣುಗಳಿಂದ ನೀರು ಧಾರೆಯಾಗಿ ಸುರಿಯುತ್ತಿದ್ದಿತು. ದುರ್ಯೋಧನನು ನಗುತ್ತಿದ್ದನು. ದುಶ್ಶಾಸನ ಕರ್ಣ ಸೈಂಧವರು ಒಬ್ಬರಮುಖವನ್ನೊಬ್ಬರು ನೋಡಿ, ಕೇಕೆ ಹಾಕಿ ನಗುತ್ತಿದ್ದರು.

ಇನ್ನು ಹೇಳತಕ್ಕುದೇನು ? ಶಕುನಿಯು‘ ಇಗೋ ಈ ಆಟವನ್ನೂ ಗೆದ್ದುಕೊಂಡೆನು. ಪಾಂಚಾಲಿ ಸಹಿತರಾದ ಪಾಂಡವರೆಲ್ಲರೂ ತಮ್ಮ ಸಮಸ್ತ ಆಸ್ತಿಗಳೊಂದಿಗೆ ಕುರುಪತಿಯಾದ ದುರ್ಯೋಧನನ ಸ್ವಾಧೀನವಾಗಿಬಿಟ್ಟರು’ ಎಂದು ಗಟ್ಟಿಯಾಗಿ ಅಬ್ಬರಿಸಿದನು. ಸಭೆಯಲ್ಲೆಲ್ಲಾ ದೊಡ್ಡ ಗದ್ದಲವಾಯಿತು. ಧೃತರಾಷ್ಟ್ರನು ಇದೇನು ಗದ್ದಲವೆಂದು ವಿಚಾರಿಸಿ, ನಡೆದ ಸಮಾಚಾರವನ್ನು ವಿವರವಾಗಿ ಕೇಳಿ, ಮನನೊಂದು ಕಣ್ಣೀರು ಹಾಕುತ್ತಿದ್ದನು. ಆಗ ಸಭಿಕರಲ್ಲಿ ಕೆಲವರು ಸ್ತಂಭೀಭೂತರಾದರು. ಕೆಲವರು ಚಿತ್ರಾರ್ಪಿತರಂತೆಯೂ ಕೆಲವರು ಮೃತರಂತೆಯೂ, ಕೆಲವರು ಗ್ರಹಗ್ರಸ್ತರಂತೆಯೂ ಆಗಿಬಿಟ್ಟರು. ಸ್ವಲ್ಪಹೊತ್ತಿನತನಕ ಸಭೆಯು ಅಲೆಗಳಿಲ್ಲದ ಸಮುದ್ರದಂತೆ ನಿಶ್ಶಬ್ದವಾಗಿದ್ದಿತು.



# ಹತ್ತನೆಯ ಸಂಧಿ.

ಸೂ॥ ದುಶ್ಶ್ಯಾಸನನು ಅಣ್ಣನ ಅಪ್ಪಣೆಯಿಂದ ದ್ರೌಪದಿಯ ವಸ್ತ್ರಾಪಹರಣಮಾಡತೊಡಗಿದನು. ಪತಿವ್ರತೆಯಾದ ಆಕೆಯು ತನ್ನ ಮಾನ ಸಂರಕ್ಷಣೆಮಾಡಬೇಕೆಂದು ಶ್ರೀಕೃಷ್ಣನನ್ನು ಪ್ರಾರ್ಥಿಸಿದಳು. ಆಗಲಾಸ್ವಾಮಿಯು ಆಕೆಯ ವಸ್ತ್ರವು ಅಕ್ಷಯವಾಗಲೆಂದು ಅನುಗ್ರಹಿಸಿ ಕಾಪಾಡಿದನು.

ಸಭೆಯು ನಿಶ್ಶಬ್ದವಾಗಿತ್ತು. ಆಗ ದುರ್ಯೋಧನನು ವಿದುರನನ್ನು ನೋಡಿ ಇಂತೆಂದನು.—"ಅಯ್ಯಾ, ಈ ಪಾಂಡವರೆಲ್ಲರೂ ನಮ್ಮ ದಾಸರಾದರು. ಪಾಂಚಾಲಿಯು ನಮ್ಮ ದಾಸಿಯಾಗಿರುವುದರಿಂದ ಆ ತೊತ್ತನ್ನುಸಭೆಗೆ ಕರೆದುಕೊಂಡು ಬಾ. ಇತರ ದಾಸಿಯರೊಂದಿಗೆ ಕೆಲಸಮಾಡಿಕೊಂಡಿರಲಿ."

ಇದನ್ನು ಕೇಳಿ ವಿದುರನಿಗೆ ಬಹು ರೋಷಬಂದಿತು. ಸಾಧ್ವಿಯನ್ನು ನಿಂದಿಸಿದುದೂ ತನ್ನನ್ನೇ ಈ ಕೆಲಸಕ್ಕೆ ನಿಯಮಿಸಿದುದೂ ಸಹಿಸತಕ್ಕುವೇ ? ಅವನು ದುರ್ಯೋಧನನನ್ನು ಕುರಿತು 'ಕುರುಪತಿಯೇ, ನಿನಗೆ ಹುಚ್ಚು ಹಿಡಿಯಿತೇ? ಪಾಂಚಾಲಿಯು ಸಾಮಾನ್ಯ ಸ್ತ್ರೀಯೆಂದು ಭಾವಿಸಿದೆಯಾ ? ಪತಿವ್ರತೆಯಾದ ಆಕೆಯ ಕೋಪದ ಇದಿರಿಗೆ ನೀವು ನಿಲ್ಲಬಲ್ಲಿರಾ ? ವಂಶಕ್ಷಯಕರವಾದ ಈ ಬುದ್ಧಿಯು ನಿನಗೇಕೆ ಹುಟ್ಟಿತು ? ಪತಿವ್ರತಾ ಶಿರೋಮಣಿಯಾದ ದ್ರೌಪದಿಯು ದಾಸಿಯಾಗತಕ್ಕವಳಲ್ಲ. ಕಾಲಪಾಶಬದ್ಧನಾಗಿ ಬಾಲಬುದ್ಧಿಯುಳ್ಳ ನೀನು ಜ್ಞಾನವಿಲ್ಲದೆ ಇಂತಹ ಅಕೃತ್ಯಗಳನ್ನು ಮಾಡುತ್ತಿರುವೆ. ಹಸಿದ ಹುಲಿಯನ್ನು ರೇಗಿಸುವಂತೆಯೂ, ಕ್ರೂರಸರ್ಪದ ಬಾಯಲ್ಲಿ ಕೈಯನ್ನಿಟ್ಟಂತೆಯೂ, ಆ ಸಾಧ್ವಿಯಾದ ದ್ರೌಪದಿಯನ್ನು

ಈರೀತಿಯಲ್ಲಿ ಬಯಲಿಗೆಳೆದು ಕೆಣಕಿ ಅಪಾರ ಶೌರ್ಯ ಧುರಂಧರ ರಾದ ಈ ಪಾಂಡವರನ್ನು ಸಿಟ್ಟಿಗೆಬ್ಬಿಸುವುದರಿಂದ ನಿನ್ನ ನಾಶವನ್ನು ನೀನೇ ತಂದುಕೊಳ್ಳುವೆ. ಅಯ್ಯಾ, ದುರ್ಯೋಧನಾ, ಬೇಡ. ಈ ನೀಚಬುದ್ಧಿಯನ್ನು ಬಿಡು.

ದುರ್ಯೋ.—ಎಲೈ ವಿದುರನೇ, ನನ್ನದು ನೀಚಬುದ್ಧಿಯೇ! ಮಹಾರಾಜನಾದ ನನ್ನ ಮನೆಯಲ್ಲಿ ಲಕ್ಷ್ಮಿಯೇ ದಾಸಿಯಾಗಿರುವಾಗ ಹಲವರ ಹೆಂಡತಿಯಾದ ಆ ಪಾಂಚಾಲಿಯು ದಾಸಿಯಾಗತಕ್ಕದು ಏನು ಹೆಚ್ಚು ? ಹುಚ್ಚುಹುಚ್ಚಾಗಿ ಮಾತನಾಡಬೇಡ. ಸಾಕು. ಮುಚ್ಚು.

ವಿದು.—(ಸಭಿಕರನ್ನು ನೋಡಿ) ಕೇಳಿದಿರಾ! ಇವನ ಕೆಚ್ಚು ನುಡಿಗಳು ಹೇಗಿವೆ? ಆ ಲಕ್ಷ್ಮಿಯೇ ಇವನ ಮನೆಯ ದಾಸಿಯಂತೆ! ಇಂತಹ ದುರಹಂಕಾರಿಗಳಿಗೆ ಚಿಕಿತ್ಸೆಯೇ ಇಲ್ಲ, ಸೋರೆಯ ಬುರುಡೆಗಳನ್ನಾದರೂ ನೀರಿನಲ್ಲಿ ಮುಳುಗಿಸಬಹುದು, ದೊಡ್ಡ ಬಂಡೆಗಳನ್ನಾದರೂ ನೀರಿನಲ್ಲಿ ತೇಲಿಸಬಹುದು. ಮೂರ್ಖಾಗ್ರಣಿಯಾದ ಈ ಕೌರವನಿಗೆ ಬುದ್ಧಿಹೇಳುವುದು ಕಷ್ಟ. ಇವನು ಸಸ್ಯಜಾತಿಯಲ್ಲಿ ಬಿದಿರುಪೊದೆಯಂತೆ ಫಲವನ್ನು ಧರಿಸಿ, ಆತ್ಮನಾಶಮಾಡಿಕೊಳ್ಳುವುದೇ ನಿಜವು. ಇವನ ದೆಸೆಯಿಂದ ಕುರುಕುಲಕ್ಕೆ ಅಂತ್ಯಕಾಲವು ಸಮೀಪಿಸಿತು.

ಈಮಾತನ್ನು ಕೇಳಿ ದುರ್ಯೋಧನನು ಸಿಟ್ಟಿನಿಂದ ಛೀ ಛೀ ! ಎಂದು ವಿದುರನನ್ನು ತಿರಸ್ಕರಿಸಿ, ಪ್ರಾತಿಕಾಮಿಯೆಂಬ ಸಾರಥಿಯನ್ನು ಕರೆದು 'ಎಲಾ ! ಈ ವಿದುರನು ಪಾಂಡವರ ಮೇಲಣ ಸ್ನೇಹದಿಂದ ಅಂತಃಪುರಕ್ಕೆ ಹೋಗಲು ಹಿಂದೆಗೆಯುವನು. ನೀನು ಈಗಲೇ ಹೋಗಿ ಪಾಂಚಾಲಿಯನ್ನು ತಡೆಮಾಡದೆ ಸಭೆಗೆ ಕರೆದುಕೊಂಡು

ಬಾ.' ಎಂದು ಕಳುಹಿದನು. ಆ ಸೂತನು ಜಾಗ್ರತೆಯಲ್ಲಿ ದ್ರೌಪದಿ ಇರುವ ಅಂತಃಪುರಕ್ಕೆ ಹೋಗಿ ಆಕೆಯನ್ನು ನೋಡಿ ಇಂತೆಂದನು.

ಪ್ರಾತಿ.—ತಾಯಿ, ತಮ್ಮ ಪತಿಯಾದ ಯುಧಿಷ್ಠಿರನು ಕುರುರಾಜನೊಡನೆ ಜೂಜನಾಡಿ ತನ್ನ ಸಕಲೈಶ್ವರ್ಯವನ್ನೂ ಸೋತು ದಲ್ಲದೆ, ತಮ್ಮಂದಿರನ್ನೂ, ತನ್ನನ್ನೂ, ಕೊನೆಗೆ ನಿಮ್ಮನ್ನೂ ಸೋತು ಬಿಟ್ಟನು. ಆದುದರಿಂದ ಪತ್ನೀಸಹಿತರಾದ ಪಾಂಡವರೆಲ್ಲರೂ ನನ್ನೊಡೆಯನಾದ ದುರ್ಯೋಧನನಿಗೆ ದಾಸರಾಗಿರುವರು. ನಿಮ್ಮನ್ನು ತಮ್ಮ ಅರಮನೆಯ ದಾಸಿಯರ ಜತೆಯಲ್ಲಿ ಸೇರಿಸಲು ಸಭೆಗೆ ಕರೆದುತರಬೇಕೆಂದು ನಮ್ಮ ಮಹಾರಾಜರವರು ಆಜ್ಞಾಪಿಸಿರುವರು. ಹೊರಟುಬನ್ನಿರಿ.

ದ್ರೌಪದಿ.—ಎಲೈ ಸೂತನೇ, ಅದೇನು? ವಿವರವಾಗಿ ಹೇಳು. ಜೂಜನಾಡುವುದಕ್ಕೆ ಕುಳಿತವನಾದರೂ ಯಾವನು ತಾನೇ ತನ್ನ ಧರ್ಮಪತ್ನಿಯನ್ನು ಪಣವಾಗಿ ಒಡ್ಡುವನು? ಇದರಲ್ಲಿ ಏನೋ ಕೃತ್ರಿಮವಿರಬಹುದೆಂದು ತೋರುತ್ತದೆ.

ಪ್ರಾತಿ.—ಅಮ್ಮಾ, ಅಂತಹ ಕೃತ್ರಿಮವೇನೂ ನಡೆಯಲಿಲ್ಲ. ಯುಧಿಷ್ಠಿರನು ತನ್ನ ಸಕಲವಾದ ಆಸ್ತಿಯನ್ನೂ ಒಂದೊಂದಾಗಿ ಹದಿಮೂರಾಟಗಳಲ್ಲಿ ಒಡ್ಡಿ ಸೋತುಬಿಟ್ಟಮೇಲೆ ಬೇರೆ ಪಣದ್ರವ್ಯವಿಲ್ಲದುದರಿಂದ ಮುಂದಿನ ಆಟದಲ್ಲಿ ತನ್ನ ಮಕ್ಕಳನ್ನು ಒಡ್ಡಿದನು. ನಾಲ್ಕು ಆಟಗಳಲ್ಲಿ ಬಳಿಕ ತಮ್ಮಂದಿರನೊಡ್ಡಿದನು. ತರುವಾಯ ತನ್ನನ್ನು ಪಣವಾಗಿಟ್ಟು ಆಡಿ ಸೋತುಹೋದನು. ಆಮೇಲೆ ಇಪ್ಪತ್ತನೆಯ ಆಟದಲ್ಲಿ ನಿಮ್ಮನ್ನು ಪಣವಾಗಿ ಒಡ್ಡಿ ಸೋತುಬಿಟ್ಟನು. ಇಷ್ಟೇ ಸಮಾಚಾರ.

ದ್ರೌಪದಿ.—ಎಲೈದೂತನೇ, ನೀನು ಸಭೆಗೆಹೋಗಿ ಮಹಾರಾಜನಾದ ಯುಧಿಷ್ಠಿರನನ್ನೇ ಕೇಳು, ಆತನು ತನ್ನನ್ನು ಮೊದಲು

ಸೋತು ಬಳಿಕ ನನ್ನನ್ನು ಸೋತನೆ? ಅಥವಾ ನನ್ನನ್ನು ಒಡ್ಡಿ ಸೋತಮೇಲೆ ತಾನು ಸೋತನೇ? ಇದನ್ನು ತಿಳಿದು ಬಂದು ನನ್ನ ಸಂಶಯವನ್ನು ಬಿಡಿಸಿ ಕರೆದುಕೊಂಡು ಹೋಗಪ್ಪಾ.

ದ್ರೌಪದಿಯ ಈ ಮಾತಿಗೆ ಉತ್ತರ ಕೊಡಲಾರದೆ ಆ ಪ್ರಾತಿಕಾಮಿಯು ಅಲ್ಲಿಂದ ಸಭೆಗೆ ಬಂದು ಯುಧಿಷ್ಠಿರನನ್ನು ನೋಡಿ, "ಎಲೈ ರಾಜನೇ, ನೀನು ನಿನ್ನನ್ನು ಸೋತಬಳಿಕ ತನ್ನನ್ನು ಸೋತೆಯಾ? ಅಥವಾ ಮುಂಚೆಯೇ ತನ್ನನ್ನು ಸೋತು ಬಳಿಕ ಜೂಜಿನಲ್ಲಿ ನೀನು ಸೋತೆಯಾ ?" ತಿಳಿದು ಬರಬೇಕೆಂದು ದ್ರೌಪದಿಯು ಹೇಳಿ ಕಳುಹಿರುವಳು. ಎಂದನು. ಯುಧಿಷ್ಠಿರನು ಈಮಾತಿಗೆ ಯಾವ ಉತ್ತರವನ್ನೂ ಕೊಡದೆ ಸುಮ್ಮನಿದ್ದನು. ಆಗ ದುರ್ಯೋಧನನು ಸೂತನನ್ನು ನೋಡಿ 'ಎಲಾ ಪ್ರಾತಿಕಾಮಿ, ತಲೆಯೆಲ್ಲಾ ಹರಟುತ್ತೀಯಾ? ನಿನಗೆ ನನ್ನಮಾತು ಮುಖ್ಯವೋ, ಆ ಹೆಂಗಸಿನ ಮಾತು ಮುಖ್ಯವೋ, ನೀನು ಅವಳನ್ನು ಕರೆದುತಾರದೆ, ನನ್ನಆಜ್ಞೆಯನ್ನು ಉಲ್ಲಂಘಿಸಿದ್ದು ದೊಡ್ಡತಪ್ಪು. ಈಸಾರಿಗೆ ಮನ್ನಿಸಿದ್ದೇನೆ. ಬದಲುಹೇಳದೆ ಈಗಲೇ ಹೋಗಿ ಅವಳನ್ನು ಕರೆದುಕೊಂಡು ಬಾ. ಅವಳ ಸಂಶಯವೇನಿದ್ದರೂ ಈ ಸಭೆಯಲ್ಲಿಯೇ ಬಗೆಹರಿಸಿಕೊಳ್ಳಲಿ' ಎಂದು ಗದರಿಸಿ ಹೇಳಿದನು.

ಆದೂತನು ರಾಜಾಜ್ಞೆಗೆ ಹೆದರಿ, ತತ್ಕ್ಷಣವೇ ಅಂತಃಪುರಕ್ಕೆ ಹೋಗಿ ಪಾಂಚಾಲಿಗೆ ಈ ಸುದ್ದಿಯನ್ನು ತಿಳಿಸಿದನು. ಅದಕ್ಕಾ ಸಾಧ್ವಿಯು 'ಎಲೈ ಪ್ರಾತಿಕಾಮಿ, ನನ್ನ ಸಂಶಯವನ್ನು ಪರಿಹರಿಸಿಕೊಳ್ಳದೆ ನಾನು ಹೇಗೆ ಸಭೆಗೆ ಬರಲಿ? ಇದೂಅಲ್ಲದೆ ಈಗ ನಾನು ರಜಸ್ವಲೆಯಾಗಿ ಒಂದೇಬಟ್ಟೆಯಲ್ಲಿರುವೆನು. ಇಂತಹ ಸ್ಥಿತಿಯಲ್ಲಿ ರಾಜಸಭೆಗೆ ಬರಲಾರೆನು. ಹೋಗಿ ಹೇಳು.' ಎಂದಳು.

ಪ್ರಾತಿಕಾಮಿಯು ರಾಜಪತ್ನಿಯನ್ನು ಬಲಾತ್ಕರಿಸಿ ಕರೆದೊಯ್ಯಲು ಸಾಧ್ಯವಿಲ್ಲದೆ, ಈಸಾರಿ ರಾಜನು ಏನುಮಾಡುವನೋ ಎಂಬ ಹೆದರಿಕೆಯಿಂದ ದೀನವದನನಾಗಿ ಸಭೆಗೆ ಬಂದು ನಿಂತನು. ದುರ್ಯೋಧನನು ಅವನ ಸ್ಥಿತಿಯನ್ನುನೋಡಿ 'ಎಲೋ ಮುಠ್ಠಾಳಾ, ಇಷ್ಟುಮಟ್ಟಿಗೆ ಹೇಳಿದ ಕೆಲಸ ಮಾಡಿಕೊಂಡು ಬಾರದೆ ಹೋದೆಯಾ? ' ಎಂದು ಬೈದು, ತನ್ನತಮ್ಮನನ್ನುನೋಡಿ 'ದುಶ್ಶಾಸನಾ ಈ ದೂತನು ಭೀಮನ ಭಯದಿಂದ ದ್ರೌಪದಿಯನ್ನು ಕರೆದುತರಲು ಹೆದರುವನು. ನೀನೇ ಹೋಗಿ ತತ್‌ಕ್ಷಣವೇ ಅವಳನ್ನು ಕರೆದುಕೊಂಡು ಬಾ. ಅವಳು ಯಾವ ನೆವ ಹೇಳಿದರೂ ಬಿಟ್ಟು ಬರಬೇಡ. ಬರುವದಿಲ್ಲವೆಂದು ಅಡ್ಡಿಹೇಳಿದರೆ ಮುಂದಲೆಯನ್ನಾದರೂ ಹಿಡಿದು ಎಳೆದುಕೊಂಡು ಬಾ. ನಮ್ಮ ದಾಸರಾದ ಈ ಪಾಂಡವರಿಗೋಸ್ಕರ ಹೆದರಬೇಕಾಗಿಲ್ಲ. ಹೋಗು' ಎಂದು ಕಳುಹಿದನು.

ಮನುಷ್ಯರು ತಮ್ಮ ಸ್ವಭಾವವನ್ನು ಎಂದಿಗೂ ಬಿಡರು. ಉತ್ತಮ ಪುರುಷರು ಐಶ್ವರ್ಯವೂ ಅಧಿಕಾರವೂ ಬಂದಹಾಗೆಲ್ಲಾ ವಿನಯಾದಿ ಸದ್ಗುಣಗಳಿಂದ ತಗ್ಗಿನಡೆದು ತಮ್ಮ ಸುಗುಣಗಳನ್ನು ಜಗದ್ವಿಖ್ಯಾತಗೊಳಿಸುವರು. ದುರ್ಜನರಾದರೋ, ಯಾವಾಗಲೂ ತಮ್ಮ ದುಸ್ಸ್ವಭಾವದಿಂದ ಜನರಿಗೆ ತೊಂದರೆಯುಂಟಾಗುವ ಕೆಲಸಗಳನ್ನೇ ಮಾಡುತ್ತಿರುವರು, ಅಂತವರಿಗೆ ಗುರುಹಿರಿಯರ ಭಯವಾಗಲಿ, ಲೋಕಾಪವಾದ ಭೀತಿಯಾಗಲಿ, ದೈವದ ಅಂಜಿಕೆಯಾಗಲಿ ಇಲ್ಲ. ದುರ್ಯೋಧನನು ಪಾಂಡವರ ಐಶ್ವರ್ಯವನ್ನುನೋಡಿ, ಹೊಟ್ಟೇಕಿಚ್ಚಿನಿಂದ ಅದನ್ನು ಕಸಿದುಕೊಳ್ಳಬೇಕೆಂದು ಪ್ರಯತ್ನಮಾಡಿದನು. ಅವನ ಆಶೆಯಂತೆ ಕಪಟ ದ್ಯೂತದಲ್ಲಿ ಸುಲಭವಾಗಿಯೇ ಆತನ ಯಾವತ್ತೂ ಐಶ್ವರ್ಯಗಳು ಕುರುಪತಿಯವಶವಾದುವು. ಅಷ್ಟಕ್ಕೆ

ತೃಪ್ತನಾಗಬಾರದೆ? ಮತ್ತೆ ಜೂಜನ್ನು ಆಡಿಸಿ, ಮಕ್ಕಳನ್ನೂ, ಆ ಪಾಂಡವರನ್ನೂ ಗೆದ್ದನು. ಅಲ್ಲಿಗೂ ಸಾಲದೆ ಸತೀಮಣಿಯಾದ ಪಾಂಚಾಲಿಯನ್ನೂ ಒಡ್ಡಿಸಿ ಗೆದ್ದುಕೊಂಡನು. ಇಷ್ಟು ತನ್ನವಶವಾದಮೇಲೆ ಸಂತೋಷದಿಂದ ಆ ಪಾಂಡವರನ್ನು ಮನಸ್ಸುಬಂದಂತೆ ಬಿಟ್ಟುಬಿಡಬಹುದಾಗಿತ್ತು. ಪಾಪ! ಅಬಲೆಯಾದ ದ್ರೌಪದಿಗೆ ರಾಜಸಭೆಯಲ್ಲಿ ಅವಮಾನಮಾಡಿಸಬೇಕೆಂದು ಹಟ ಹಿಡಿದನು. ಅವನ ಕಾರ್ಯಕ್ಕೆಯಾರು ಸಹಾಯಕರಾಗಬೇಕು? ಕರ್ಣ ಶಕುನಿ ಜಯದ್ರಥ ದುಶ್ಶಾಸನರು ಮಾತ್ರವೇ ಆತನ ಪರಮಾಪ್ತರು. ಇವರಲ್ಲಿ ಕೊನೆಯವನೇ ಈ ಕಾರ್ಯಕ್ಕೆ ತಕ್ಕವನೆಂಬ ಬುದ್ಧಿಯು ಅವನಿಗೆ ಹುಟ್ಟಿದ್ದು ಮುಂದಿನ ಮಹಾಯುದ್ಧಕ್ಕೂ, ಕೌರವನ ಕುಲವಿನಾಶಕ್ಕೂ ಬೀಜ ಬಿತ್ತಿಸಿದಹಾಗೆ ಆಯಿತು. ಇದು ಆತನ ದುಷ್ಕರ್ಮದ ವಾಸನೆಯೋ ಅಥವಾ ದೌರ್ಜನ್ಯದ ಸ್ವಾಭಾವಿಕ ಚೇಷ್ಟೆಯೋ, ಇಲ್ಲವೇ ಭೂಭಾರ ನಿವಾರಣೆಗಾಗಿ ಅವತರಿಸಿದ ಶ್ರೀಕೃಷ್ಣ ಪರಮಾತ್ಮನ ಸಂಕಲ್ಪವೋ, ಏನೇ ಆಗಲಿ, ಭವಿತವ್ಯತೆಯು ತಪ್ಪತಕ್ಕದಲ್ಲವೆಂದು ತಿಳಿಯಬೇಕು.

ದುರಾತ್ಮನಾದ ದುಶ್ಶಾಸನನು ತಮ್ಮಣ್ಣನ ಆಜ್ಞೆಯಂತೆ ಪಾಂಚಾಲಿಯ ಅಂತಃಪುರಕ್ಕೆಹೋಗಿ, ಆಕೆಯನ್ನು ನೋಡಿಇಂತೆಂದನು.

ದುಶ್ಶಾಸ.—ಅತ್ತಿಗೇ, ಜೂಜಿನ ಆಟದಲ್ಲಿ ನಿನ್ನ ಗಂಡನು ನಿನ್ನನ್ನು ಸೋತುಬಿಟ್ಟುದನ್ನು ಕೇಳಿಲ್ಲವೆ? ನಮ್ಮಣ್ಣನು ಸಭೆಗೆ ಕರೆದುತರಬೇಕೆಂದು ಎರಡುವೇಳೆ ಪ್ರಾತಿಕಾಮಿಯನ್ನು ಕಳುಹಿದ್ದರೂ ನೀನು ಬಾರದೆ ಹೋದುದು ತಪ್ಪು. ಜೂಜಿನಪಣದಂತೆ ನೀನು ಕುರುರಾಯನ ದಾಸಿಯಾಗಿರುವುದರಿಂದ ಆತನ ಆಜ್ಞೆಯಂತೆ ಕೂಡಲೇ ಹೊರಟುಬಾ. ನೀನು ಪ್ರಾತಿಕಾಮಿಯ ಸಂಗಡ ಹೇಳಿ

ದಂತೆ ನ್ಯಾಯವಿಮರ್ಶೆಮಾಡಿಸುವುದಕ್ಕೆ ನಿನಗೆ ಅಧಿಕಾರವೇ ಇಲ್ಲ. ಬೇಗ ಹೊರಡುವುದು ನಿನಗೆ ಕ್ಷೇಮಕರವಾದುದು.

ದ್ರೌಪದಿ.—ತಮ್ಮಾ, ಏಕೆ ಇಷ್ಟು ಕೋಪಿಸುವೆ? ನೀವು ಧರ್ಮಜ್ಞರು, ನಾನು ನಿಮ್ಮ ಹಿರಿಯಣ್ಣನಾದ ಧರ್ಮರಾಯನ ಪತ್ನಿಯಲ್ಲವೆ? ನನ್ನನ್ನು ನಿಮ್ಮ ತಾಯಿಯಾದ ಗಾಂಧಾರಿಯಂತೆ ಮೈದುನರಾದ ನೀವು ತಿಳಿಯುವುದು ನಿಮ್ಮ ಧರ್ಮವಾಗಿದೆ. ನಿಮ್ಮಣ್ಣನು ಮಹಾರಾಜನಾಗಿದ್ದಾನೆ. ಅಪರಾಧಿಗಳಿಗೆ ದಂಡನೆಮಾಡಿ, ಆರ್ತರನ್ನು ಕಾಪಾಡತಕ್ಕ ಅಧಿಕಾರವನ್ನು ಪಡೆದಿರುವ ನಿಮ್ಮಂತವರೇ ಗುರುಹಿರಿಯರೆಂದು ಗಣಿಸದೆ ಇಂತಹ ಅಕೃತ್ಯಮಾಡಿದರೆ ಈ ರಾಜ್ಯದಲ್ಲಿ ಧರ್ಮವು ನಿಲ್ಲುವುದು ಹೇಗೆ? ಎಲೈ ದುಶ್ಶಾಸನಾ, ನಾನು ಹೆಂಗುಸಲ್ಲವೆ? ನಿನಗೂ ಅಕ್ಕತಂಗಿಯರಿಲ್ಲವೆ? ನಿನ್ನ ತಂಗಿಯಾದ ದುಶ್ಶಳೆಯಂತೆ ನನ್ನನ್ನು ನೋಡಪ್ಪಾ! ನಿಷ್ಕಾರಣವಾಗಿ ನನ್ನನ್ನು ಏತಕ್ಕೆ ತೊಂದರೆಪಡಿಸುವಿರಿ? ನಾನುಮಾಡಿದ ಅಪರಾಧವೇನು? ರಜಸ್ವಲೆಯಾದ ನಾನು ರಾಜಸಭೆಗೆ ಬರಬಹುದೆ? ನಿಮ್ಮಣ್ಣನುಕೂಡ ನನ್ನವಿಷಯದಲ್ಲಿ ಏಕೆ ಇಷ್ಟು ಹಟಮಾಡುತ್ತಿರುವನು? ರಾಜಾಜ್ಞೆಯೆಂಬುದು ನಿನಗೆ ಮಾತ್ರವೇ ಅಲ್ಲ. ಸರ್ವರಿಗೂ ಮಾನ್ಯವೇ, ಆದರೂ ದೇಶಕಾಲ ರೀತಿಗಳನ್ನು ನೋಡಿ ನಡಿಸಬೇಕಾದುದು ನಿಮ್ಮ ಕರ್ತವ್ಯವಲ್ಲವೆ?

ದುಶ್ಶಾ.—ಎಲೌ ದ್ರೌಪದೀ, ನಿನ್ನ ನ್ಯಾಯಗೀಯಗಳನ್ನು ವಿಚಾರಮಾಡುವಹೊತ್ತು ಇದಲ್ಲ. ರಾಜನಾದ ದುರ್ಯೋಧನನು ನಿನ್ನನ್ನು ಕರೆದುತರಬೇಕೆಂದು ಆಜ್ಞಾಪಿಸಿದ್ದಾನೆ. ಆದುದರಿಂದ ಈಗ ನೀನು ಏನು ಹೇಳಿಕೊಂಡರೂ ನಾನು ಕೇಳಲಾರೆನು. ನಿನ್ನ ಸಂಶಯಗಳು ಏನಿದ್ದರೂ ಸಭೆಗೆ ಬಂದು, ಮಹಾರಾಜನನ್ನು ಕೇಳಿ, ಬಗೆ

ಹರಿಸಿಕೊಳ್ಳಬಹುದು. ನೀನು ಮಹಾರಾಣಿಯಾಗಿದ್ದಾಗ ನಿನಗೆ ಎಲ್ಲಾ ಮರ್ಯಾದೆಗಳೂ ಸಲ್ಲಬಹುದು. ಈಗ ಜೂಜಿನಲ್ಲಿ ಜಿತಳಾಗಿ ನೀನು ನಮ್ಮ ದಾಸಿಯಾಗಿರುವುದರಿಂದ ಒಡೆಯನ ಅಪ್ಪಣೆಯಂತೆ ಕೂಡಲೇ ಹೊರಟುಬಾ. ಬಾರದೆ ತಪ್ಪಿದರೆ ಬಲಾತ್ಕಾರದಿಂದಲಾದರೂ ಕರೆದೊಯ್ಯುವೆನು. ಹೆಚ್ಚುಮಾತುಗಳಿಂದ ಕಾಲವಿಳಂಬ ಮಾಡಬೇಡ.

ಹೀಗೆ ಗರ್ಜಿಸುತ್ತಿರುವ ಆ ದುಶ್ಶಾಸನನ ಬಿರುನುಡಿಗಳನ್ನು ಕೇಳಿದ ಕೂಡಲೇ ಆ ತನ್ವಂಗಿಯು ಬಿರುಗಾಳಿಯಿಂದ ನಡುಗುತ್ತಿರುವ ಎಳೆಬಾಳೆಯ ಗಿಡದಂತೆ ಗಡಗಡನೆ ನಡುಗುತ್ತಾ ತಲೆತಗ್ಗಿಸಿಕೊಂಡು ಮುಂದೆ ಏನು ಮಾಡಬೇಕೆಂಬುದು ತೋರದೆ ಸ್ತಬ್ಧಳಾಗಿ ನಿಂತಿದ್ದಳು. ಆ ದುರಾತ್ಮನು ಸಾಧ್ವೀಮಣಿಯಾದ ಆ ದ್ರೌಪದಿಯನ್ನು ಸಾಮಾನ್ಯ ಸ್ತ್ರೀಯರಿಗಿಂತಲೂ ಹೀನವಾಗಿ ಭಾವಿಸಿ, ನೀಲವಾಗಿಯೂ, ಅತಿದೀರ್ಘವಾಗಿಯೂ, ಕೋಮಲವಾಗಿಯೂ, ಇರುವ ಆಕೆಯ ಮುಡಿಯನ್ನು ನಿಷ್ಕರುಣೆಯಿಂದ ಹಿಡಿದುಕೊಂಡು ಸಭೆಗೆ ಎಳೆದು ತರುತ್ತಿದ್ದನು. ಹಾಹಾ! ರಾಜಸೂಯಯಾಗದ ಅವಭೃಥಸ್ನಾನದಿಂದ ಅತಿ ಪವಿತ್ರವಾದ ಆ ಪಾಂಚಾಲಿಯ ಸುಗಂಧ ಪರಿಮಳಿತವಾದ ವೇಣಿಯು ಈ ದುರುಳನ ಕೈಯ ಎಳೆತದಿಂದ ಬಿಚ್ಚಿಹೋಯಿತು. ಅನಾಥೆಯಾದ ಆ ಸಾಧ್ವಿಯು ಈ ಅವಮಾನವನ್ನು ಸಹಿಸಲಾರದೆ ದುಶ್ಶಾಸನನನ್ನು ಕುರಿತು ಇಂತೆಂದಳು.

ಮೈದುನನೇ, ನನ್ನ ತುರುಬು ಹಿಡಿದೆಳೆಯುತ್ತಿರುವುದು ನಿನಗೆ ಮರ್ಯಾದೆಯಲ್ಲ. ಇಂತಹ ಅವಮಾನವನ್ನು ನಾನು ಖಂಡಿತವಾಗಿಯೂ ಸಹಿಸಲಾರೆನು. ಪುರುಷರಾಗಲಿ ಸ್ತ್ರೀಯರಾಗಲಿ ರಾಜಸಭೆಗೆ ಬರಬೇಕಾದರೆ ತಕ್ಕ ಮರ್ಯಾದೆಯಿಂದ ಅಲಂಕೃತರಾಗಿ ಬರಬೇಕು.

ವಸ್ತ್ರಭೂಷಣಾದ್ಯಲಂಕಾರಗಳಿಲ್ಲದೆ ಮಲಿನಾಂಗರಾಗಿ ಸಭೆಗೆ ಬರುವುದು ಆಸ್ಥಾನಕ್ಕೆ ಅವಮಾನಮಾಡಿದಂತೆ ಆಗುವುದು. ರಜಸ್ವಲೆಯಾಗಿ ಏಕವಸ್ತ್ರಧರಳಾಗಿರುವ ನನ್ನನ್ನು ಈಗಿನ ಸ್ಥಿತಿಯಲ್ಲಿಯೇ ಗುರುಹಿರಿಯರಿರುವ ರಾಜಸಭೆಗೆ ಎಳೆದೊಯ್ಯುವುದು ನಿನಗೆ ತರವಲ್ಲ. ಮುಡಿಯನ್ನು ಬಿಡು. ನನ್ನನ್ನು ಮುಟ್ಟುವುದಕ್ಕೆ ನೀನು ಅರ್ಹನಲ್ಲ. ನೀನುಮಾಡಿದ ಅಕೃತ್ಯಕ್ಕೆ ಈಗಲೇ ನಿನ್ನನ್ನು ನನ್ನ ಕ್ರೋಧಾಗ್ನಿಯಿಂದ ದಹಿಸಬಲ್ಲೆನು. ಆದರೂ ದಯೆಮಾಡಿ ಈಸಾರಿ ಕ್ಷಮಿಸಿದ್ದೇನೆ. ಈಗಲಾದರೂ ಬಿಡದೆ, ಬಾಲಾತ್ಕಾರದಿಂದ ಎಳೆದೊಯ್ಯುವುದಾದರೆ ಇದರ ದುಷ್ಫಲವನ್ನು ನೀನು ಮುಂದೆ ಅನುಭವಿಸಲೇಬೇಕಾಗುವುದು.

ದ್ರೌಪದಿಯು ಸಿಟ್ಟಿನಿಂದ ನುಡಿದ ಈ ಮಾತುಗಳಿಗೆ ಲಕ್ಷ್ಯ ಕೊಡದೆ ಆ ದುರುಳನಾದ ದುಶ್ಶಾಸನನು ಬಲಾತ್ಕಾರದಿಂದ ಆ ಸತೀಮಣಿಯ ಮಂಡೆಯ ಕೂದಲುಗಳನ್ನು ಹಿಡಿದೆಳೆಯುತ್ತಾ ಇಂತೆಂದನು.

ಎಲೆ ದ್ರೌಪದೀ, ಜೂಜಿನಲ್ಲಿ ಸೋತು ನಮ್ಮ ವಶಳಾಗಿ ದಾಸಿಯೆನಿಸಿರುವ ನಿನಗೆ ಮರ್ಯಾದೆ ಯೆಂದರೇನು ? ಎಷ್ಟರಮಾತುಗಳಾಡುತ್ತಿದ್ದೀಯೆ ? ನೀನು ನನ್ನನ್ನು ಕ್ಷಮಿಸತಕ್ಕವಳೇ ? ಸಾಕು. ಬಾಯಿಮುಚ್ಚು. ಛೀ ತೊತ್ತೇ ? ನೀನು ರಜಸ್ವಲೆಯಾಗಿದ್ದೀಯೋ? ಆದರೇನು ? ಏಕವಸ್ತ್ರದಿಂದ ಇರುವೆನೆಂದೆ. ಏಕವಸ್ತ್ರಳೇ ಆಗು, ವಿವಸ್ತ್ರಳೇ ಆಗು. ಬಹುಪತಿಗಳುಳ್ಳ ನೀನು ಹೇಗಿದ್ದರೇನು ? ಯಾರಲ್ಲಿ ಇಂತಹ ಒಣ ಹರಟೆ ಹರಟುತ್ತೀಯೆ ? ನಾನು ದುಶ್ಶಾಸನನೆಂಬುದು ತಿಳಿಯದೋ ? ಒಡೆಯನು ಹೇಳಿದಂತೆ ನಡಿಸುವುದು ನನ್ನ ಕೆಲಸ, ರಾಜನಾದ ನಮ್ಮಣ್ಣನ ಆಜ್ಞೆಯಂತೆ ನಿನ್ನನ್ನು ಸಭೆಗೆ ಎಳೆದುಕೊಂಡೇ ಹೋಗುವೆನು. ನಿನ್ನ ಪ್ರಾರ್ಥನೆಗಳು ಏನೇನಿ

ದ್ದರೂ ಆ ರಾಜನ ಸಂಗಡ ಹೇಳಿಕೊಳ್ಳಬಹುದು. ನಾನು ನಿನ್ನನ್ನು ಕರೆದೊಯ್ಯದೆ ಬಿಟ್ಟು ಹೋಗಲಾರೆನು.

ದುಶ್ಶಾಸನನ ಈ ನಿಷ್ಠುರೋಕ್ತಿಗಳನ್ನು ಕೇಳಿ ಆ ದ್ರೌಪದಿಯು ಬಹು ಖಿನ್ನಳಾಗಿ, ರೋಷದಿಂದಲೂ ದುಃಖದಿಂದಲೂ ನಿಟ್ಟುಸಿರುಗಳನ್ನು ಬಿಡುತ್ತಾ ಸಭೆಗೆ ಬರುತ್ತಿದ್ದಳು. ಬೀದಿಯಲ್ಲಿ ನಿಂತಿದ್ದ ಜನರೆಲ್ಲಾ ಆಕೆಯ ದುರವಸ್ಥೆಯನ್ನು ಕಂಡು ಬಹಳವಾಗಿ ವ್ಯಸನಪಟ್ಟು, ದುರಾತ್ಮರಾದ ದುರ್ಯೋಧನ ದುಶ್ಶಾಸನರನ್ನು ಬಹಳವಾಗಿ ಬೈಯುತ್ತಿದ್ದರು. ಆಕೆಯ ಆರ್ತಧ್ವನಿಯಿಂದ ಆ ಪುರದ ಸ್ತ್ರೀ ಪುರುಷರು ಮಾತ್ರವೇ ಅಲ್ಲ. ದಾರಿಯಲ್ಲಿ ಸಂಚರಿಸುವ ಪಶು ಪಕ್ಷ್ಯಾದಿ ತಿರ್ಯಗ್ಜಂತುಗಳು ಕೂಡ ದುಃಖದಿಂದ ತಿಂಡಿ ನೀರುಗಳ ಮೇಲೆ ಆಸೆಯನ್ನು ಬಿಟ್ಟು ಆ ಸಾಧ್ವಿಯನ್ನೇ ಹಿಂಬಾಲಿಸಿ ಹೋಗುತ್ತಿರುವುವೋ ಎಂಬಂತೆ ಕಾಣುತ್ತಿದ್ದಿತು. ದುಶ್ಶಾಸನನಿಂದ ಹಿಡಿಯಲ್ಪಟ್ಟ ಆ ದ್ರೌಪದಿಯು ರಾಜಸಭೆಗೆ ಬರುತ್ತಿರುವಾಗ ದಾರಿಯಲ್ಲಿ ಹೀಗೆ ಪ್ರಲಾಪಿಸುತ್ತಿದ್ದಳು.

ಅಯ್ಯೋ ವಿಧಿಯೇ ! ಅಂತಃಪುರದಲ್ಲಿದ್ದುಕೊಂಡು, ಪರರ ದೃಷ್ಟಿಗೆ ಸುತರಾಂ ಗೋಚರಳಾಗದೆ ಇದ್ದ ನಾನು ಈದಿನ ಈ ಅವಸ್ಥೆಯಲ್ಲಿ ರಾಜಸಭೆಗೆ ಎಳೆಯಲ್ಪಡಬೇಕಾಯಿತೇ ! ಹಾಹಾ ! ರಾಣೀವಾಸದಲ್ಲಿ ವಾಯುವಾಗಲಿ ಸೂರ್ಯನಾಗಲಿ ನೋಡಕೂಡದವಳಾಗಿ ಸುರಕ್ಷಿತಳಾಗಿದ್ದ ನಾನು ಈ ದುರಾತ್ಮನಿಂದ ಬಲಾತ್ಕಾರವಾಗಿ ಬಯಲಿಗೆ ಎಳೆಯಲ್ಪಡುತ್ತಿರುವೆನಲ್ಲಾ ! ಅಯ್ಯೋ ! ನನ್ನ ಅವಸ್ಥೆಯು ಹೀಗಾಯಿತೆ ! ಗಾಳಿಯುಕೂಡ ನನ್ನ ಮೈ ಸೋಕದಂತೆ ರಕ್ಷಿಸುತ್ತಿದ್ದ ನನ್ನ ಪತಿಗಳು ಈ ದುರುಳನಿಂದ ಹಿಡಿಯಲ್ಪಟ್ಟಿರುವ ನನ್ನನ್ನು ನೋಡಿ ಸಹಿಸಿಕೊಂಡಿರುವರಲ್ಲಾ ? ಆಹಾ! ಎಂತಹ

ವಿಷಮಕಾಲವು ಬಂತು ? ನನ್ನ ದುಃಖವನ್ನು ಯಾರಲ್ಲಿ ಹೇಳಿಕೊಳ್ಳಲಿ? ಎಲೈ ಪರಮಾತ್ಮನೇ, ಸರ್ವವ್ಯಾಪಿಯಾದ ನಿನಗೆ ನನ್ನ ಈ ದುರವಸ್ಥೆಯು ಗೋಚರವಾಗುತ್ತಿದೆಯೇ? ದೀನಳನ್ನುರಕ್ಷಿಸು.

ದ್ರೌಪದಿಯು ಹೀಗೆ ಪ್ರಲಾಪಿಸುತ್ತಿರುವಾಗ ದುಶ್ಶಾಸನನು ತಮ್ಮಣ್ಣನನ್ನು ನೋಡಿ, 'ಅಣ್ಣಯ್ಯಾ? ನಾನು ಸಭೆಗೆ ಬರಲೊಲ್ಲೆನೆಂದು ಹಟಹಿಡಿದಿದ್ದ ಈ ಪಾಂಚಾಲಿಯು ಹೇಳಿದ ನೆವಗಳೊಂದನ್ನೂ ಲಕ್ಷ್ಯಮಾಡದೆ ಬಲಾತ್ಕಾರದಿಂದ ಇವಳನ್ನು ಎಳೆದು ತಂದಿರುವೆನು. ನೋಡು' ಎಂದನು. ಆಗ ದುರ್ಯೋಧನನು ತನ್ನ ತಮ್ಮನ ಶಕ್ತಿ ಸಾಹಸಗಳನ್ನು ಮೆಚ್ಚಿ ಅವನನ್ನು ಬಹಳವಾಗಿ ಹೊಗಳುತ್ತಿದ್ದನು. ಕರ್ಣ ಶಕುನಿ ಜಯದ್ರಥರಹೊರತು ಉಳಿದ ಸಭಿಕರೆಲ್ಲರೂ ದ್ರೌಪದಿಯ ದೈನ್ಯಸ್ಥಿತಿಯನ್ನು ನೋಡಿ, ದುಶ್ಶಾಸನಾದಿಗಳ ನಿಷ್ಠುರೋಕ್ತಿಗಳನ್ನು ಕೇಳಿ, ಅತ್ಯಂತ ಕ್ರೋಧದಿಂದಲೂ ದುಃಖದಿಂದಲೂ ಏನುಮಾಡಲಿಕ್ಕೂ ತೋರದೆ ಚಿಂತಿಸುತ್ತಿದ್ದರು. ಆಗಲಾ ದ್ರೌಪದಿಯು ಶೋಕಾರ್ತೆಯಾಗಿ ಸಭಿಕರನ್ನು ನೋಡಿ ಮೆಲ್ಲನೆ ಇಂತೆಂದಳು.

ಮಹಾಜನರುಗಳಿರಾ! ಆರ್ತಳಾದ ನನ್ನ ಮನವೆಯನ್ನು ದಯಮಾಡಿ ಲಾಲಿಸಿರಿ, ನೀವುಗಳೆಲ್ಲಾ ಹಿರಿಯರಾಗಿಯೂ, ಲೋಕಾನುಭವವುಳ್ಳವರಾಗಿಯೂ, ಇರುವಿರಿ. ಇಂತಹ ಮಹಾಸಭೆಯಲ್ಲಿ ನಿಂತು ಮಾತನಾಡಲಿಕ್ಕೆ ನನಗೆ ಶಕ್ತಿಸಾಲದು. ದುರಾತ್ಮನಾದ ಇವನು ನನ್ನಮುಂಡೇ ಕೂದಲುಗಳನ್ನು ಹಿಡಿದೆಳೆದು, ಅವಮಾನಪಡಿಸುವೆನೆಂದು ಹೆದರಿಸುತ್ತಿರುವನು. ಅಯ್ಯೋ! ಭರತವಂಶದ ಧರ್ಮವು ನಷ್ಟವಾಗುವ ಹೊತ್ತು ಬಂತೆ? ವೃದ್ಧರಾದ ಭೀಷ್ಮದ್ರೋಣ ಧೃತರಾಷ್ಟ್ರರಿಗೆ ಈ ಕೃತ್ಯವು ಸಮ್ಮತವಾಗಿದೆಯೆ?

ಧರ್ಮಜ್ಞನಾದ ವಿದುರನು ಇದನ್ನು ನೋಡಿ ಹೇಗೆ ಸಹಿಸಿಕೊಂಡಿರುವನು ? ಹಾ ಹಾ ! ನಿಮಗೂ ನನ್ನಂತಹ ಹೆಣ್ಣುಮಕ್ಕಳಿಲ್ಲವೆ ! ಈ ದುರುಳನ ಬಾಧೆಯಿಂದ ನನ್ನನ್ನು ಬಿಡಿಸಿ ಸಲಹಿರಿ.

ದ್ರೌಪದಿಯು ಈ ರೀತಿಯಾಗಿ ಗೋಳಾಡುತ್ತಾ ತನ್ನ ಪತಿಗಳಾದ ಪಾಂಡವರಕಡೆ ದೃಷ್ಟಿಸಿ ನೋಡಿದಳು. ಮೊದಲೇ ಕೋಪಾಗ್ನಿಯಿಂದ ಉರಿಯುತ್ತಿದ್ದ ಅವರ ಕಣ್ಣುಗಳು ಮತ್ತಷ್ಟು ಕನಲಿ ದುಃಖವನ್ನು ಹೆಚ್ಚಿಸಿದುವು. ಅವರಿಗೆ ರಾಜ್ಯವು ನಷ್ಟವಾದುದೂ, ಸಕಲೈಶ್ವರ್ಯವೂ ಹೋದುದೂ, ಸಹೋದರರೆಲ್ಲರೂ ಜಯಿಸಲ್ಪಟ್ಟುದೂ ಅಷ್ಟು ದುಃಖವಾಗಿ ತೋರಲಿಲ್ಲ. ಅಯೋನಿಜೆಯಾಗಿಯೂ, ಪತಿವ್ರತೆಯಾಗಿಯೂ, ಇರುವ ಆ ಪಾಂಚಾಲಿಯು ಕಣ್ಣೀರು ಸುರಿಸುತ್ತಾ ಗೋಳಾಡುತ್ತಿರುವುದು ಅವರ ಕ್ರೋಧಾಗ್ನಿಯನ್ನು ತಿದಿಯಿಂದ ಊದಿ ಉರಿಸಿದಂತೆ ಆಯಿತು. ಆ ಪಾಂಡವರಲ್ಲಿ ಪ್ರತಿಒಬ್ಬನೂ ಆ ಕ್ಷಣದಲ್ಲಿಯೇ ಆ ದುರಾತ್ಮನಾದ ದುಶ್ಶಾಸನನನ್ನು ನಿಗ್ರಹಿಸಿ ತಮ್ಮ ಪತ್ನಿಯನ್ನು ರಕ್ಷಿಸಲು ಶಕ್ತರಾಗಿಯೇ ಇದ್ದರು. ಆದರೂ ಧರ್ಮಸೂಕ್ಷ್ಮಗಳನ್ನರಿತು, ಸತ್ಯಕ್ಕೆ ಬದ್ಧರಾಗಿ ಯಾವ ಪ್ರತೀಕಾರವನ್ನೂ ಯೋಚಿಸದೆ, ಮೌನದಿಂದ ಕುಳಿತಿದ್ದ ಜ್ಯೇಷ್ಠಭ್ರಾತೃವಾದ ಯುಧಿಷ್ಠಿರನನ್ನು ನೋಡಿ, ಅವನ ತಮ್ಮಂದಿರಾದ ಆ ಭೀಮಾದಿಗಳು ಆತನ ಇಂಗಿತವನ್ನೇ ಅನುಸರಿಸಿ, ತಾವು ಯಾವ ಮಾತನ್ನೂ ಹೇಳದೆ, ಖಿನ್ನರಾಗಿ ಸುಮ್ಮನೆ ಕುಳಿತಿದ್ದರು.

ದುಶ್ಶಾಸನನು ಆ ಸಾಧ್ವೀಮಣಿಯ ತುರುಬು ಹಿಡಿದೆಳೆಯುತ್ತಿದ್ದಾಗ ಆಕೆಯ ಕಣ್ಣುಗಳಿಂದ ಅಶ್ರುಗಳು ಧಾರಾಪ್ರವಾಹವಾಗಿ ಹರಿಯುತ್ತಿದ್ದುವು. ಆ ವೇಳೆಯಲ್ಲಿ ಇಂದ್ರಾದಿ ದಿಕ್ಪಾಲಕರೂ, ವಸಿಷ್ಠಾದಿ ಮಹರ್ಷಿಗಳೂ, ಅರುಂಧತಿ ಅನಸೂಯಾದಿ ಪತಿವ್ರತಾ

ಸ್ತ್ರೀಯರೂ ದುರಾತ್ಮರಾದ ದುರ್ಯೋಧನಾದಿಗಳನ್ನು ನಿಂದಿಸುತ್ತಾ, ದ್ರೌಪದಿಯ ದುರವಸ್ಥೆಯನ್ನು ಕಂಡು ದುಃಖಿಸುತ್ತಿದ್ದರು. ಬ್ರಹ್ಮ ಸಭೆಯಲ್ಲಿ ನಾರದಾದಿ ಮಹರ್ಷಿಗಳು ಬ್ರಹ್ಮನನ್ನು ನೋಡಿ, 'ಎಲೈ ಲೋಕೇಶನೇ, ದ್ರೌಪದಿಗೆ ಸಂಭವಿಸಿರುವ ದುರವಸ್ಥೆಯನ್ನು ನೋಡಿಕೊಂಡು ನೀನು ಹೇಗೆ ಸೈರಿಸುತ್ತಿರುವೆ? ' ಎಂದು ಕೇಳಿದರು. ಆದಕ್ಕಾತನು 'ಎಲೈ ಮಹರ್ಷಿಗಳಿರಾ, ಕಷ್ಟಕಾಲದಲ್ಲಿ ಎಲ್ಲರನ್ನೂ ರಕ್ಷಿಸುವ ಭಾರವನ್ನು ವಹಿಸಿರುವ ಪರಮಾತ್ಮನಿಲ್ಲವೆ? ಆತನು ಇದಕ್ಕೆ ಪ್ರತೀಕಾರವನ್ನು ಚಿಂತಿಸುತ್ತಲೇ ಇರುವನು. ನೀವೇಕೆ ಯೋಚಿಸುವಿರಿ ? ಸ್ವಲ್ಪ ಸೈರಿಸಿಕೊಂಡು, ಮುಂದೆ ಏನೇನು ವಿಚಿತ್ರಗಳು ನಡೆಯುವುವೋ ನೋಡಿಕೊಂಡಿರಿ ' ಎಂದು ಸಮಾಧಾನ ಹೇಳುತ್ತಿದ್ದನು, ಶಕುನಿ ಕರ್ಣ ದುರ್ಯೋಧನ ದುಶ್ಶಾಸನರೆಂಬ ದುಷ್ಟಚತುಷ್ಟಯದ ಹೊರತು ಮತ್ತಾರ ಮುಖದಲ್ಲಿಯೂ ಸಂತೋಷದ ಚಿಹ್ನೆಗಳೇ ಕಾಣಬಂದಿಲ್ಲ.

ಆ ವೇಳೆಯಲ್ಲಿ ಪಾಂಚಾಲಿಯು ಭೀಷ್ಮನನ್ನು ನೋಡಿ ವಿನಯದಿಂದ ಇಂತೆಂದಳು.

ಆರ್ಯರೇ, ಈ ದುರಾತ್ಮನು ಈ ರೀತಿಯಲ್ಲಿ ನನ್ನನ್ನು ಅವಮಾನಗೊಳಿಸುತ್ತಿರುವುದನ್ನು ನೋಡಿ ಹೇಗೆ ಸೈರಿಸಿಕೊಂಡಿರುವಿರಿ? ಧರ್ಮಜ್ಞನಾದ ಈ ಯುಧಿಷ್ಠಿರನು ಜೂಜಿನಲ್ಲಿ ತನ್ನನ್ನು ಮೊದಲು ಒಡ್ಡಿ ಸೋತಮೇಲೆ ನನ್ನನ್ನು ಪಣವಾಗಿ ಒಡ್ಡಿದನೆ? ಅಥವಾ ಮುಂಚಿತವಾಗಿ ನನ್ನನ್ನೊಡ್ಡಿ ಸೋತು ಬಳಿಕ ತಾನು ಜಿತನಾದನೇ ? ಎಂಬ ಪ್ರಶ್ನೆಯನ್ನೊಬ್ಬರೂ ವಿಚಾರಿಸದೆ ಇರುವಿರಾ ? ಈ ವಿಷಯವು ಇತ್ಯರ್ಥವಾಗುವುದಕ್ಕೆ ಮುಂಚೆಯೇ ಇವನು ನನ್ನನ್ನು ಹಿಂಸಿಸುತ್ತಿರುವುದು ನ್ಯಾಯವೇ ? ಧರ್ಮವು ಕಾಡುಪಾಲಾಯಿತೆ ?

ಕಳ್ಳರು ಅನ್ಯಾಯದಿಂದ ಪರಸ್ವತ್ತನ್ನು ಅಪಹರಿಸಿ ಸಂತೋಷಪಡು ವಂತೆ ಈ ಕುಹಕಿಗಳು ಕಪಟದ್ಯೂತದಿಂದ ನಮ್ಮ ಸರ್ವಸ್ವವನ್ನೂ ಅಪಹರಿಸಿದರೂ ತೃಪ್ತಿಯಿಲ್ಲದೆ, ಅಸಾಧಾರಣ ಪರಾಕ್ರಮಿಗಳಾದ ನನ್ನಪತಿಗಳನ್ನು ಮೋಸದಿಂದ ಜಯಿಸಿ, ತಮ್ಮ ದಾಸರೆಂದು ಭಾವಿಸಿ ನನ್ನನ್ನು ದಾಸಿಯೆಂದು ತಿಳಿದು ಹಿಂಸೆಗೊಳಿಸುತ್ತಿರುವರಲ್ಲಾ! ನನ್ನ ಪ್ರಾರ್ಥನೆಯನ್ನು ವಿಚಾರಿಸಿ ಇತ್ಯರ್ಥಪಡಿಸಿ, ನನ್ನನ್ನು ರಕ್ಷಿಸಿರಿ.

ದ್ರೌಪದಿಯ ಈ ಮಾತು ಕೇಳಿ ಸೈರಿಸದೆ ದುಶ್ಶಾಸನನಿಂತೆಂದನು.

ಎಲೌ ದ್ರೌಪದೀ, ಸಭೆಗೆಬಾರೆಂದು ನಿನ್ನನ್ನು ಕರೆದಾಗ ಆ ಮಹಾಸಭೆಗೆ ಬರಲು ಹೆಂಗಸಾದ ನನಗೆ ನಾಚಿಕೆಯಾಗುತ್ತಿದೆ. ನಾನು ಬರಲಾರೆನೆಂದು ಹೇಳಿದ ನಿನಗೆ ಈ ಸಭೆಯಲ್ಲಿಯೇ ನಿಂತು, ಸಾಕ್ಷಾ ತ್ಪತಿಗಳನ್ನು ಕೂಡ ಲಕ್ಷ್ಯಮಾಡದೆ ಮಹಾಜನರ ಸಂಗಡ ಈ ರೀತಿ ಯಾಗಿ ಧಿಟ್ಟತನದಿಂದ ಮಾತನಾಡುವುದಕ್ಕೆ ನಿನಗೆ ಬಾಯಿ ಹೇಗೆ ಬಂತು? ಥೀ ತೊತ್ತೇ? ಸಾಕು. ಬಾಯಿಮುಚ್ಚು. ನಿನಗೆ ನ್ಯಾಯ ವಿಮರ್ಶೆಬೇಕೇ? ಬೃಹಸ್ಪತಿಗಿಂತ ಪ್ರಾಜ್ಞರಾದ ಪಂಡಿತರು ಕುಳಿ ತಿರುವ ಈ ಸಭೆಯಲ್ಲಿ ನೀನೂ ಒಬ್ಬಪಂಡಿತಳಂತೆ ಮಾತನಾಡ ತೊಡಗಿದೆಯಾ? ಸಾಕು ನಿಲ್ಲಿಸು.

ಹೀಗೆ ಹೇಳಿ ಆ ದುಶ್ಶಾಸನನು ಬಲಾತ್ಕಾರದಿಂದ ಆ ಸಾಧ್ವಿಯ ಸೆರಗು ಹಿಡಿದೆಳೆದನು. ಆಕೆಯು ತೊಟ್ಟಿದ್ದ ಕುಪ್ಪಸವು ಸಡಲಿ ಪರಮ ಪವಿತ್ರವಾದ ಅಂಗವು ಬಹಿರಂಗವಾಗುವಂತೆ ಕಂಡಿತು. ಆಗಲಾ ಸತಿಯು 'ಹಾ! ದೈವವೇ! ಅವಭೃಥದಲ್ಲಿ ಸಚೇಲಸ್ನಾನ ಮಾಡುವಾಗ ಸುದಾ ಬಿಚ್ಚದೆ ಇದ್ದ ಈ ಕುಪ್ಪಸವು ಈ ದುರಾತ್ಮನ ಹಸ್ತಸ್ಪರ್ಶದಿಂದ ಕಲುಷಿತವಾಯಿತಲ್ಲಾ! ಇವನು ನನ್ನನ್ನು ಇನ್ನೂ ಏನೇನು ಮಾಡುವನೋ ತಿಳಿಯದು. ಈ ವೇಳೆಯಲ್ಲಿ ನನ್ನ ಮಾನ

ಸಂರಕ್ಷಣೆ ಮಾಡುವವರು ಪರಮಾತ್ಮನಹೊರತು ಮತ್ತಾರೂ ಇಲ್ಲ ವಲ್ಲಾ ?' ಎಂದು ಗೋಳಾಡುತ್ತಿದ್ದಳು.

ಇತ್ತಲಾ ದುರ್ಯೋಧನನು ಪಾಂಡವರ ವಸ್ತ್ರಾಭರಣಗಳನ್ನು ಕೂಡ ಅಪಹರಿಸಿ, ಅವರನ್ನು ಅವಮಾನಪಡಿಸಬೇಕೆಂದು ಯೋಚಿಸಿ, ತನ್ನ ತಮ್ಮನಾದ ದುರ್ಮುಖನನ್ನು ನೋಡಿ, 'ತಮ್ಮಾ, ನಮ್ಮ ದಾಸ ರಾದ ಈ ಪಾಂಡವರಿಗೆ ರಾಜಯೋಗ್ಯಗಳಾದ ದಿವ್ಯಾಂಬರಗಳೇತಕ್ಕೆ? ಇವುಗಳನ್ನೆಲ್ಲಾ ಕಿತ್ತು ತೆಗೆದಿಡು' ಎಂದು ಆಜ್ಞಾಪಿಸಿದನು. ಆ ದುರುಳನ ಬಾಯಿಂದ ಮಾತು ಹೊರಟುಬರುವುದಕ್ಕೆ ಮುಂಚೆಯೇ ಪಾಂಡವರು ತಮ್ಮ ವಸ್ತ್ರಾಭರಣಗಳನ್ನು ತೆಗೆದಿಟ್ಟು ಏಕವಸ್ತ್ರದಿಂದ ಕುಳಿತರು. ಸಭೆಯಲ್ಲಿದ್ದವರು ಆ ಪಾಂಡವರ ಸತ್ಯಧರ್ಮಾದಿ ಸದ್ಗು ಣಗಳಿಗೆ ಸಂತೋಷಿಸುತ್ತಿದ್ದರು. ಮತ್ತು ಅಬಲೆಯಾದ ದ್ರೌಪದಿಯ ದುರವಸ್ಥೆಯನ್ನು ನೋಡಿ, ಸಹಿಸಲಾರದೆ ದುಃಖದಿಂದ ಮರುಗುತ್ತಿ ದ್ದರು. ದುರಾತ್ಮರು ತಮ್ಮ ದುಶ್ಚೇಷ್ಟೆಗಳನ್ನು ಪರರು ನೋಡಿ ನಗುವರೆಂಬುದನ್ನು ಕೂಡ ತಿಳಿಯದೆ ಮತ್ತಷ್ಟು ಅಕೃತ್ಯಗಳನ್ನು ಮಾಡಿ, ತಮ್ಮ ದುಸ್ಸ್ವಭಾವವನ್ನು ಪ್ರಕಾಶಗೊಳಿಸುವುದು ಅವರ ಸಹಜ ಗುಣವಲ್ಲವೆ? ದುರಾತ್ಮನಾದ ದುರ್ಯೋಧನನು ಪ್ರಲಾಪಿ ಸುತ್ತಿರುವ ಪಾಂಚಾಲಿಯನ್ನು ನೋಡಿ ಇಂತೆಂದನು

ಎಲೇ ದ್ರೌಪದೀ, ಹೆಂಗಸಾದ ನೀನು ಸಭೆಯಲ್ಲಿ ಎಷ್ಟು ಮಾತನಾಡುತ್ತಿರುವೆ? ನಮ್ಮ ಕಾರ್ಯವು ನ್ಯಾಯಕ್ಕೆ ವಿರೋಧವಾ ಗಿರುವ ಪಕ್ಷದಲ್ಲಿ ಬಲಿಷ್ಠರಾದ ನಿನ್ನ ಪತಿಗಳು ಇದನ್ನು ನೋಡಿ ಕೊಂಡು ಸುಮ್ಮನೆ ಕುಳಿತಿರುವರೆ? ಅದು ಹಾಗಿರಲಿ, ಸುಂದರಾಂಗಿ ಯಾದ ನಿನ್ನನ್ನು ಮೊದಲಿನಿಂದಲೂ ಬಯಸಿದ್ದ ನಾನು ನಿನ್ನ ಸ್ವಯಂವರಕ್ಕೆ ಬಂದಿದ್ದೆನು. ಆಗಲೇ ನೀನು ನನ್ನ ವಧುವಾಗಿ

ತೊಡೆಯ ಮೇಲೆ ಕುಳ್ಳಿರಬೇಕಾಗಿತ್ತು. ದೈವಯೋಗದಿಂದ ಆ ಸಂದರ್ಭದಲ್ಲಿ ನನಗೆ ನಿನ್ನ ಸಂಬಂಧವು ತಪ್ಪಿಹೋಗಿ ನೀನು ಈ ಪಾಂಡವರ ಪತ್ನಿಯಾದೆ. ನೀನು ಏನೋ ಒಂದು ಕಾರಣದಿಂದ ಈ ಪಾಂಡವರ ಕೈಗೆ ಸಿಕ್ಕಿಬಿದ್ದರೂ ಈಗ ನ್ಯಾಯವಾದ ಮಾರ್ಗದಿಂದಲೇ ನನ್ನ ಕೈಗೆ ಸಿಕ್ಕಿರುವೆ. ನೀನು ನನ್ನವಳಾದುದರಿಂದ ನನ್ನ ತೊಡೆಯಮೇಲೆ ಕುಳ್ಳಿರು ಬಾ. ನಾಚಿಕೆ ಏಕೆ?

ಅಣ್ಣನ ಆಜ್ಞೆಯನ್ನು ಮೀರಬಾರದೆಂದು ಇದುವರೆಗೂ ಸೈರಿಸಿಕೊಂಡಿದ್ದ ಭೀಮಸೇನನಿಗೆ ದುರ್ಯೋಧನನ ಈ ಬಿರುನುಡಿಗಳು ಸಹಿಸಕೂಡದೆ ಹೋದುವು. ಯಾರುತಾನೇ ಧರ್ಮಪತ್ನಿಯನ್ನು ನಿಂದಿಸುವ ಜನರ ನುಡಿಗಳನ್ನುಕೇಳಿ ಸುಮ್ಮನಿರುವರು? ಆ ಭೀಮಸೇನನು ಅತ್ಯಾಗ್ರಹದಿಂದ ತತ್‍ಕ್ಷಣದಲ್ಲಿಯೇ ತನ್ನ ಗದೆಯನ್ನು ಕೈಗೆ ತೆಗೆದುಕೊಂಡು ದುರಾತ್ಮನಾದ ಈ ದುರ್ಯೋಧನನ ಹೆಸರನ್ನು ಈಗಲೇ ಭೂಮಿಯಲ್ಲಿ ಇಲ್ಲದಹಾಗೆ ಮಾಡಿಬಿಡುವೆನೆಂದು ಮೇಲಕ್ಕೆ ಎದ್ದನು. ಅದನ್ನು ಕಂಡು ಕ್ಷಮಾಮೂರ್ತಿಯಾದ ಯುಧಿಷ್ಠಿರ ನಿಂತೆಂದನು.

ತಮ್ಮಾ, ಸೈರಿಸು ಸೈರಿಸು, ಸಕಲಶಾಸ್ತ್ರಗಳನ್ನೂ ತಿಳಿದು, ಲೋಕೈಕ ವೀರನಾದ ನೀನು ಇದುವರೆಗೂ ಧರ್ಮಮಾರ್ಗವನ್ನೇ ಅನುಸರಿಸಿಕೊಂಡಿದ್ದು ಈಗ ಈ ದ್ರೌಪದಿಯ ರೋದನಕ್ಕೂ, ಈ ದುಷ್ಟನ ಕಠಿನ ವಾಕ್ಯಗಳಿಗೂ ರೋಷಗೊಂಡು ಈ ರೀತಿಯಲ್ಲಿ ಕ್ರೋಧಾವೇಶದಿಂದ ಅಧರ್ಮಮಾರ್ಗದಲ್ಲಿ ನಡೆಯಬಹುದೆ?

ಭೀಮಣ್ಣಾ! ಪೂರ್ವದ ಮಹಾತ್ಮರು ಧರ್ಮಸಂರಕ್ಷಣೆಗಾಗಿ ಎಷ್ಟೆಷ್ಟು ಕಷ್ಟಪಟ್ಟರೆಂಬುದು ನಿನಗೆ ತಿಳಿಯದೆ? ಸತ್ಯಸಂಧನಾದ ಶ್ರೀರಾಮನು ತಂದೆಯಮಾತನ್ನು ಪಾಲಿಸಲಿಕ್ಕೆ ವನಕ್ಕೆ ಹೋದಾಗ

ದಶರಥನು ಮೃತನಾದನು. ನೀನು ಪಟ್ಟಣಕ್ಕೆ ಬಂದು ರಾಜ್ಯವಾಳೆಂದು ಭರತನು ಪ್ರಾರ್ಥಿಸಿದರೂ ಶ್ರೀರಾಮನು ಧರ್ಮಬದ್ಧನಾಗಿ ನಿಂತುಬಿಡಲಿಲ್ಲವೆ? ಹರಿಶ್ಚಂದ್ರನು ಸತ್ಯಪರಿಪಾಲನೆಗಾಗಿ ಪಡಬಾರದ ಕಷ್ಟಗಳನ್ನು ಸಹಿಸಲಿಲ್ಲವೆ? ಶಿಬಿಯು ಪಾರಿವಾಳಕ್ಕೆ ಅಭಯ ಕೊಟ್ಟು ಗಿಡುಗನಿಗೆ ತನ್ನ ಶರೀರ ಮಾಂಸವನ್ನೇ ಕೊಡಲಿಲ್ಲವೆ? ದಧೀಚಿ ಮುನಿಯು ಪರಾರ್ಥವಾಗಿ ತನ್ನ ಎಲುಬುಗಳನ್ನೇ ಒಪ್ಪಿಸಲಿಲ್ಲವೆ? ನೋಡಪ್ಪಾ! ನಿನ್ನ ರೋಷಕ್ಕೆ ಕಾರಣವುಂಟಾಗಿರುವುದೇನೋ ನಿಜವೇಸರಿ, ಆದರೂ ಇಷ್ಟು ಅನರ್ಥಗಳಿಗೆ ಮೂಲಕಾರಣನು ನಾನೇ ಹೊರತು ಈ ದುರ್ಯೋಧನನಲ್ಲ. ನಿನ್ನ ಈ ಗದೆಯನ್ನು ಈತನಮೇಲೆ ಪ್ರಯೋಗಿಸಬೇಡ. ಇವನನ್ನು ಘಾತಿಸಿ, ನನ್ನನ್ನು ಧರ್ಮಭ್ರಷ್ಟನನ್ನಾಗಿಮಾಡಿ ಅಪಕೀರ್ತಿಗೆ ಗುರಿಪಡಿಸುವುದು ಸರಿಯಲ್ಲ. ಈಗ ನಮಗೆ ಬಂದಿರುವ ಕಷ್ಟವೇ ಎಂದಿಗೂ ಸ್ಥಿರವೆಂದು ತಿಳಿಯಬೇಡ. ಜಗದ್ರಕ್ಷಕನಾದ ಪರಮಾತ್ಮನು ತನ್ನನ್ನು ನಂಬಿದವರನ್ನು ಸಲಹದೆ ಕೈಬಿಡನು. ಧರ್ಮಮಾರ್ಗವನ್ನೇ ಅವಲಂಬಿಸಿ ಈ ವೇಳೆಯಲ್ಲಿ ನೀನು ಸ್ಥೈರಣೆಯನ್ನು ತಂದುಕೋ, ನಿನಗೆ ಸಹನೆಯುಂಟಾಗದೆ ಹೋದರೆ ಇಗೋ ನಾನು ಸಿದ್ಧನಾಗಿದ್ದೇನೆ. ಈ ಗದೆಯನ್ನು ನನ್ನಮೇಲೆಯೇ ಪ್ರಯೋಗಿಸಿ, ನಿನ್ನ ಕೋಪವನ್ನು ತೀರಿಸಿಕೊಳ್ಳಬಹುದು.

ಯುಧಿಷ್ಠಿರನ ಈಮಾತನ್ನು ಕೇಳಿ ಭೀಮಸೇನನು ಎತ್ತಿದ್ದ ಗದೆಯನ್ನು ಕೆಳಕ್ಕೆ ಇಳಿಸಿಬಿಟ್ಟು ಸುಮ್ಮನಾದನು. ಅದನ್ನು ಕಂಡು ದ್ರೌಪದಿಯು ಪುನಃ ಪ್ರಲಾಪಿಸುತ್ತಿದ್ದಳು.

ಆರ್ತಳಾದ ದ್ರೌಪದಿಯ ಸ್ಥಿತಿಯನ್ನು ನೋಡಿ ಭೀಷ್ಮನು ಕಣ್ಣೀರು ಸುರಿಸುತ್ತಾ ಗದ್ಗದ ಸ್ವರದಿಂದ ಇಂತೆಂದನು.

ತಾಯೀ, ನೀನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಲಿಕ್ಕೆ ಏನೂತೋರದೆ ಇನ್ನೂ ಯೋಚಿಸುತ್ತಲೇ ಕುಳಿತಿರುವೆನು. ಧರ್ಮಸೂಕ್ಷ್ಮಗಳನ್ನು ಸರಿಯಾಗಿ ತಿಳಿದು ಹೇಳುವುದು ಬಹುಕಷ್ಟವು. ಒಂದು ಬಗೆಯಿಂದ ನೋಡಿದರೆ ನ್ಯಾಯವು ನಿನ್ನ ಪಕ್ಷವಾಗಿಯೇ ಇರುವುದು. ನಿನ್ನ ಪತಿಯು ತನ್ನನ್ನು ಸೋತಬಳಿಕ ನಿನ್ನನ್ನು ಪಣವಾಗಿ ಒಡ್ಡಿದುದರಿಂದ ನ್ಯಾಯವಾಗಿ ಈ ದುರ್ಯೋಧನನಿಗೆ ನಿನ್ನಮೇಲೆ ಅಧಿಕಾರವಿಲ್ಲ. ಆದರೂ ಧರ್ಮಸ್ವರೂಪನಾದ ಈ ಯುಧಿಷ್ಠಿರನು ಸತ್ಯಮಾರ್ಗವನ್ನು ಎಂದಿಗೂ ಬಿಡತಕ್ಕವನಲ್ಲ. ನಿಷ್ಕಪಟಿಯಾದ ಈತನು ಕಪಟ ದ್ಯೂತದಲ್ಲಿ ಸಿಕ್ಕಿಕೊಂಡು, ತನ್ನ ಸರ್ವಸ್ವವನ್ನೂ, ಮತ್ತು ಸ್ವಾತಂತ್ರ್ಯವನ್ನೂ ಕಳೆದುಕೊಂಡು, ಧರ್ಮಮಾರ್ಗವನ್ನೇ ಅವಲಂಬಿಸಿ ನಡೆಯಬೇಕೆಂದು ತನ್ನ ತಮ್ಮಂದಿರನ್ನೂ ತಡೆಯುತ್ತಾ ಮೌನವಾಗಿ ಕುಳಿತಿರುವುದನ್ನು ನೋಡಿದರೆ ನಿನ್ನ ವಿವಾದವು ಸರಿಯೋ, ಅಲ್ಲವೋ ಎಂಬ ಸಂಶಯವು ಬಂದು ಕುಳಿತಿರುವುದು. ಆದಾಗ್ಯೂ ನನ್ನ ಅಂತಃಕರಣಪ್ರವೃತ್ತಿಯು ಧರ್ಮವು ನಿನ್ನ ಪರವಾಗಿಯೇ ಇರುವುದೆಂದು ಬೋಧಿಸುತ್ತಿದೆ. ಖಂಡಿತವಾಗಿ ಆ ಪರಮಾತ್ಮನು ನಿನ್ನನ್ನೂ ನಿನ್ನ ಪತಿಗಳನ್ನೂ ಸಂರಕ್ಷಿಸದೆ ಕೈಬಿಡಲಾರನು. ಸ್ವಲ್ಪಕಾಲ ಸೈರಿಸಿಕೊಂಡು ಬಂದುದನ್ನು ಅನುಭವಿಸುವುದು ಲೇಸೆಂದು ನನ್ನ ಅಭಿಪ್ರಾಯವು. ಮಗಳೇ, ದುಃಖಿಸಬೇಡ. ಸಮಾಧಾನವನ್ನು ತಂದುಕೋ.

ಭೀಷ್ಮನ ಈ ಮಾತುಗಳನ್ನು ಕೇಳಿ ದ್ರೋಣಾದಿವೀರರು ಆರ್ಯನ ಮಾತುಗಳು ನ್ಯಾಯವಾದುವೆಂದು ತಿಳಿದುಕೊಂಡು ಸುಮ್ಮನೆ ಇದ್ದರು. ಸಭೆಯಲ್ಲಿ ದುಶ್ಶಾಸನನ ಅಬ್ಬರವೂ, ದ್ರೌಪದಿಯ ವಿಲಾಪವೂ ಹೆಚ್ಚುತ್ತಲೇ ಇದ್ದುವು. ಆಗ ದುರ್ಯೋಧನನ ತಮ್ಮನಾದ

ವಿಕರ್ಣನು ಧೈರ್ಯದಿಂದ ಎದ್ದು ನಿಂತು ಇಂತೆಂದನು.

ಮಹನೀಯರೇ, ಇಂತಹ ಮಹಾಸಭೆಯಲ್ಲಿ ಅನಾಥಳಂತೆ ಪ್ರಲಾಪಿಸುತ್ತಿರುವ ಈ ಸಾಧ್ವೀಮಣಿಯ ದುರವಸ್ಥೆಯನ್ನೂ, ದುಶ್ಶಾಸನನ ಬಲಾತ್ಕಾರವಾದ ಅಕೃತ್ಯಗಳನ್ನೂ ಸಾಕ್ಷಾತ್ತಾಗಿ ನೋಡಿಕೊಂಡಿದ್ದರೂ, ನಿರ್ಭೀತಿಯಿಂದ ನ್ಯಾಯವಾದ ತೀರ್ಮಾನವನ್ನು ಹೇಳದೆ ಎಲ್ಲರೂ ಮೂಕೀಭಾವವನ್ನವಲಂಬಿಸಿರುವುದು ವಿಷಾದಕರವಾದುದು. ಆಪನ್ನರಾಗಿ ಬಂದು ಸಭೆಯಲ್ಲಿ ಮೊರೆಯಿಟ್ಟರೆ ಅಂತವರನ್ನು ವಿಚಾರಿಸಿ, ಅಪರಾಧಿಗಳನ್ನು ಶಿಕ್ಷಿಸಿ, ದೀನರನ್ನು ರಕ್ಷಿಸುವುದು ಸಭಿಕರ ಧರ್ಮವಲ್ಲವೆ? ಮಹಾವಿದ್ಯಾವಂತರಾಗಿಯೂ, ಧರ್ಮಸೂಕ್ಷ್ಮಗಳನ್ನು ಬಲ್ಲವರಾಗಿಯೂ ಇರುವ ನಿಮ್ಮಂತವರೇ ಮೌನವಾಗಿ ಕುಳಿತಿದ್ದರೆ ದುಶ್ಶಾಸನನು ತನ್ನ ಕೃತ್ಯವು ಸಾಧುವಾದುದೆಂದು ತಿಳಿದು, ಈ ಸತೀಮಣಿಯನ್ನು ಮತ್ತಷ್ಟು ಬಾಧಿಸದೆ ಬಿಡುವನೇ? ಈ ಅಪಕೀರ್ತಿಯು ಎಲ್ಲರಿಗೂ ಬಾರದೆ ತಪ್ಪದು. ನಿಮ್ಮಂತಹ ಹಿರಿಯರಿಗೆ ತಿಳಿಸುವ ಶಕ್ತಿಯು ನನಗಿಲ್ಲವಾದರೂ ಈ ಸಂದರ್ಭದಲ್ಲಿ ನನಗೆ ತಿಳಿದಮಟ್ಟಿಗೆ ನ್ಯಾಯವಾದ ವಿಷಯವನ್ನು ನಿರ್ದಾಕ್ಷಿಣ್ಯದಿಂದ ವಿಜ್ಞಾಪಿಸುತ್ತೇನೆ. ನಮ್ಮವರು ನನ್ನನ್ನು ನಿಂದಿಸಿದರೂ ನಿಂದಿಸಲಿ. ನನಗೆ ತಿಳಿದಮಟ್ಟಿಗೆ ಧರ್ಮವಾದ ಅಭಿಪ್ರಾಯವನ್ನು ಹೇಳುವೆನು. ದಯಮಾಡಿ ಲಾಲಿಸಬೇಕು.

ಈ ಕಪಟ ದ್ಯೂತದಲ್ಲಿ ಆಟಕ್ಕೆ ಕುಳಿತಿದ್ದ ಯುಧಿಷ್ಠಿರನು ಪಂಚಪಾಂಡವರ ಸಮುದಾಯದ ಪತ್ನಿಯಾದ ದ್ರೌಪದಿಯನ್ನು ಪಣವಾಗಿ ಒಡ್ಡಿ ಸೋತಿರುವನು. ಮುಂದೆ ಹೇಳುವ ಕಾರಣಗಳಿಂದ ಈಕೆಯು ಜಿತಳಾಗಲಿಲ್ಲವೆಂದು ಖಂಡಿತವಾಗಿ ತಿಳಿಯಬಹುದು.

೧. ಯುಧಿಷ್ಠಿರನು ದ್ಯೂತವ್ಯಸನದಿಂದ ಕುಳಿತಿದ್ದವನು

ಇಂತದನ್ನು ಪಣವಾಗಿ ಒಡ್ಡಬಹುದು. ಇಂತದನ್ನು ಒಡ್ಡಬಾರದು' ಎಂಬ ವಿಮರ್ಶನ ಜ್ಞಾನವು ದುರ್ವ್ಯಸನಿಗಳಿಗೆ ಇರುವುದಿಲ್ಲವಾದುದರಿಂದ ಈತನು ದ್ರೌಪದಿಯನ್ನು ಒಡ್ಡಿದುದು ವಿಚಾರಪೂರ್ವಕ ನಡೆದ ಕೃತ್ಯವಲ್ಲವು.

೨. ತಾನು ಪರರಿಂದ ಜಿತನಾಗುವವರೆಗೆ ಮಾತ್ರವೇ ತನ್ನ ಸಮಸ್ತ ಆಸ್ತಿಗಳಮೇಲೆಯೂ ಅಧಿಕಾರಿಯೆನಿಸುವನು. ತಾನೇ ಸೋತುಬಿಟ್ಟಮೇಲೆ ಆಟವೂ ಮುಗಿಯಬೇಕು. ಇತರ ಚರಸ್ಥಿರಸ್ವತ್ತುಗಳ ಮೇಲೆ ಇವನಿಗೆ ಸ್ವಾಮಿತ್ವವೇ ಇರುವುದಿಲ್ಲ. ಇವನು ಬಿಡುಗಡೆ ಹೊಂದಿದಮೇಲೆ ಪುನಃ ಆಸ್ತಿಯನ್ನು ಸಂಪಾದಿಸಿಕೊಳ್ಳುವತನಕ ಈತನಿಗೆ ಏತರಮೇಲೆಯೂ ಅಧಿಕಾರವಿಲ್ಲ.

೩. ಈ ಕೃತ್ಯವು ಯುಧಿಷ್ಠಿರನ ಬುದ್ಧಿಪೂರ್ವಕ ನಡೆದುದೆಂದು ಹೇಳಲಿಕ್ಕೆ ಅವಕಾಶವಿಲ್ಲ. ಕಪಟಿಯಾದ ಶಕುನಿಯು ದುರಾಶಾಪೀಡಿತನಾದ ನಮ್ಮಣ್ಣನ ಪ್ರೇರಣೆಯಿಂದ ಈ ಯುಧಿಷ್ಠಿರನನ್ನು ಮರುಳುಗೊಳಿಸಿ, ಬಲವಂತದಿಂದ ಜೂಜಿಗೆ ಎಳೆದನು. ಈತನು ಪಣವಾಗಿ ಒಡ್ಡಿದ ವಸ್ತುಗಳೆಲ್ಲಾ ಶಕುನಿಯ ಪ್ರೇರಣೆಯಂತೆ ಅವರ ಅನುಕೂಲಾನುಸಾರ ಒಡ್ಡಲ್ಪಟ್ಟುವೇ ಹೊರತು ಯುಧಿಷ್ಠಿರನು ಸ್ವಬುದ್ಧಿಯಿಂದಲಾಗಲಿ ಹಿತಚಿಂತಕರಾದ ತಮ್ಮಂದಿರ ಯೋಚನೆಯಿಂದಲಾಗಲಿ, ಒಡ್ಡಲ್ಪಟ್ಟುವುಗಳಲ್ಲವು. ಹೀಗೆ ಪರಪ್ರೇರಣೆಯಿಂದ ನಡಿಸಿದ ಕೃತ್ಯವು ಸಾಧುವಾದುದೆಂದು ಯಾರೂ ಒಪ್ಪಲಾರರು.

೪. ಈ ದ್ರೌಪದಿಯು ಯುಧಿಷ್ಠಿರನೊಬ್ಬನಿಗೆ ಮಾತ್ರ ಹೆಂಡತಿಯಲ್ಲ. ಇವನಂತೆಯೇ ಇವನ ನಾಲ್ವರು ತಮ್ಮಂದಿರ ಸ್ವತ್ತಾದ ಈಕೆಯಮೇಲೆ ಈತನಿಗೆ ಸಂಪೂರ್ಣವಾದ ಸ್ವಾತಂತ್ರ್ಯವಿಲ್ಲ. ತನ್ನನ್ನು ಒಡ್ಡಿ ಸೋತಾಗಲೇ ಇವನು ಆಟವನ್ನು ನಿಲ್ಲಿಸಿಬಿಡಬೇಕಾ

ಗಿದ್ದಿತು. ಹಾಗೆಮಾಡದೆ ಇವನು ಶಕುನಿಯ ಪಾಶಕ್ಕೆ ಸಿಕ್ಕಿ, ದ್ರೌಪದಿಯನ್ನು ಒಡ್ಡಿ ಸೋತುದರಿಂದ ಈ ಅನರ್ಥಗಳುಂಟಾದುವು. ಯಾವನಾದರೂ ತನ್ನದಲ್ಲದ ವಸ್ತುವನ್ನು ಒಡ್ಡಿ ಸೋಲುವುದಾಗಲಿ ಜಯಿಸುವುದಾಗಲಿ ಹೆಡ್ಡತನವೇ ಹೊರತು ಜಾಣತನವಲ್ಲ. ಹಾಗೆ ಗೆದ್ದರೂ ಆ ವಸ್ತುವು ಜಯಿಸಿದವನಿಗೆ ಬರಲಾರದು.

ಈ ಕಾರಣಗಳಿಂದ ದ್ರೌಪದಿಯು ಜಿತಳಾಗಲಿಲ್ಲ. ದುರ್ಯೋಧನನಿಗೆ ಈ ಸಾಧ್ವಿಯನ್ನು ನಿರ್ಬಂಧಪಡಿಸುವುದಕ್ಕೆ ಸ್ವಲ್ಪವೂ ಅಧಿಕಾರವಿಲ್ಲ.

ಈ ಮಾತುಗಳನ್ನು ಕೇಳಿ ಸಭೆಯಲ್ಲಿದ್ದವರೆಲ್ಲರೂ ಅತ್ಯಾಶ್ಚರ್ಯಪಟ್ಟರು. ದುರ್ಯೋಧನನ ತಮ್ಮನ ಬಾಯಿಂದ ಇಂತಹ ಮಾತುಗಳು ಹೊರಡುವುವೆಂತಲಾಗಲಿ, ಮಹಾಜನರಲ್ಲಿ ಯಾವನಾದರೂ ನ್ಯಾಯವನ್ನು ಹೇಳಲಿಕ್ಕೆ ಧೈರ್ಯಸಾಲದೆ ಅನುಮಾನಿಸುತ್ತಿರುವಾಗ ವಯಸ್ಸಿನಲ್ಲಿ ಕಿರಿಯವನಾಗಿರುವ ಈ ವಿಕರ್ಣನು ಧೈರ್ಯದಿಂದ ಮಾತನಾಡುವನೆಂತಲಾಗಲಿ ಯಾರೂ ಊಹಿಸಿರಲಿಲ್ಲ. ಇವನ ವಿಮರ್ಶೆಯು ಸಾಧುವಾದುದೆಂದು ಸಭಿಕರು ಮೆಚ್ಚಿ ತಲೆದೂಗುತ್ತಿದ್ದರು.

ಈ ವಿಕರ್ಣನು ದುಷ್ಟರಾದ ನೂರುಮಂದಿ ಕೌರವರ ಜತೆಯಲ್ಲಿ ಹುಟ್ಟಿದವನಾಗಿದ್ದರೂ ದುರ್ಯೋಧನಾದಿಗಳ ಕುಟಿಲಮಾರ್ಗವನ್ನು ನೋಡಿ ಸಹಿಸದೆ ನ್ಯಾಯಮಾರ್ಗಪ್ರವರ್ತಕರಾದ ಪಾಂಡವರ ಸದ್ಗುಣಗಳನ್ನು ಮೊದಲಿನಿಂದಲೂ ಮೆಚ್ಚುತ್ತಿದ್ದನು. ದುಷ್ಟಸಂತತಿಯಲ್ಲಿ ಅಪರೂಪವಾಗಿ ಒಬ್ಬರಿಬ್ಬರು ಸಜ್ಜನರು ಹುಟ್ಟುವುದುಉಂಟು. ರಾವಣಾದಿಗಳ ಜತೆಯಲ್ಲಿ ವಿಭೀಷಣನು ಹುಟ್ಟಿದುದೂ, ದುಷ್ಟನಾದ ಹಿರಣ್ಯಕಶಿಪುವಿನ ಗರ್ಭದಿಂದ ಪ್ರಹ್ಲಾದನು ಜನಿಸಿದುದೂ, ಪ್ರಸಿದ್ಧವಲ್ಲವೇ? ಅವರಂತೆ ಈ ವಿಕರ್ಣನು ದುಷ್ಟರ

ಮಧ್ಯದಲ್ಲಿ ಹುಟ್ಟಿದ್ದರೂ ನ್ಯಾಯವನ್ನು ಹಿಡಿದು ಮಾತನಾಡು ತ್ತಿದ್ದನು.

ಕರ್ಣಾದಿಗಳಿಗೆ ಈ ಮಾತುಗಳು ಹಿತವಾಗಿರಲಿಲ್ಲ. ತಾವು ಮಾಡಿದ ಕೆಲಸಗಳಲ್ಲಿ ಮೊದಲಿನಿಂದಲೂ ತಪ್ಪುಗಳನ್ನೇ ಹುಡುಕು ತ್ತಿದ್ದ ಈ ವಿಕರ್ಣನನ್ನು ಕಂಡರೆ ಇವರಿಗೆ ಸೇರುತ್ತಿರಲಿಲ್ಲ. ಈ ವೇಳೆಯಲ್ಲಿ ಕರ್ಣನು ಅವನಮೇಲೆ ಬಹಳಹಾಗಿ ಕೋಪಿಸಿಕೊಂಡು ಅವನನ್ನು ನೋಡಿ ಗದರಿಸಿ ಇಂತೆಂದನು.

ಎಲಾ ಪೋರಾ, ಎಷ್ಟು ಮಾತುಗಳಾಡುತಲಿದ್ದೀಯೊ ? ಮೊದಲಿನಿಂದಲೂ ನಿನ್ನ ಮಾತುಗಳು ಕಂಡೇ ಇದ್ದೇವೆ. ನಮ್ಮ ಕೃತ್ಯಗಳಲ್ಲೆಲ್ಲಾ ನೀನು ತಪ್ಪುಗಳನ್ನೇ ಹುಡುಕುತ್ತಿರುವೆ. ನೀನು ದುರ್ಯೋಧನಾದಿಗಳ ಜತೆಯಲ್ಲಿ ಹುಟ್ಟಿದುದು ವ್ಯರ್ಥವು. ಈ ಸಭೆ ಯಲ್ಲಿ ನಿನ್ನಜಾಣತನ ತೋರಿಸಬೇಡ. ಬಾಯಿಮುಚ್ಚು. ಈ ನ್ಯಾ ಯವನ್ನು ತೀರಿಸಬೇಕೆಂದು ನಿನ್ನನ್ನಿಲ್ಲಿಗೆ ಯಾರು ಕರೆಯಿಸಿದರು ? ನೀನೇ ದಂಡಾಧಿಪತಿಯಂತೆ ನ್ಯಾಯಾನ್ಯಾಯ ವಿಚಾರಮಾಡಿ ತೀರ್ಮಾ ನವನ್ನು ಹೇಳಿಬಿಟ್ಟೆಯಾ ? ಭೀಷ್ಮದ್ರೋಣಾದಿಗಳಿಗೆ ಸುದಾ ಬಗೆ ಹರಿಯದೆ ಇದ್ದ ಧರ್ಮಸೂಕ್ಷ್ಮವು ಬಾಲನಾದ ನಿನ್ನಿಂದ ವ್ಯವಸ್ಥೆ ಯಾಗಬಲ್ಲುದೆ ? ಸಾಕು ನಿಲ್ಲಿಸು. ಒಬ್ಬ ಗಂಡಸಿಗೆ ಒಬ್ಬ ಹೆಂಡತಿ ಇರುವುದು ಲೋಕವಾಡಿಕೆ. ಅನೇಕರಿಗೆ ಪತ್ನಿಯಾಗಿ ಸೇವೆಮಾಡಿ ಕೊಂಡಿರುವ ಈ ಹೆಂಗುಸನ್ನು ಗರತಿಯೆಂದು ಯಾರು ಹೇಳುವರು ? ತುಂಬಿದ ಸಭೆಯಲ್ಲಿ ನ್ಯಾಯಮಾರ್ಗದಿಂದಲೇ ಇವಳನ್ನು ಜೂಜಿನಲ್ಲಿ ಗೆದ್ದಿದ್ದೇವೆ. ಇವಳು ನಮ್ಮೊಡೆಯನ ಪಾಲಲ್ಲದೆ ಮತ್ತಾರ ಅಧಿಕಾ ರಕ್ಕೂ ಒಳಪಟ್ಟವಳಲ್ಲವು. ತಲೆಯೆಲ್ಲಾ ಹರಟುಸೆಯಾ ? ಬಾಲ ನಾದ ನೀನು ಹೀಗೆ ದೊಡ್ಡವರಮಾತಿಗೆ ಬರಬೇಡ. ತೊಲಗಿಹೋಗು.

ಹೀಗೆ ಹೇಳಿ ಆ ಕರ್ಣನು ದುಶ್ಶಾಸನನ ಕಡೆಗೆ ತಿರುಗಿ ಇಂತೆಂದನು.

ಎಲೈ ರಾಜಸಹೋದರನೇ. ನೀನು ಈ ಹುಡುಗನ ಮಾತು ಲಕ್ಷ್ಯಮಾಡಬೇಡ, ನಿಮ್ಮಣ್ಣನು ಆಜ್ಞಾಪಿಸಿರುವ ಕೆಲಸವನ್ನು ತಡೆ ಮಾಡದೆ ನಡಿಸಿಬಿಡು.

ಈಮಾತನ್ನು ಕೇಳಿ ದುರ್ಯೋಧನನು ನಗುತ್ತಾ ತಮ್ಮನನ್ನು ನೋಡಿ ಹೀಗೆ ಹೇಳಿದನು.

ದುಶ್ಶಾಸನಾ, ಏಕೆ ಸುಮ್ಮನೆ ನಿಂತಿರುವೆ? ಈ ದ್ರೌಪದಿಯ ಸಖಿಯರು ಸ್ವಯಂವರ ಮಂಟಪದಲ್ಲಿ ನಮ್ಮನ್ನು ಅಣಕಿಸಿದಾಗಲೂ, ಸಭಾಮಂಟಪದಲ್ಲಿ ನಾನು ಬಿದ್ದಾಗ ಹೆಂಗಸರು ಕೈಹೊಯ್ದು ನಕ್ಕಾಗಲೂ, ಇವಳು ನನ್ನ ಅವಮಾನವನ್ನು ನೋಡಿಕೊಂಡು, ಅವರನ್ನು ತಡೆಯದೆ ಸುಮ್ಮನೆ ಇದ್ದುದು ನಿನಗೆ ತಿಳಿಯದೆ? ಇಂತವಳ ವಿಷಯದಲ್ಲಿ ಕನಿಕರ ತೋರಿಸಬಹುದೆ? ನೀನು ಇವಳ ಗಂಡಂದಿರಿಗೆ ಹೆದರದೆ ಇವಳ ಪೀತಾಂಬರವನ್ನು ಸೆಳೆದುಹಾಕಿ, ದಾಸಿಯರಿಗೆ ಅರ್ಹವಾದ ಕಂಬಳಿಕೋರಿಯನ್ನು ಇವಳಿಗೆ ಕೊಡು. ಸಾವಕಾಶವೇತಕ್ಕೆ?

ದ್ರೌಪದಿಯ ಸೀರೆಯ ಸೆರಗು ಹಿಡಿದು ಎಳೆಯುತ್ತಿದ್ದ ದುಶ್ಶಾಸನನಿಗೆ ಅಣ್ಣನ ಈ ಮಾತುಗಳನ್ನು ಕೇಳಿ ಮತ್ತಷ್ಟು ಧೈರ್ಯವುಂಟಾಯಿತು. ಅವನು ಆ ಸಾಧ್ವಿಯ ಸೀರೆಯನ್ನು ಸುಲಿಯಲಾರಂಭಿಸಿದನು.

ಅಬಲೆಯಾದ ದ್ರೌಪದಿಯು ಆ ವೇಳೆಯಲ್ಲಿ ಏನುಮಾಡಲಾಪಳು? ತನ್ನ ಪತಿಗಳೈವರೂ ಧರ್ಮಕ್ಕೆ ಬದ್ಧರಾಗಿ ನೆಲವನ್ನು ನೋಡುತ್ತಾ ಮೌನದಿಂದ ಕುಳಿತಿರುವರು. ಹಿರಿಯರಾದ ಸಭಿಕರೂ ಧೃತರಾಷ್ಟ್ರಾದಿ ಬಂಧುಜನರೂ ಏನೂ ಹೇಳಲಾರದೆ ಮೂಕೀ

ಭಾವವನ್ನು ವಹಿಸಿರುವರು. ದುರುಳ ದುಶ್ಶಾಸನನು ಒಂದು ಕೈಯಲ್ಲಿ ಮುಡಿ ಹಿಡಿದುಕೊಂಡು, ಮತ್ತೊಂದು ಕೈಯಲ್ಲಿ ಉಟ್ಟಸೀರೆಯನ್ನು ಬಿಚ್ಚಿಹಾಕಲು ಯತ್ನಿಸಿರುವನು. ಇಂತಹ ಸಂದರ್ಭದಲ್ಲಿ ಆವಳಿಗೆ ದಿಕ್ಕೇ ತೋರಲಿಲ್ಲ. ಎಡಗೈಯಲ್ಲಿ ಮಂಡೆಯ ಕೂದಲುಗಳನ್ನೂ ಬಲಗೈಯಲ್ಲಿ ಸೀರೆಯ ನಿರಿಯನ್ನು ಹಿಡಿದುಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡು, ತನ್ನ ಮನಸ್ಸನ್ನೇ ದೂತನನ್ನಾಗಿ ಮಾಡಿ ಪರಮಾತ್ಮನಾದ ಶ್ರೀಕೃಷ್ಣನ ಸನ್ನಿಧಿಗೆ ಅಟ್ಟಿ ಇಂತೆಂದು ನುತಿಸಿದಳು.

ಎಲೈ ಭಕ್ತವತ್ಸಲನಾದ ಪರಮಾತ್ಮನೇ, ನೀನು ಎಲ್ಲಿದ್ದೀಯಪ್ಪಾ, ನಾನು ನಿನ್ನ ತಂಗಿಯೆಂದು ಸಲುಗೆಯಿಂದ ಹೇಳಿಕೊಳ್ಳಲೇ? ಲೋಕಬಂಧುವಾದ ನಿನ್ನನ್ನು ನನ್ನಂತಹ ಅನಾಥರು ಎಷ್ಟುಮಂದಿ ಕರೆಯುತ್ತಿರುವರೋ ? ಭಕ್ತಳೆಂದು ಹೇಳಲೇ ? ಪ್ರಹ್ಲಾದ ನಾರದಾದಿ ಮಹಾತ್ಮರು ನಿನ್ನನ್ನು ವಶಪಡಿಸಿಕೊಂಡಿರುವಾಗ ನನ್ನ ಮೊರೆಯು ನಿನಗೆ ಕೇಳಬರುವುದು ಹೇಗೆ? ಎಲೈ ದೀನಬಂಧುವೇ, ನಿನ್ನ ನಾಮಾವಳಿಯನ್ನು ಹೊಗಳಲಿಕ್ಕೆನನಗೆ ಆದಿಶೇಷನಂತೆ ಎರಡು ಸಾವಿರ ನಾಲಗೆಗಳಿವೆಯೆ? ನಿನ್ನನ್ನು ಪೂಜಿಸಲಿಕ್ಕೆ ಬಾಣಾಸುರನಂತೆ ಸಾವಿರ ಕೈಗಳಿವೆಯೆ? ನಿನ್ನ ಶ್ರೀ ಮೂರ್ತಿಯನ್ನು ನೋಡಲಿಕ್ಕೆ ದೇವೇಂದ್ರನಂತೆ ಸಾವಿರ ಕಣ್ಣುಗಳಿವೆಯೆ ? ಅಬಲೆಯಾದ ನಾನು ನಿನ್ನ ಅನುಗ್ರಹವನ್ನು ಹೇಗೆ ಪಡೆಯಲಿ ? ಸ್ವಾಮಿಾ ! ದುರ್ಯೋಧನನು ಕೋಪದಿಂದ ನನ್ನನ್ನು ತನ್ನ ದಾಸಿಯಂತೆ ತಿಳಿದು, ಹೀನವೃತ್ತಿಗೆ ಕರೆಯುತ್ತಿರುವನು. ಈ ದುಶ್ಶಾಸನನು ತಲೆಗೂದಲನ್ನು ಹಿಡಿದು ಜಗ್ಗುತ್ತಾ ನನ್ನಮಾನ ತೆಗೆಯಬೇಕೆಂದು ಸೀರೆಯನ್ನು ಸುಲಿಯುತ್ತಿರುವನು. ಪತಿಗಳಾದರೋ ಧರ್ಮಪಾಶಬದ್ಧರಾಗಿ ಸುಮ್ಮನೆ ಕುಳಿತಿ

ರುವರು. ಅನಾಥೆಯಾದ ನನಗೆ ನೀನಲ್ಲದೆ ಮತ್ತಾರು ರಕ್ಷಕರಿರುವರು? ಎನ್ನೊಡೆಯಾ? ನನ್ನ ಪಂಚಪ್ರಾಣಗಳೂ ದೇಹವನ್ನು ಬಿಟ್ಟು ತೊಲಗುತ್ತಿವೆಯಲ್ಲ! ನನಗೆ ಈ ಸಭೆಯಲ್ಲಿ ಮಾನವೊಂದುಳಿದರೆ ಸಮಸ್ತವೂ ಉಳಿಯುವುವು. ಕೃಷ್ಣಾ! ಉಟ್ಟಸೀರೆಯನ್ನು ಈ ಖಳನು ಸುಲಿಯುವನಲ್ಲ! ಇದಕ್ಕಿಂತಲೂ ಅವಮಾನವುಂಟೆ? ಗತಿವಿಹೀನರಿಗೆ ನೀನೇಗತಿಯಲ್ಲವೆ? ಆಪದ್ಬಾಂಧವಾ, ಆಪದುದ್ಧಾರಕಾ! ನಿನ್ನ ಮಹಿಮೆಗಳನ್ನು ಹೊಗಳಲರಿಯೆನು. ಸೆರೆಬಿದ್ದ ಜಾನಕಿಯನ್ನು ರಕ್ಷಿಸಲು ನೀನು ಸಮುದ್ರಕ್ಕೆ ಸೇತುವನ್ನು ಕಟ್ಟಿ, ಲಂಕೆಗೆ ಹೋಗಿ ರಾವಣಾದಿ ದುಷ್ಟದಾನವರನ್ನು ಶಿಕ್ಷಿಸಲಿಲ್ಲವೆ? ಬಾಲನಾದ ಪ್ರಹ್ಲಾದನ ಮೊರೆಕೇಳಿ, ಆಗಲೇ ಓಡಿಬಂದು ಅವನನ್ನು ಸಲಹಲಿಲ್ಲವೆ? ಗಜೇಂದ್ರನು ಮೊಸಳೆಯ ಬಾಧೆಯನ್ನು ತಡೆಯಲಾರದೆ ಕಿರಚಿಕೊಳ್ಳಲು ಆರ್ತತ್ರಾಣಪರಾಯಣನಾದ ನೀನು ಲಕ್ಷ್ಮಿಗೆಸುದಾ ಹೇಳದೆ ಓಡಿಬಂದು, ನಕ್ರವನ್ನು ಚಕ್ರದಿಂದ ಮರ್ದಿಸಿ ಭಕ್ತನನ್ನು ಸಲಹಲಿಲ್ಲವೆ?

ಎಲೈಸ್ವಾಮಿ, ನೀನು ಸರ್ವವ್ಯಾಪಿಯಾಗಿರುವೆಯೆಂದು ಹೇಳುತ್ತಿರುವರು. ಈ ವೇಳೆಯಲ್ಲಿ ಎಲ್ಲಿಗೆ ಹೋದೆಯೋ ತಿಳಿಯದು. ಅಣ್ಣಾ! ಸನಕಾದಿಯೋಗಿಜನರ ಸಮಾಧಿಗಳನ್ನು ಪರೀಕ್ಷಿಸಲು ಹೋಗಿರುವೆಯಾ? ಅಥವಾ ದುರುಳರಾದ ದೈತ್ಯರನ್ನು ಶಿಕ್ಷಿಸಿ, ದೇವತೆಗಳನ್ನು ರಕ್ಷಿಸಬೇಕಾದ ಸಮಯವೇನಾದರೂ ಒದಗಿದೆಯೆ? ಇಲ್ಲವೇ ಗೋಪಿಕಾಸ್ತ್ರೀಯರ ಲೀಲಾ ವಿಲಾಸಗಳನ್ನು ನೋಡುವುದಕ್ಕೆ ಹೊರಟಿರುವೆಯಾ? ಭಕ್ತಕುಟುಂಬಿಯೆನಿಸಿರುವ ನೀನು ಪರಮಭಕ್ತರ ಸ್ಥಿತಿಗಳನ್ನು ವಿಚಾರಿಸಲಿಕ್ಕೆ ಹೋಗಿರುವೆಯೆಂದು ತಿಳಿಯಲೇ? ನನಗೆ ಈಗ ಕರ್ತವ್ಯವೇ ತೋರದೆ ಇದೆಯಲ್ಲ!

ಎಲೈಜಗದ್ರಕ್ಷಕಾ, ನೀನು ಈ ಭೂಮಿಯಲ್ಲಿ ಅವತರಿಸಿದುದು

ದುಷ್ಟಶಿಕ್ಷಣಕ್ಕೋಸ್ಕರವೇ ಅಲ್ಲವೇ? ಪೂತನೆ, ಶಕಟ, ಧೇನುಕ, ಬಲ, ಹಂಸ, ಡಿಬಿಕ, ಕಂಸ ಮುಂತಾದ ದುಷ್ಟದಾನವರನ್ನೆಲ್ಲಾ ಶಿಕ್ಷಿಸಿದೆ. ಗೋವರ್ಧನ ಗಿರಿಯನ್ನೆತ್ತಿ ಗೋಪಾಲರನ್ನು ಸಲಹಿದೆ. ಕಾಳೀಯ ಸರ್ಪನನ್ನು ಹೊರಡಿಸಿ, ಯಮುನಾಜಲವನ್ನು ಪಾನಕ್ಕೆ ಯೋಗ್ಯವಾಗಿ ಮಾಡಿದೆ. ಶಿಶುಪಾಲ ಜರಾಸಂಧಾದಿ ದುಷ್ಟದೈತ್ಯರನ್ನು ಸಂಹರಿಸಿ, ನೀನು ಈ ಭೂಭಾರವನ್ನು ಬಹುಮಟ್ಟಿಗೆ ತಗ್ಗಿಸಿದೆ.

ಎಲೈದೇವಾ, ನಿನ್ನ ಸೋದರತ್ತೆಯ ಮಕ್ಕಳೆಂದರೆ ಸಂಚಪ್ರಾಣಗಳೆಂದು ತಿಳಿದಿದ್ದೆಯಲ್ಲ! ಅಂತವರ ಪರಿಭವವನ್ನು ನೋಡಿ ನೋಡಿ, ಇನ್ನೂ ಸ್ಥೈರಿಸಿಕೊಂಡಿರುವೆಯಾ? ನಾನು ನಿನ್ನ ತಂಗಿಯಲ್ಲವೆ? ಹಾ ಹಾ! ಲೋಕಬಾಂಧವನಾದ ನಿನಗೆ ವಾವೆ ವರ್ತನೆಗಳೇ ಇಲ್ಲವಂತೆ! ಸ್ವಾಮಿಾ! ಬೇಗಬಾ. ನನ್ನ ಮಾನವನ್ನು ಕಾಪಾಡು. ಕಾಪಾಡು.

ಈ ದುಶ್ಶಾಸನನೆಂಬ ತಮನು ನನ್ನ ಸಂತೋಷವೆಂಬ ವೇದವನ್ನು ಕದ್ದೊಯ್ಯುತ್ತಿರುವನು ; ಮತ್ಸ್ಯರೂಪಿಯಾದ ನೀನು ಬೇಗ ಬಂದು ನನ್ನನ್ನು ಸಲಹು. ಎಲೈ ಕೂರ್ಮರೂಪಿಯಾದ ದೇವನೇ, ನನ್ನ ಧರ್ಮವೆಂಬ ಮಂದರಗಿರಿಯು ಕುರುಸಭೆಯೆಂಬ ಸಮುದ್ರದಲ್ಲಿ ಮುಳುಗಿಹೋಗುತ್ತಲಿದೆ! ಬೇಗ ಬಂದು ಬೆನ್ನುಕೊಟ್ಟು ಇದನ್ನು ಉದ್ಧರಿಸು. ಎಲೈ ಸ್ವಾಮಿಯೇ, ನನ್ನ ಲಜ್ಜೆಯೆಂಬ ಭೂಮಿಯನ್ನು ಈ ದುರುಳನು ಹಿರಣ್ಯಾಕ್ಷಕನಂತೆ ಸುತ್ತಿಕೊಂಡು ಓಡುತ್ತಿರುವನು. ವರಾಹರೂಪದಿಂದ ಬಂದು ಇವನನ್ನು ಶಿಕ್ಷಿಸಿ ನನ್ನ ಮಾನಸಂರಕ್ಷಣೆಮಾಡಪ್ಪಾ! ನನ್ನ ಮನೋಭಾವವೆಂಬ ಪ್ರಹ್ಲಾದನನ್ನು ಹಿರಣ್ಯಕಶಿಪುವಿನಂತೆ ಈ ದುರುಳನು ವಧಿಸಲು ಕತ್ತಿಯೆತ್ತಿರುವನು. ಇವನ ಅಹಂಕಾರವೆಂಬ ಸ್ತಂಭವನ್ನು ಭೇದಿಸಿಕೊಂಡು ನರಸಿಂಹ

ರೂಪದಿಂದ ಬಂದು ನನ್ನನ್ನು ಬಿಡಿಸೈಯಾ, ಸ್ವಾಮಿಾ! ಎಲೈ ವಾಮನಮೂರ್ತಿಯೇ, ನನ್ನ ಕರಣತ್ರಯವೆಂಬ ತ್ರಿಲೋಕವನ್ನೂ ಈ ದೈತ್ಯನು ಸೂರೆಗೊಳ್ಳುತ್ತಿರುವನಲ್ಲಾ! ನೀನು ವಾಮನ ರೂಪದಿಂದ ಬೇಗಬಂದು ನನ್ನಮಾನವನ್ನುಳಿಸಬಾರದೆ? ಎಲೈದೇವಾ, ನನ್ನ ಭಕ್ತಿಯೆಂಬ ರೇಣುಕಾದೇವಿಯನ್ನು ಕಾರ್ತವೀರ್ಯನಂತೆ ಈ ದುರುಳನು ಪರಿಭವಗೊಳಿಸುತ್ತಿರುವನು. ನೀನು ಪರಶುರಾಮನಂತೆ ಬೇಗಬಂದು ಇವನನ್ನು ಶಿಕ್ಷಿಸು. ಆಪದುದ್ಧಾರಕಾ, ನನ್ನ ಲಜ್ಜೆಯೆಂಬ ಸೀತಾದೇವಿಯನ್ನುರಾವಣರೂಪಿಯಾಗಿ ಈ ದುಷ್ಟನು ಬಂದು ಕದ್ದೊಯ್ಯುತ್ತಿರುವನು. ನೀನು ರಾಮನಾಗಿ ಈಗಲೇಬಂದು ಈ ಖಳನ ಕೈಯಿಂದ ನನ್ನನ್ನು ಬಿಡಿಸು. ಸಾಕ್ಷಾತ್ ಶ್ರೀಕೃಷ್ಣರೂಪನಾದ ನೀನು ಈ ಕೌರವನ ಅಹಂಕಾರವೆಂಬ ಕಾಳೀಯಸರ್ಪನ ಗರ್ವವನ್ನು ಭಂಗಮಾಡಿ, ನನ್ನ ಮಾನವೆಂಬ ಯಮುನಾಜಲವನ್ನು ಪಾವನಗೊಳಿಸು. ದೇವಾ! ನೀನು ಬುಧ್ಧರೂಪದಿಂದ ಬಂದು ಈ ದುಷ್ಟನು ಮಾಡುತ್ತಿರುವ ಸ್ತ್ರೀ ಹಿಂಸೆ ಎಂಬ ಪಶುವಧೆಯನ್ನು ತಪ್ಪಿಸು. ಬೌದ್ಧಾವತಾರದಲ್ಲಿ ನೀನು ವಿವಸ್ತ್ರನಾಗಿ ದಿಗಂಬರನಾದೆಯಂತೆ! ಹೆಂಗುಸಾದ ನಾನು ದಿಗಂಬರಳಾಗಬಹುದೆ? ಹೇ ಪರಮಾತ್ಮ, ನಿಷ್ಕಾರಣವಾಗಿ ಸದಾಚಾರವನ್ನು ಮುರಿಯುವ ಈ ಕೌರವನೆಂಬ ಮ್ಲೇಚ್ಛನನ್ನು ಶಿಕ್ಷಿಸಲು ಕಲ್ಕ್ಯವತಾರದಿಂದ ನೀನು ಬೇಗ ಬಾ. ಎಲೈ ದೇವಾದಿದೇವಾ, ಎಷ್ಟುಬಗೆಯಿಂದ ನಿನ್ನನ್ನು ಕರೆಯಲಿ? ಇನ್ನೆಷ್ಟು ವರ್ಣಿಸಲಿ? ನಾನು ಕಲಿತಿದ್ದ ಶಬ್ದಗಳೆಲ್ಲವೂ ಮುಗಿದುಹೋದುವು. ನಿನಗಿನ್ನೂ ದಯೆ ಬಾರದೇ?

ಹೀಗೆ ದ್ರೌಪದಿಯು ತನ್ನ ಮನಸ್ಸಿನಲ್ಲಿಯೇ ಆ ಪರಮಾತ್ಮನ ಧ್ಯಾನಮಾಡುತ್ತಿದ್ದಳು. ದೃಢಭಕ್ತಿಯಿಂದ ತನ್ನನ್ನು ಧ್ಯಾನಿಸಿದರೆ

ಅವರು ಎಂತವರಾದರೇನು ? ಕೈಬಿಡದೆ ಅವರನ್ನು ಸಲಹುವ ಬಿರುದನ್ನು ವಹಿಸಿರುವ ಸ್ವಾಮಿಯು ನಿದ್ರಿಸುತ್ತಿರುವನೆ ? ಆ ವೇಳೆಯಲ್ಲಿ ಶ್ರೀಕೃಷ್ಣನು ದ್ವಾರಕಾಪುರದಲ್ಲಿ ದಿವ್ಯಸೌಧದಲ್ಲಿ ಹಂಸತೂಲಿಕಾ ತಲ್ಪದಮೇಲೆ ಪವಳಿಸಿದ್ದನು. ಲಕ್ಷ್ಮೀಸ್ವರೂಪಳಾದ ರುಕ್ಮಿಣಿಯು ಆತನ ಪಾದಗಳೊತ್ತುತ್ತಾ ಸೇವೆ ಮಾಡುತ್ತಿದ್ದಳು. ದ್ರೌಪದಿಯ ಆರ್ತಧ್ವನಿಯೆಂಬ ಬಾಣದ ಅಲಗು ಹಾರಿಹೋಗಿ, ಆತನ ಹೃದಯವನ್ನು ಭೇದಿಸಿಕೊಂಡು, ಆತನ ಕಿವಿಯಲ್ಲಿ ಹೊಕ್ಕು ನಿದ್ರಾಭಂಗ ಮಾಡಿತೋ ? ಎಂಬಂತೆ ಆತನು ಕೂಡಲೇ ಎಚ್ಚತ್ತು ಥಟ್ಟನೆ ಎದ್ದು ನಿಂತನು. ರುಕ್ಮಿಣೀ ದೇವಿಗೆ ಹೊರತು ಮತ್ತಾರಿಗೂ ಆ ಸ್ವಾಮಿಯ ಮನೋಭಿಪ್ರಾಯವು ತಿಳಿಯಲಿಲ್ಲ. ಆ ಪರಮಾತ್ಮನು ಅದೇ ನಿಮಿಷದಲ್ಲಿಯೇ ಹಸ್ತಿನಾಪಟ್ಟಣದ ಕೌರವಸಭೆಗೆ ಬಂದು ದ್ರೌಪದಿಗೆ ಬೆಂಬಲವಾಗಿ ಆಕೆಯ ಹೃದಯದಲ್ಲಿ ಅದೃಶ್ಯನಾಗಿ ನಿಂತನು. ತತ್ಕ್ಷಣವೇ ಆ ದ್ರೌಪದಿಯ ಮನಸ್ಸಿಗೆ ಏನೋ ಒಂದು ಬಗೆಯ ಧೈರ್ಯ ಹುಟ್ಟಿತು. 'ಆಹಾ ! ಇನ್ನು ನನಗೆ ಭಯವೇನು ? ಜಗನ್ಮಾನ್ಯನಾದ ಸ್ವಾಮಿಯು ಅನುಗ್ರಹಿಸಿಬಿಟ್ಟನು. ನನ್ನ ಮಾನ ಸಂರಕ್ಷಣೆಯಾಯಿತು. ಇನ್ನು ಈ ಕಲಿಪುರುಷನಿಗೆ ನಾನು ಹೆದರಬೇಕಾಗಿಲ್ಲ' ಎಂದು ಮನಸ್ಸಿನಲ್ಲಿ ತಿಳಿದುಕೊಂಡಳು. ಆ ದ್ರೌಪದಿಯ ಅಂತಃಕರಣಕ್ಕೆ ವಿಲಕ್ಷಣವಾದ ಸಮಾಧಾನ ವುಂಟಾಯಿತು. ಆಗ ಸ್ವಾಮಿಯು ತಾನು ಹೊದೆದಿದ್ದ ಪೀತಾಂಬರವನ್ನು ತೆಗೆದು ದ್ರೌಪದಿಯ ಮೈಗೆ ಹೊದಿಸಿಬಿಟ್ಟನು. ಕೂಡಲೇ ಆ ಸಭೆಯಲ್ಲಿ ಕೋಟಿಸೂರ್ಯಪ್ರಭಾಭಾಸಮಾನವಾದ ತೇಜಸ್ಸೊಂದು ಮಿಂಚಿನಂತೆ ಹೊಳೆದು, ಥಟ್ಟನೆ ಮಾಯವಾದುದು ಮಾತ್ರ ಸಭಿಕರಿಗೆ ಕಾಣಿಸಿತು. ಆ ದ್ರೌಪದಿಯ ಆಪಾದಮಸ್ತಕವೂ ಮುಚ್ಚಲ್ಪಟ್ಟು ಆಕೆಯ ಅವಯವ ಒಂದಾದರೂ ಜನರ

ದೃಷ್ಟಿಗೆ ಗೋಚರವಾಗುತ್ತಿರಲಿಲ್ಲ. ಸಾಧಾರಣವಾಗಿ ಉತ್ತಮ ಮಹಿಳೆಯರ ಅಂಗುಷ್ಠವನ್ನುಮಾತ್ರ ಪರಿಜನರು ನೋಡಬಹುದಂತೆ! ಈ ಸಂದರ್ಭದಲ್ಲಿ ಪಾಂಚಾಲಿಯ ಪಾದದ ಅಂಗುಷ್ಠವೂ ಗೋಚರ ವಾಗುತ್ತಿರಲಿಲ್ಲ. ಪರಮಾತ್ಮನು ಇಲ್ಲಿಗೆ ಬಂದನು. ಇಲ್ಲಿಂದ ಹೋದನು. ಎಂದು ಸಾಮಾನ್ಯಜನರಾಡುವ ಮಾತುಗಳು ಜ್ಞಾನಿಗಳ ಮನಸ್ಸಿಗೆ ಒಪ್ಪುವುದಿಲ್ಲ. ಸರ್ವವ್ಯಾಪಿಯಾಗಿಯೂ, ಸರ್ವಸಾಕ್ಷಿಯಾಗಿಯೂ ಇರುವ ಭಗವಂತನು ಪ್ರಾಕೃತಪುರುಷರಂತೆ ಬರುವುದೂ ಹೋಗುವುದೂ ಭಾವನೆಯೇ ಹೊರತು ವಾಸ್ತವವಾದುವುಗಳಲ್ಲವೆಂಬುದು ಅವರ ಅಭಿಪ್ರಾಯವು. ದೃಢಭಕ್ತಿಯಿಂದ ಆ ಸ್ವಾಮಿಯನ್ನು ನೆನೆದರೆ ಸಾಕು. ಇದ್ದಕಡೆಯಲ್ಲಿಯೇ ಪ್ರತ್ಯಕ್ಷನಾಗಿ ಭಕ್ತರನ್ನು ಸಂರಕ್ಷಿಸುವನು. ಇದ್ದುದಿದ್ದ ಹಾಗೆಯೇ ದ್ರೌಪದಿಯು ಆರ್ತಧ್ವನಿಯನ್ನು ನಿಲ್ಲಿಸಿ ಧೈರ್ಯವಾಗಿ ನಿಂತಿರುವುದನ್ನೂ, ಅಪೂರ್ವವಾದ ತೇಜಸ್ಸು ಥಟ್ಟನೆ ತೋರಿ ಅದೃಶ್ಯವಾದುದನ್ನೂ ಕಂಡು ಯುಧಿಷ್ಠಿರನು ಆ ಸಾಧ್ವಿಗೆ ಭಗದನುಗ್ರಹವಾಯಿತೆಂದು ತಿಳಿದುಕೊಂಡನು. ತನ್ನ ತಮ್ಮಂದಿರಿಗೂ ಅದನ್ನು ಸೂಚಿಸಿದನು. ಪರಮಭಕ್ತನಾದ ವಿದುರನಿಗೂ, ಜ್ಞಾನಿಯಾದ ಭೀಷ್ಮನಿಗೂ ಇದೇ ರೀತಿಯಲ್ಲಿ ಮನಸ್ಸಿಗೆ ಒಂದು ಬಗೆಯ ಆನಂದ ವುಂಟಾಯಿತು. ಸ್ವಾಮಿಯೂ ತನ್ನನ್ನು ನಂಬಿದವರನ್ನು ಕೈಬಿಡನೆಂಬ ಬಿರುದನ್ನು ಈ ವೇಳೆಯಲ್ಲಿ ಸಾರ್ಥಕಪಡಿಸಲು, ಈ ದ್ರೌಪದಿಯಲ್ಲಿ ಕೃಪೆಮಾಡಿರುವನೆಂದು ತಿಳಿದುಕೊಂಡು, ಆನಂದಪಟ್ಟರು.

ಶ್ರೀಕೃಷ್ಣನು ಸಭೆಗೆ ದಯಮಾಡಿಸಿದುದೂ, ತನ್ನ ಪೀತಾಂಬರವನ್ನು ತೆಗೆದು ದ್ರೌಪದಿಗೆ ಹೊದಿಸಿದುದೂ ಯುಧಿಷ್ಠಿರನೊಬ್ಬನಿಗೆ ಮಾತ್ರ ಕಾಣಿಸಿತು. ಆತನು ಬೆರಳ ಸಂಜ್ಞೆಯಿಂದ ತನ್ನ ತಮ್ಮಂ

ದಿರಿಗೆ ಭಗವನ್ಮಹಿಮೆಯನ್ನು ತೋರಿಸಿದನು. ವಿದುರ ಭೀಷ್ಮರಿಬ್ಬರಿಗೂ ಶ್ರೀಕೃಷ್ಣಸ್ವಾಮಿಯ ದಿವ್ಯಮೂರ್ತಿಯು ಪ್ರತ್ಯಕ್ಷವಾಗಿ ಕಾಣಿಸಿತು. ಅವರು ಭಗವದ್ವಿಲಾಸವನ್ನು ತಮ್ಮ ಮನದಲ್ಲಿಯೇ ನೆನೆನೆನೆದು ಆನಂದಿಸಿ ವಂದಿಸಿದರು. ಇತರರಿಗೆ ಕ್ಷಣಿಕವಾದ ಬೆಳಕು ಹೊರತು ಮತ್ತಾವ ವಿಶೇಷವೂ ಕಾಣಬರಲಿಲ್ಲ.

ಆ ವೇಳೆಯಲ್ಲಿ ದುರ್ಯೋಧನನು ದ್ರೌಪದಿಯಮೇಲೆ ಮುಳಿಸಿನಿಂದ ಇಂತೆಂದನು.

ದುರ್ಯೋ.—ಎಲೆತೊತ್ತೇ, ನಿನ್ನಅಭಿಪ್ರಾಯವೇನು? ಬೇಗ ಹೇಳು. ನೀನು ನನ್ನನ್ನು ಹಾಸ್ಯಮಾಡಿದುದಕ್ಕೆ ತಕ್ಕಂತೆ ಮುಯ್ಯಿ ತೀರಿಸಲು ಈ ಸಭೆಯಲ್ಲಿ ನಿನ್ನನ್ನು ವಸ್ತ್ರಹೀನಳನ್ನಾಗಿಮಾಡಿ ಮಾನಭಂಗ ಮಾಡಿಸಲೇ ? ಅಥವಾ ಕುಲವಧುವಿನಂತೆ ನನ್ನ ಈ ತೊಡೆಯ ಮೇಲೆ ಬಂದು ಕುಳಿತುಕೊಳ್ಳುವ ಸುಖವನ್ನು ಬಯಸುವೆಯಾ ? ಇವುಗಳಲ್ಲಿ ಯಾವುದು ನಿನಗೆ ಸಮ್ಮತ? ಬೇಗಹೇಳು.

ದ್ರೌಪದಿ.—(ಕಣ್ಣುಕೆಂಪಗೆ ಮಾಡಿಕೊಂಡು) ಅಯ್ಯಾ ರಾಜನೇ, ನಿನಗೆ ಇಷ್ಟರ ಕಾಮಾತುರ ವುಂಟಾಯಿತೆ ? ಸಭಿಕರ ಎದುರಿಗೆ ನಿನ್ನ ಮಾತಿಗೆ ಉತ್ತರ ಕೊಟ್ಟರೆ ನಿನ್ನ ಮನಸ್ಸು ನೋಯಬಹುದು. ಆದರೂ ಹೇಳುವೆನು ಕೇಳು. ನನ್ನ ಸ್ವಯಂವರೋತ್ಸವವು ಮೊದಲೇ ಆಗಿರುವುದರಿಂದ ಪುನಃ ನಾನು ಪರರನ್ನು ವರಿಸಲಾರೆನು. ನಿನ್ನ ಕಾಮಕ್ಕೆ ತಕ್ಕ ಕನ್ಯೆಯು ಬೆಳೆದು ಮದುವೆಗೆ ಸಿದ್ಧಳಾಗಿರುವಳು. ಅವಳಾರೆನ್ನುವೆಯೋ? ಕೇಳು. ನನ್ನ ಪತಿಯಾದ ಈ ಭೀಮಸೇನನ ಗದಾ ಕನ್ಯೆಯೇ. ಇವಳು ನವೋಢೆಯಾಗಿ ನಿನ್ನನ್ನು ವರಿಸಲು ಪ್ರತೀಕ್ಷಿಸುತ್ತಿರುವಳು. ಲೋಕವಿಲಕ್ಷಣವಾದ ರೂಪವುಳ್ಳ ಈ ಕನ್ಯೆಯೇ ನಿನಗೆ ವಧುವಾಗಲು ತಕ್ಕವಳು. ಇವಳು ರಣರಂಗ

ನೆಂಬಹಸೆಯ ಜಗಲಿಯಮೇಲೆ ಕುಳಿತು, ನರಿಗಳ ಶಬ್ದವೆಂಬ ವಾದ್ಯ ಧ್ವನಿಯು ಮೊಳಗುತ್ತಿರಲು, ನಿನ್ನ ರಕ್ತವೆಂಬ ಜೆಂಗಾವಿ ಪತ್ತಲವ ನ್ನುಟ್ಟುಕೊಂಡು, ನಿನ್ನ ಹೆಂಡಿರ ಅಶ್ರುಧಾರೆಯೆಂಬ ಜಲಧಾರೆಯೊಡನೆ ನಿನ್ನ ತೊಡೆಯಮೇಲೆ ಬಂದು ಕುಳ್ಳಿರುವಳು. ಇವಳ ಸಂಪರ್ಕದಿಂದ ನಿನಗೆ ಪುನರಾವೃತ್ತಿ ರಹಿತವಾದ ದೀರ್ಘನಿದ್ರೆಯೆಂಬ ಸೌಖ್ಯವುಂಟಾಗುವುದು. ಹೀಗೆ ಸ್ವತಂತ್ರಳಾದ ಕನ್ಯೆಯು ನಿನ್ನ ಮದುವೆಗೆ ಸಿದ್ಧಳಾಗಿರುವಾಗ ಪರವಧುವಾದ ನನ್ನನ್ನು ಕುರಿತು ವಿತರ್ಕ್ಕವೋಪ ಗೊಳ್ಳುವೆ? ಈ ಮರುಳುತನವನ್ನು ಬಿಟ್ಟು ಸ್ವಲ್ಪ ಸೈರಿಸಿಕೋ. ನಿಮ್ಮ ಅಕೃತ್ಯಗಳ ಫಲವು ಜಾಗ್ರತೆಯಲ್ಲಿಯೇ ಲಭಿಸುವುದು.

ಈಮಾತನ್ನು ಕೇಳಿ ದುರ್ಯೋಧನನ ಕ್ರೋಧವಿಮ್ಮಡಿಸಿತು. ಅವನು ತಮ್ಮನನ್ನು ನೋಡಿ, ''ದುಶ್ಶಾಸನಾ, ಇವಳು ಇನ್ನೂ ಮಹಾರಾಜನ ಹೆಂಡತಿಯೆಂಬ ಗರ್ವದಿಂದ ಜರೆಯುತ್ತಿರುವಳು. ದಾಸಿಯಾದ ಇವಳಿಗೆ ಈ ಪಟ್ಟೆವಸ್ತ್ರಗಳೇಕೆ? ಇದನ್ನುಕಿತ್ತು ಕೊಂಡು ವಿವಸ್ತ್ರಳನ್ನಾಗಿ ಮಾಡು, ಅಥವಾ ನಿನಗೆ ದಯೆಬಂದರೆ ಹರಕುಜಿಂದಿಯನ್ನು ಕೊಡು'' ಎಂದು ಗರ್ಜಿಸಿದನು. ಈ ಮಾತು ಮುಗಿಯುವಷ್ಟರಲ್ಲಿಯೇ ಆ ದುರುಳನು ದ್ರೌಪದಿಯ ಸೀರೆಯನ್ನು ಸುಲಿಯತೊಡಗಿದನು. ದ್ರೌಪದಿಯು ಮುಚ್ಚಿದ್ದ ಕಣ್ಣನ್ನು ಬಿಚ್ಚಲೇ ಇಲ್ಲ. ಶ್ರೀಕೃಷ್ಣಾನುಗ್ರಹವಿರುವಾಗ ಈ ದುರುಳರು ಏನುಮಾಡುವರೆಂದು ಧೈರ್ಯದಿಂದ ತುರುಬನ್ನೂ, ಸೀರೆಯನ್ನೂ ಹಿಡಿದಿದ್ದ ಎರಡು ಕೈಗಳನ್ನೂ ತೆಗೆದುಬಿಟ್ಟು ಜೋಡಿಸಿ ತನ್ನ ತಲೆಯಮೇಲೆ ಇಟ್ಟುಕೊಂಡು ಭಗವಂತನನ್ನು ಧ್ಯಾನಿಸುತ್ತಾ ನಿಶ್ಚಲೆಯಾಗಿ ನಿಂತಿದ್ದಳು. ದುರುಳನಾದ ದುಶ್ಶಾಸನನು ಸೀರೆ ಸೆಳೆದು ಹಾಕಿದನು. ಒಳಗೆ ಮತ್ತೊಂದು ಅದಕ್ಕಿಂತ ಶ್ರೇಷ್ಠವಾದ ಸೀರೆ ಪ್ರಕಾಶಿಸುತ್ತಿದೆ.

ಅದನ್ನೂ ಸುಲಿದು ಬಿಟ್ಟನು. ಇನ್ನೊಂದು, ಅದರ ಹಿಂದೆ ಮತ್ತೊಂದು, ಈ ರೀತಿಯಲ್ಲಿ ಎಷ್ಟೆಷ್ಟು ಸೀರೆಗಳನ್ನು ಸೆಳೆದುಹಾಕುತ್ತಾ ಬಂದರೂ ಆಸಾಧ್ವೀಮಣಿಯನ್ನು ವಿವಸ್ತ್ರಳನ್ನಾಗಿ ಮಾಡಲು ಆ ದುರುಳನಿಂದ ಸಾಧ್ಯವಾಗಲಿಲ್ಲ. ನಮ್ಮ ವಾಚಕರಿಗೆ ಆ ಸೀರೆಗಳ ಹೆಸರುಗಳಲ್ಲಿ ಕೆಲವನ್ನಾದರೂ ಪರಿಚಯಮಾಡಿಕೊಡುವೆವು.

೧. ಬಣ್ಣಗಳಲ್ಲಿ.—ಹಾಲಿನಬಣ್ಣದ್ದು, ಮಲ್ಲಿಗೆಯಬಣ್ಣದ್ದು, ಗುಲಾಬಿಯ ಬಣ್ಣದ್ದು, ದಾಳಿಂಬರೇ ಹೂವಿನ ಬಣ್ಣದ್ದು, ಮುತ್ತುಗದ ಹೂ ಬಣ್ಣದ್ದು. ಕನ್ನೆಯ್ದಿಲೆ. ಬಿಳಿನೆಯ್ದಿಲೆ, ಕೆಂದಾವರೆ, ಹೂಗಳ ಬಣ್ಣದ ಸೀರೆಗಳು, ಗರಿಕೆಹುಲ್ಲಿನ ಬಣ್ಣದ್ದು, ಸಿಂದೂರ ವರ್ಣದ್ದು, ಕುಸುಂಬಾ ಇತ್ಯಾದಿ ಬಣ್ಣದ ಸೀರೆಗಳು.

೨. ಜಾತಿಗಳಲ್ಲಿ.—ಚೌಕಳಿ, ಪೊಪ್ಪಳಿ, ಮುಂಗಿ, ಸಾಲಾರಿ, ಚಿನ್ನದ ಸರಪಳಿ, ಬಾಳೆಯ ಪಟ್ಟಿ, ಕಾಡಿಗೆಗಣ್ಣು, ಚಂದ್ರಕಾಳಿ, ಚಂದ್ರಗಾವಿ, ಸಾರಾವಳಿ, ರಾಗಾವಳಿ, ಗುಬ್ಬಿಯಕಣ್ಣು, ಪೈಟಣಿ, ಸಾಸುವೆಚುಕ್ಕೆ, ರೇಷಿಮೇಚುಕ್ಕೆ, ಹಾವುರಾಣಿಸೀರೆ, ನೀಲಿ, ಬುಗುಡಿ, ಜೋಡಿಬುಗುಡಿ ಮುಂತಾದುವು.

೩. ದೇಶಭೇದಗಳಲ್ಲಿ.—ಕೊರನಾಡು, ಕೊಲಂಬೊ, ಕಂಬಾಯತ, ಕಾಶಿ, ನಾರಾಯಣಪುರ, ತೆಲುಗು, ಕೊಂಕಣ, ಕಾಂಚಿ, ಮಧುರೆ, ಬಂಗಾಳ ಮುಂತಾದ ದೇಶಗಳ ಸೀರೆಗಳು.

೪. ಇತರಭೇದಗಳು.—ಹಂಸ, ನವಿಲು, ಪಾರಾವತ, ಗಿಳಿ ಮುಂತಾದ ಪಕ್ಷಿಗಳು ಚಿತ್ರಹೊಲಿದಿರುವ ಸೀರೆಗಳು. ಜಿಂಕೆ, ಸಿಂಹ, ಹುಲಿ, ಕುದುರೆ, ಮುಂತಾದ ಪ್ರಾಣಿಗಳ ಚಿತ್ರದಸೀರೆಗಳು, ಶಂಕರ, ಗಣೇಶ, ಕೃಷ್ಣ, ಸರಸ್ವತಿ. ಪಾರ್ವತಿ, ಲಕ್ಷ್ಮಿ, ಇಂದ್ರ, ಚಂದ್ರ ಮುಂತಾದ ದೇವತಾವಿಗ್ರಹಗಳನ್ನು ನೆಯ್ದಿರುವ ಸೀರೆಗಳು.

ಮಹಾವಿಷ್ಣುವಿನ ದಶಾವತಾರಗಳನ್ನೂ, ರಾಮಾಯಣಾದಿ ಕಥೆಯ ಭಾಗಗಳನ್ನೂ ಚಿತ್ರಿಸಿರುವ ಸೀರೆಗಳು. ಶ್ರೀಕೃಷ್ಣಲೀಲೆಗಳೆಂದರೆ ಕಾಳೀಯಮರ್ದನ, ಗೋವರ್ಧನೋದ್ಧರಣ, ವಿಶ್ವರೂಪದರ್ಶನ, ಉಲೂಖಲಬಂಧನ. ಮುಂತಾದುವುಗಳನ್ನು ನೇತ್ರಾನಂದಕರವಾಗಿ ಚಿತ್ರಿಸಿರುವ ಸೀರೆಗಳು.

ಈ ರೀತಿಯಲ್ಲಿ ಬಣ್ಣದಲ್ಲಿಯೂ ಚಿತ್ರದಲ್ಲಿಯೂ ನೆಯ್ಗೆಯಲ್ಲಿಯೂ ಬೆಲೆಯಲ್ಲಿಯೂ ಒಂದಕ್ಕಿಂತಬಂದು ಹೆಚ್ಚಿದ ಸೀರೆಗಳೇ ದ್ರೌಪದಿಯ ಮೈಮೇಲೆ ಕಾಣಿಸುತ್ತಿದ್ದುವು. ದಯಾಸಾಗರನಾದ ಪರಮಾತ್ಮನು ಅಮೌಲ್ಯವಾದ ಸೀರೆಗಳ ರಾಶಿಯನ್ನು ಪೆಟ್ಟಿಗೆಯಲ್ಲಿ ತುಂಬಿಕೊಂಡು ಬಂದು ತನ್ನ ತಂಗಿಗೆ ಕೊಡುತ್ತಿರುವನೋ ಎಂಬಂತೆ ಒಂದರಹಿಂದೆ ಒಂದು ಪಟ್ಟುಸೀರೆಯು ಬರುತ್ತಲಿತ್ತು. ಅದನ್ನು ನೋಡಿ ಸಭಿಕರೆಲ್ಲಾ ಆಶ್ಚರ್ಯರಸ ಮಗ್ನರಾದರು. ಅನಂತಹಸ್ತನಾದ ಪರಮಾತ್ಮನು ಅನುಗ್ರಹಿಸಿ ಅಕ್ಷಯವಸ್ತ್ರವನ್ನು ಕರುಣಿಸಿರುವಾಗ ಎರಡು ಕೈಗಳನ್ನುಮಾತ್ರವುಳ್ಳ ಆ ದುಶ್ಶಾಸನನು ಎಷ್ಟು ಸೀರೆಗಳನ್ನು ಸೆಳೆದು ಹಾಕಬಲ್ಲನು? ಅವನು ಬೇಸತ್ತು, ಕೈಸೋತು, ಶಕ್ತಿಗುಂದಿ, ಬೆರಗಾಗಿನಿಂತನು.

ಕಡೆಯಸಾರಿ ಕಾಣಿಸಿದ ಕೋಟಿಸೂರ್ಯಪ್ರಕಾಶಮಾನವಾದ ಪೀತಾಂಬರವು ಥಳಥಳನೆ ಹೊಳೆಯುತ್ತಾ ಸಭಿಕರ ಕಣ್ಣುಗಳು ಕೋರೈಸಿ ಹೋಗುವಂತೆ ಕಾಣಿಸಿತು. ಅದನ್ನು ನೋಡಿದಕೂಡಲೇ ಭೀಷ್ಮದ್ರೋಣಾದಿಗಳು 'ಓಹೋ! ಅಕಾಲದಲ್ಲಿ ಪ್ರಳಯವಾಗುವ ಸಂಭವವು ತೋರುತ್ತಿದೆ. ಪರಮಾತ್ಮನು ಈ ದುಷ್ಟರನ್ನು ನಿಗ್ರಹಿಸಲು ಸುದರ್ಶನ ಚಕ್ರವನ್ನೇ ಈ ಪೀತಾಂಬರ ರೂಪದಿಂದ ಪ್ರಯೋಗಿಸಿದನೋ ಏನೋ? ಇನ್ನೀ ದುರುಳನು ಉಳಿಯುವಹಾಗಿಲ್ಲ.'

ಎಂದುಕೊಂಡರು. ಆ ವಸ್ತ್ರಕಾಂತಿಯು ದುಶ್ಶಾಸನನ ಕಣ್ಣಿಗೆ ವಜ್ರಾಯುಧದಂತೆ ತಗಲಿ ಅವನ ಕಣ್ಣು ಮುಚ್ಚಿಹೋಯಿತು. ಕೈಕಾಲುಗಳು ಸೋತುಹೋಗಿ ಧೊಪ್ಪನೆ ನೆಲದಲ್ಲಿ ಬಿದ್ದುಬಿಟ್ಟನು. ಪತಿವ್ರತಾಶಿರೋಮಣಿಯಾದ ಆ ದ್ರೌಪದಿಯು ಕಣ್ಣುಮುಚ್ಚಿಕೊಂಡು ಕದಲದೆ ಪರಮಾತ್ಮನ ಧ್ಯಾನಮಾಡುತ್ತಾ ನಿಶ್ಚಿಂತಳಾಗಿ ಮೌನದಿಂದ ನಿಂತಿದ್ದಳು.

ಸಭಿಕರೆಲ್ಲರೂ ಇದನ್ನುಕಂಡು 'ಆಹಾ! ಇದೇನು! ಇಂದ್ರಜಾಲವೋ, ಮಾಯೆಯೋ, ಭಗವಂತನ ಲೀಲೆಯೋ, ಈ ಸಾಧ್ವಿಯ ಪಾತಿವ್ರತ್ಯಮಹಿಮೆಯೋ? ಒಂದೂ ತಿಳಿಯದಲ್ಲ? ಏಕವಸ್ತ್ರಧರಳಾಗಿ ಸಭೆಗೆ ಬಂದ ಈ ದ್ರೌಪದಿಯಮೈಮೇಲೆ ಅಸಂಖ್ಯಾತಗಳಾದ ಈ ಸೀರೆಗಳೆಲ್ಲಾ ಹೇಗೆ ಬಂದುವು?'' ಎಂದು ಆಶ್ಚರ್ಯದಿಂದ ನೋಡುತ್ತಿದ್ದರು. ಭೀಷ್ಮಾದಿ ಭಕ್ತಾಗ್ರಣಿಗಳು 'ಆಹಾ! ಅಚಿಂತ್ಯಮಹಿಮನಾದ ಭಗವಂತನ ಅನುಗ್ರಹವನ್ನು ಬಲ್ಲವರಿಲ್ಲ. ಈಕೆಯ ಸೌಭಾಗ್ಯವೆಂಬ ನದಿಯು ಅಕ್ಷಯಪ್ರವಾಹದಿಂದ ಹರಿಯುವಂತೆ ಮಾಡಿ, ದುಷ್ಟರಗರ್ವಕ್ಕೆ ಪ್ರತಿಕ್ರಿಯೆಮಾಡಿದನಲ್ಲಾ! ಆ ಸ್ವಾಮಿಯನ್ನು ನಂಬಿದವರು ಎಂದಿಗೂ ಕೆಡರು. ಈ ದ್ರೌಪದಿಯೇ ಧನ್ಯಳು' ಎಂದು ಹೊಗಳುತ್ತಿದ್ದರು.



## ಹನ್ನೊಂದನೆಯ ಸಂಧಿ.

ಸೂ|| ಭೀಮಾದಿಗಳು ಕೌರವರ ಚೇಷ್ಟೆಗಳಿಗೆ ಕೋಪಗೊಂಡು, ಅವರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದರು. ಧೃತರಾಷ್ಟ್ರನು ದ್ರೌಪದಿಗೆ ವರಗಳನ್ನು ಕೊಟ್ಟು ಪಾಂಡವರನ್ನು ಸಂತಯಿಸಿ ಕಳುಹಿದನು.

ಶ್ರೀಕೃಷ್ಣನ ಅನುಗ್ರಹದಿಂದ ದ್ರೌಪದಿಯು ಉಟ್ಟಿದ್ದ ಸೀರೆಯು ಅಕ್ಷಯವಾಗುತ್ತಾ ಬಂದಿತು. ಅದನ್ನು ನೋಡಿ ಸಭೆಯಲ್ಲಿದ್ದವರೆಲ್ಲರೂ ಅತ್ಯಾಶ್ಚರ್ಯಗೊಂಡು ಆಕೆಯ ಪಾತಿವ್ರತ್ಯಮಹಿಮೆಯನ್ನು ಕೊಂಡಾಡುತ್ತಲೂ, ದುರಾತ್ಮರಾದ ದುಶ್ಶಾಸನಾದಿಗಳನ್ನು ಬೈಯುತ್ತಲೂ ಇದ್ದರು. ಆ ನೀಚ ದುಶ್ಶಾಸನನು ದ್ರೌಪದಿಯ ಸೀರೆಗಳನ್ನು ಸೆಳೆದು ಸೆಳೆದು ಕೈಸೋತು ಬಹಳ ಬಳಲಿದನು. ಅವನ ಮೈಯೆಲ್ಲವೂ ಬೆವತಿತು. ಶಕ್ತಿಕುಂದಿ ಅವನು ನೆಲದಲ್ಲಿ ಬಿದ್ದು ಬಿಟ್ಟನು. "ದೈವಕೃತಿಗೂ ಮಾನುಷಕೃತಿಗೂ ಎಷ್ಟರ ವ್ಯತ್ಯಾಸವಿದೆ? ನೋಡಿರಿ. ಚತುರನಾದ ನೆಯ್ಗೆಯವನು ನಾಲ್ಕಾರು ದಿನಗಳು ನೆಯ್ದರೂ ಒಂದು ಉತ್ತಮವಾದ ಸೀರೆಯನ್ನು ನೇಯಲಾರನು. ಒಂದೆರಡು ಗಳಿಗೆಯಲ್ಲಿ—ಹತ್ತೆಂಟು ನೂರು ಸೀರೆಗಳು—ಕೈಯಿಂದ ನೆಯ್ದುವಲ್ಲ—ಒಂದು ಬಣ್ಣದ್ದಲ್ಲ—ಒಂದು ಸೀರೆಯಂತೆ ಮತ್ತೊಂದಿಲ್ಲ—ಚಿತ್ರವಿಚಿತ್ರವಾಗಿವೆ—ಇಂದ್ರಜಾಲದಂತೆ ವಸ್ತ್ರಮಾಲೆಗಳು ಒಂದರಹಿಂದೆ ಒಂದು ಬರುತ್ತಾ ಇದ್ದರೆ ಕಂಡು ಆಶ್ಚರ್ಯಪಡದವರು ಯಾರು? ಅಘಟನಘಟನಾ ಸಾಮರ್ಥ್ಯವುಳ್ಳ ಪರಮೇಶ್ವರನ ಸೃಷ್ಟಿವೈಚಿತ್ರ್ಯವನ್ನು ಬಲ್ಲವರೇ ಇಲ್ಲ." ಹೀಗೆ ಜನರು ಆಡಿಕೊಳ್ಳುತ್ತಿದ್ದರು.

ಭೀಷ್ಮದ್ರೋಣಾದಿಗಳಿಗೆ ಆಶ್ಚರ್ಯಾಧಿಕ್ಯದಿಂದ ಪ್ರತಿ ನಿಮಿಷದಲ್ಲಿಯೂ ದುಃಖದ ಮುಖದಲ್ಲಿ ಸಂತೋಷವೂ, ವ್ಯಸನಾಶ್ರುಗಳಲ್ಲಿ ಆನಂದಬಾಷ್ಪವೂ, ಸ್ವೇದದಲ್ಲಿ ರೋಮಾಂಚನವೂ ಉಂಟಾಗುತ್ತಿದ್ದವು. ಆವೇಳೆಯಲ್ಲಿ ಭಾಗವತಶ್ರೇಷ್ಠನಾದ ವಿದುರನು ಕುರುಪತಿಯನ್ನು ನೋಡಿ ಇಂತೆಂದನು.

ವಿದುರ.—ಎಲೈ ರಾಜನೇ, ನೋಡುತ್ತಿದ್ದೀಯಾ ? ನನ್ನ ಮಾತು ನಿದರ್ಶನಕ್ಕೆ ಬಂತೆ ? ದೈವಬಲದಮುಂದೆ ಯಾರ ಕೃತ್ರಿಮವೂ ನಡೆಯದೆಂಬುದನ್ನು ಈಗಲಾದರೂ ತಿಳಿದುಕೊಂಡೆಯಾ ? ನೀನು ಕಪಟದ್ಯೂತದಿಂದ ಪಾಂಡವರ ಆಸ್ತಿಯನ್ನೆಲ್ಲಾ ಸುಲಿದುಕೊಂಡರೂ ಮನಸ್ಸಿಗೆ ತೃಪ್ತಿಯಿಲ್ಲದೆ ಇಂತಹ ಅನುಚಿತ ವ್ಯಾಪಾರವನ್ನು ಮಾಡಿಸತೊಡಗಿದೆ. ಪತಿವ್ರತೆಯಾದ ಈ ದ್ರೌಪದಿಯು ನಿರಪರಾಧಿನಿ, ಭಗವದ್ಭಕ್ತೆ, ಈಕೆಯು ಪರಮಾತ್ಮನನ್ನು ಭಕ್ತಿಯಿಂದ ಧ್ಯಾನಿಸಿದಕೂಡಲೇ ಆ ಸ್ವಾಮಿಯ ಅನುಗ್ರಹ ವುಂಟಾಯಿತು. ಈಕೆಯ ವಸ್ತ್ರವು ಅಕ್ಷಯವಾಗಿ, ತುಂಬಿದ ಸಭೆಯಲ್ಲಿ ಮಾನಸಂರಕ್ಷಣೆಯಾಯಿತು. ನಿನ್ನನೆತ್ತಿಯಮೇಲೆ ದೊಡ್ಡ ಅಪಕೀರ್ತಿಯು ಹೊತ್ತಿತು. ಇನ್ನಾದರೂ ಈ ಕುಟಿಲ ವ್ಯಾಪಾರವನ್ನು ಬಿಡು. ಈ ಸಾಧ್ವಿಯ ಗೊಡವೆಗೆ ಹೋಗಬೇಡ. ಗಂಡಸಾದ ನೀನು ಶೂರರಾದ ಪಾಂಡವರ ವಿಷಯದಲ್ಲಿ ಹೇಗೆ ಮಾತನಾಡಿದರೂ ಸಲ್ಲುವುದು. ಅಬಲೆಯರನ್ನು ನೋಯಿಸುವುದು ಮಾತ್ರ ಧರ್ಮವಲ್ಲ.

ದುರ್ಯೋ.—ವಿದುರನೇ, ಏಕೆ ಇಂತಹ ಮಾತನಾಡುವೆ ? ನೀನು ಯಾವಾಗಲೂ ಪಾಂಡವರ ಪಕ್ಷಪಾತಿಯಾಗಿ ನಮ್ಮನ್ನು ನಿಂದಿಸುತ್ತಲೇ ಇರುವೆ. ಆಗಲಿ, ದೈವವು ಇವಳಿಗೆ ಸೀರೆಗಳನ್ನು ಕೊಡಬಲ್ಲದೇ ಹೊರತು ಇವಳನ್ನು ನಮ್ಮಕೈಯಿಂದ ಬಿಡಿಸ

ಬಲ್ಲುದೆ? ಈ ತೊತ್ತಿಗೆ ನಾನೇ ದೇವರು. ಇವಳಮಾತಿಗೆ ನೀನು ಬರಬೇಡ. ನಡೆ. (ಕಳಿಂಗನನ್ನು ನೋಡಿ)

ಎಲೈ ಮಿತ್ರಸೇ, ಈ ವಿದುರನಿಗೆ ನ್ಯಾಯವೇ ತಿಳಿಯದು. ಇಂತವನ ಮಾತುಗಳು ನಮಗೆ ಮಾನ್ಯವಲ್ಲ. ಈ ತೊತ್ತು ನಮ್ಮ ದಾಸಿಯರ ಗುಂಪಿನಲ್ಲಿ ಸೇರಿ ಕೆಲಸಮಾಡಿಕೊಂಡಿರಲಿ. ಇವಳನ್ನು ಅಂತಃಪುರಕ್ಕೆ ಕಳುಹಿಬಿಡು. ಮಾಯಕಾತಿಯಾದ ಇವಳು ಯಾವು ರೂದೋ ಒಂದು ಕಣ್ಣುಕಟ್ಟು ವಿದ್ಯೆಯಿಂದ ಸೀರೆಗಳನ್ನು ನಿರ್ಮಿಸಿ ಕೊಂಡು, ತನ್ನ ಮಾನವನ್ನು ಈವೇಳೆ ರಕ್ಷಿಸಿಕೊಂಡಳು. ಹೇಗಾದ ಆಗಲಿ, ನಮಗೆ ಇದರಿಂದ ಏನೂ ನಷ್ಟವಾಗಲಿಲ್ಲ. ಕೋಟ್ಯಂತರ ವರಹಾ ಬೆಲೆಬಾಳುವ ಅಮೂಲ್ಯ ವಸ್ತ್ರಗಳು ಸಿಕ್ಕಿದುವು. ಈ ದುಕೂ ಲಗಳನ್ನೆಲ್ಲಾ ಕಟ್ಟಿಸಿ ನಮ್ಮ ಭಂಡಾರಕ್ಕೆ ಕಳುಹು. ಇವಳಲ್ಲಿ ಮಾತ್ರ ನಾನು ಸ್ವಲ್ಪವೂ ದಯೆ ತೋರಿಸತಕ್ಕವನಲ್ಲ. ಸ್ವಯಂವರ ಕಾಲ ದಲ್ಲಿ ನಮ್ಮೆಲ್ಲರ ಮಾನವನ್ನೂ ಸೆಳೆದವಳು ಇವಳೇ ಅಲ್ಲವೆ? ರಾಜ ಸಭೆಯಲ್ಲಿ ಅಜ್ಞಾನವಶದಿಂದ ನಾನು ಎಡವಿಬಿದ್ದಾಗ ಎಲ್ಲರೂ ಹಾ ಸ್ಯಮಾಡುತ್ತಿದ್ದರು. ಈ ತೊತ್ತು ಆಗಲೂ ನಕ್ಕಳಲ್ಲವೆ? ನಮ್ಮ ಸು ದೈವದಿಂದ ಇವಳು ನಮ್ಮ ದಾಸಿಯಾಗಿ ಸಿಕ್ಕಿದಳು. ಇವಳು ತೊತ್ತಿರ ಹಿಂಡಿನಲ್ಲಿದ್ದು ತನಗೆ ಬೇಕಾದವನೊಂದಿಗೆ ಕೂಡಿ ಬಾಳಲಿ. ಕಳು ಹಿಸಿಬಿಡು,

ದುಸ್ಸಹವಾದ ಈ ಮಾತು ಕಿವಿಗೆ ಬಿದ್ದ ಕೂಡಲೇ ಧ್ಯಾನಪರ ವಶಳಾಗಿದ್ದ ಆ ದ್ರೌಪದಿಯು ಕಣ್ದೆರೆದು ನೋಡಿದಳು. ಆಕೆಯ ಕಟಾಕ್ಷವೀಕ್ಷಣವು ಬಿದ್ದ ಕೂಡಲೇ ಪರ್ವತಾಕಾರವಾಗಿ ರಾಶಿ ಬಿದ್ದಿದ್ದ ಸೀರೆಗಳೆಲ್ಲವೂ ಸುಟ್ಟುಬೂದಿಯಾಗಿ ಹೋದುವು. ಇದನ್ನು ನೋಡಿ ಸಭೆಯವರು ಅತ್ಯಾಶ್ಚರ್ಯಗೊಂಡು ಅಧರ್ಮದಿಂದ ದ್ರವ್ಯ

ಸಂಪಾದನೆ ಮಾಡುವವರ ಬಾಳೆಲ್ಲವೂ ಹೀಗೆಯೇ ಆಗುವುದೆಂದು ಮಾತನಾಡಿಕೊಳ್ಳುತ್ತಿದ್ದರು.

ಬಳಿಕ ದ್ರೌಪದಿಯು ಭೀಷ್ಮನನ್ನು ನೋಡಿ 'ಆರ್ಯನೇ, ಕಪಟಿಯಾದ ಈ ಕುರುಪತಿಗೆ ನಾನು ಮಾರುತ್ತರ ಕೊಡಲಾರೆನು? ಧರ್ಮಜ್ಞನಾದ ನೀನು ನೀತಿಯನ್ನು ತಿಳಿದು ಹೇಳು. ಧರ್ಮಮಾರ್ಗದಿಂದ ನಾನು ಈತನ ಸ್ವತ್ತಾಗಿರುವೆನೆ? ಅರಸನಾದ ಯುಧಿಷ್ಠಿರನು ಜೂಜಿನಲ್ಲಿ ತಾನೇ ಮೊದಲು ಸೋತು ಬಳಿಕ ನನ್ನನ್ನು ಒಡ್ಡಿದುದರಿಂದ ನಾನು ಇವನಿಗೆ ಹೇಗೆ ದಾಸಿಯಾಗುವೆನು? ಎಂದು ಕೇಳಿಕೊಳ್ಳುತ್ತಿದ್ದರೂ ನನ್ನ ಮೊರೆಯನ್ನು ವಿಚಾರಿಸುವವರಿಲ್ಲವೆ?' ಎಂದಳು.

ಆಗ ದುರ್ಯೋಧನನು ದ್ರೌಪದಿಯನ್ನು ನೋಡಿ 'ಛೀತೊತ್ತೆ! ಯುಧಿಷ್ಠಿರನು ನಿನ್ನನ್ನು ಒಡ್ಡಿದ್ದು ನೀತಿಯಲ್ಲವೆಂದು ಬಾಯಿಬಡಿಯುತ್ತೀಯಾ? ನೀನೇನು ದೇವಗುರುವಾದ ಬೃಹಸ್ಪತಿಯೆ? ನಿನ್ನ ಗಂಡನು ಸತ್ಯಸಂಧನೆಂದು ಎಲ್ಲರೂ ಹೇಳುತ್ತಿರುವರಲ್ಲಾ? ಅವನೇ ಧರ್ಮಾಧರ್ಮಗಳನ್ನು ತಿಳಿದು ಹೇಳಲಿ?' ಎಂದನು.

ಆಗ ಕರ್ಣನು ದುರ್ಯೋಧನನನ್ನು ನೋಡಿ 'ಮಹಾರಾಜನೇ! ಇವಳೊಡನೆ ಹೆಚ್ಚು ಮಾತುಗಳೇಕೆ? ತನ್ನ ಗಂಡಂದಿರೆಲ್ಲಾ ನಮ್ಮ ದಾಸರಾದಮೇಲೆ ಅವರ ಸ್ವತ್ತಾದ ಇವಳು ನಮ್ಮ ಧನವಾಗಲಿಲ್ಲವೆ? ಈ ಬಾಯಿಬಡಿಕತನವನ್ನು ಯಾರಲ್ಲಿ ಹೇಳಬೇಕು? ಇವಳನ್ನು ತೊತ್ತುಗಳ ಗುಂಪಿನಲ್ಲಿ ಸೇರಿಸಿ ಇವಳ ಸ್ವಾತಂತ್ರ್ಯವನ್ನು ತಪ್ಪಿಸಬೇಡ. ದಯಮಾಡಿ ನಿನ್ನ ಭೋಗಿನಿಯರಲ್ಲಿ ಸೇರಿಸಿಕೊಂಡು, ಇವಳ ಇಷ್ಟವನ್ನು ನೆರವೇರಿಸು' ಎಂದು ಹೇಳಿ ದ್ರೌಪದಿಯ ಕಡೆಗೆ ತಿರುಗಿ ಎಲೌ ಪಾಂಚಾಲೀ, ನೀನು ನಮ್ಮ ಕುರುರಾಜನನ್ನು

ಭಜಿಸಿಕೊಂಡು ಸುಖವಾಗಿರು. ನಿನ್ನವರನ್ನು ಮರೆತುಬಿಡು. ಕಾಲಕ್ಕೆ ತಕ್ಕಂತೆ ನೀನು ಸುಖವಾಗಿ ಬದುಕುವ ದಾರಿಯನ್ನು ನೋಡಿಕೊಳ್ಳುವುದು ಲೇಸು.'' ಎಂದನು.

ಈ ಮಾತನ್ನು ಕೇಳಿ ದ್ರೌಪದಿಯು ತನ್ನ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, 'ಎಲಾ ಸೂತಪುತ್ರನೇ, ಶೂರನಾದ ಭೀಮಸೇನನು ಈ ಕುರುಪತಿಯನ್ನು ರಣರಂಗದಲ್ಲಿ ಮಡುಹಿ, ಇವನ ಹೊಸ ರಕ್ತದಿಂದ ಭೂಮಿಯನ್ನು ನೆನೆಯಿಸಿ ತೃಪ್ತಿಪಡಿಸಿದಮೇಲೆ ನಾನು ಸಂತೋಷಪಡುವೆನು. ಹೆಚ್ಚು ಮಾತನಾಡಬೇಡ.' ಎಂದು ಗದರಿಸಿದಳು. ಆಗ ದುರ್ಯೋಧನನು 'ಎಲೈ ಕರ್ಣನೇ, ಈ ಮಾಯಾವಿನಿಯಾದ ಹೆಂಗುಸನ್ನೇಕೆ ಕೆಣಕಿದೆ? ಯುದ್ಧದಲ್ಲಿ ನನ್ನನ್ನು ಈ ಬಡ ಭೀಮನು ಕೊಲ್ಲುವನಂತೆ! ತುಚ್ಛನಾದ ಇವನು ನನಗೆ ಸಾಟಿಯೆ? ಎಂದು ತಾನು ಉಟ್ಟಿದ್ದ ವಸ್ತ್ರದ ಸೆರಗನ್ನು ನೂಕಿ ತನ್ನ ತೊಡೆಯನ್ನು ತೋರಿಸಿದನು.

ಇದನ್ನು ನೋಡಿ ಭೀಮಸೇನನು ರೋಷದಿಂದ ಕಿಡಿಕಿಡಿಯಾಗಿ ಅಲ್ಲಿ ಇಟ್ಟಿದ್ದ ದೊಡ್ಡ ಪರಿಘವನ್ನು ನೋಡಿ, ಅದರಿಂದ ದುರ್ಯೋಧನನ ತಲೆಯನ್ನು ಒಡೆದು ಬಿಡಬೇಕೆಂದು ಎದ್ದನು. ಆಗ ಯುಧಿಷ್ಠಿರನು ಬೆರಳು ಸನ್ನೆಯಿಂದ ಈ ಕೆಲಸವನ್ನು ಮಾಡಬೇಡವೆಂದು ತಡೆದನು. ಅರ್ಜುನನು ಆತನನ್ನು ನೋಡಿ 'ಭೀಮಣ್ಣಾ! ರೋಷಕ್ಕೆ ಇದು ವೇಳೆಯಲ್ಲ. ಕೌರವರಿಗೆ ಈಗ ಜಯಕಾಲವಾಗಿದೆ ಅವರು ಮನಸ್ಸು ಬಂದಂತೆ ಬೆರೆಯಲಿ. ಮಹಾರಾಜನ ಸತ್ಯಧರ್ಮಗಳು ಉಳಿದರೆಸಾಕು. ಮಿಕ್ಕ ಹೆಂಗಸರು ಧನಧಾನ್ಯ ಮುಂತಾದ ಆಸ್ತಿಗಳು, ಅಭಿಮಾನ ಇವೆಲ್ಲಾ ಹೋದರೂ ಚಿಂತೆಯಿಲ್ಲ. ಕ್ಷಮೆಯೇ ಧನವೆಂದು ನಾವು ಸ್ಮರಿಸಿಕೊಂಡಿರುವೆವೇ ಹೊರತು ಇವನ

ರಾಜತ್ವಕ್ಕೆ ಹೆದರಿಕೊಂಡಿಲ್ಲ. ಇಂದ್ರಾದಿಗಳನ್ನು ಕೂಡ ಲಕ್ಷ್ಯ ಮಾಡದ ನಮಗೆ ಇವನನ್ನು ಕೊಲ್ಲುವುದು ಎಷ್ಟುಮಾತ್ರ? ಈ ಪಾಂಚಾಲಿಯು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡಲು ಸಭಿಕರು ಯೋಚಿಸುತ್ತಿರುವಾಗ ಇವಳು ದಾಸಿಯೆಂದು ಮನಸ್ಸು ಬಂದಂತೆ ಈ ನೀಚರು ಅಂದುಕೊಂಡರೆ ನಷ್ಟವೇನು? ಸೈರಿಸಿಕೋ' ಎಂದನು.

ಆಗ ದುರ್ಯೋಧನನು ಕರ್ಣನನ್ನು ನೋಡಿ.—'ಮಿತ್ರಸೇಪಣದಿಂದ ನಮ್ಮ ಸೊತ್ತಾದ ಈ ತೊತ್ತನ್ನು ಬಿಡಿಸಬಲ್ಲವನು ಯಾವನು? ಅವನ ಬಲವೆಷ್ಟಿದೆಯೋ ನೋಡೋಣ, ಎನ್ನಲು ಅವನು 'ಎಲೈರಾಜನೇ, ನೀನೇಕೆ ಚಿಂತಿಸುತ್ತೀಯೆ? ಈ ಅರ್ಜುನನು ಮಹಾಶೂರನೆಂದು ಹೆದರಬೇಕೆ? ತಾನು ಇಂದ್ರನ ಮಗನೆಂಬ ಗರ್ವದಿಂದ ಇವನು ಒದರುತ್ತಿರುವನು. ದಾಸರಾಗಿರುವ ಈ ಭೀಮಾರ್ಜುನರಿಗೆ ಎಷ್ಟುದೊಡ್ಡ ಮಾತುಗಳು? ಇವರ ಸೊಕ್ಕಿನ ನುಡಿಗಳು ಹಾಗಿರಲಿ, ಮೊದಲು ಈ ಹೆಂಗಸನ್ನು ತೊತ್ತಿರ ಲಾಯಕ್ಕೆನೂಕಿಸು. ದಾಸರಾದ ಇವರನ್ನೂ ತಳ್ಳಿಸಿಬಿಡು. ಇವರಿಗೆ ಈ ಮಹಾ ಸಭೆಯಲ್ಲಿ ಉಚ್ಛ್ವಾಸನಗಳೇತಕ್ಕೆ?' ಎಂದನು. ದುರ್ಯೋಧನನು ಕರ್ಣನ ಮಾತಿಗೆ ಮೆಚ್ಚಿ, ತಲೆದೂಗುತ್ತಾ, ಈ ಗಯ್ಯಾಳಿಯನ್ನು ತೊತ್ತಿರಮನೆಗೆ ನೂಕಿಬಿಡೆಂದು ತನ್ನ ತಮ್ಮನಾದ ದುಶ್ಶಾಸನನಿಗೆ ಅಪ್ಪಣೆಕೊಟ್ಟನು. ಆ ದುರುಳನಾದ ದುಶ್ಶಾಸನನು ಹುಲ್ಲೆಯ ಬೇಟೆಯಲ್ಲಿ ಬಗುಳಿಕೊಂಡು ಬರುವ ನಾಯಂತೆ ಆ ಸಾಧ್ವಿಯನ್ನು ಹಿಡಿದೆಳೆಯುತ್ತಿದ್ದನು. ಆಕೆಯು ತನ್ನ ಮನಸ್ಸಿನಲ್ಲಿ ಬಹಳವಾಗಿನೊಂದು ದುಃಖಿಸುತ್ತಾ ಹೀಗೆ ಪ್ರಲಾಪಿಸಿದಳು.

ಎಲೈಗಾಂಗೇಯನೇ, ಅಬಲೆಯಾದ ನನ್ನನ್ನು ಈ ದುರುಳನು ಎಳೆದೊಯ್ಯುತ್ತಿರುವನಲ್ಲ! ಇವನಿಗೆ ಬುದ್ಧಿಹೇಳಿ ನನ್ನನ್ನು

ಬಿಡಿಸಿರಿ. ಗುರುಗಳೇ, ನೀವಾದರೂ ಈ ನೀಚನಿಗೆ ಬುದ್ಧಿಹೇಳಿ ನನ್ನನ್ನು ರಕ್ಷಿಸಬಾರದೆ? ಎಲೈ ಧರ್ಮಜ್ಞನಾದ ವಿದುರನೇ, ನೀನು ನನ್ನ ಈಅವಸ್ಥೆಯನ್ನು ನೋಡಿಕೊಂಡೂ ಸುಮ್ಮನಿರುವೆಯಾ? ಅತ್ತೆಯಾದ ಗಾಂಧಾರಿ ದೇವಿಯರೇ, ನಾನು ನಿಮ್ಮ ಸೊಸೆಗಳಲ್ಲಿ ಒಬ್ಬಳೆಂದು ತಿಳಿಯಬಾರದೇ! ನಿಮ್ಮ ದುಶ್ಯಳೆಯನ್ನು ಹೀಗೆ ಪರರು ಸೆಳೆಯುತ್ತಿದ್ದರೆ ನೀವು ಸೈರಿಸುವಿರಾ? ಅಕ್ಕಾ ಭಾನುಮತಿ! ನಿಮ್ಮಂತೆಯೇ ನಾನೂ ಮಹಾರಾಜರ ಪತ್ನಿಯಲ್ಲವೆ? ನೀನಾದರೂ ಹೆಂಗಸಿನ ಮೇಲೆ ಕೈ ಮಾಡಬೇಡವೆಂದು ಇವನನ್ನು ತಡೆಯಿರಮ್ಮಾ, ಮಾವೈಯ್ಯಾ! ನಿಮ್ಮ ಕಣ್ಣುಗಳು ಹೊರಗೆ ಕಾಣಿಸದೆ ಇದ್ದರೂ ನಿಮ್ಮ ಜ್ಞಾನಚಕ್ಷುಸ್ಸೂ ಕಾಣಿಸುವುದಿಲ್ಲವೆ? ನಿಮ್ಮ ಆಜ್ಞೆಯನ್ನು ನಿಮ್ಮ ಮಕ್ಕಳು ಕೇಳಲಾರರೇ! ನನ್ನ ಅವಮಾನವನ್ನು ನೋಡಿ, ಇನ್ನೂ ಸೈರಿಸಿಕೊಂಡಿರುವಿರಲ್ಲಾ! ಅಯ್ಯೋ! ನಾನು ಯಾರಿಗೆ ಹೇಳಿಕೊಳ್ಳಲಿ? ಒಬ್ಬರೂ ನನ್ನನ್ನು ಬಿಡಿಸಬಲ್ಲವರಿಲ್ಲವಲ್ಲಾ! ಛೀ ಛೀ! ಈ ಸ್ತ್ರೀಜನ್ಮಕ್ಕೆ ಧಿಕ್ಕಾರವಿರಲಿ.

ಎಲೌ ಭೂದೇವಿಯೇ, ನನ್ನ ಸೆರಗನ್ನು ಬಿಡಿಸಮ್ಮಾ, ತಾಯೇ! ಪಾರ್ವತೀ, ನನ್ನಲ್ಲಿ ಧರ್ಮವಿದ್ದರೆ ಈ ವೇಳೆಯಲ್ಲಿ ಅನುಗ್ರಹಿಸಿ ನನ್ನನ್ನು ಕಾಪಾಡು. ಎಲೌ ಲಕ್ಷ್ಮೀದೇವೀ, ಜಗನ್ಮಾತೆಯಾದ ನಿನಗೂ ಈದೀನಳಮೇಲೆ ಕರುಣೆ ಹುಟ್ಟದೆ ಹೋಯಿತೆ! ತಾಯಿ! ಬ್ರಹ್ಮನ ರಾಣಿಯಾದ ಸರಸ್ವತಿಯೇ, ನನ್ನನ್ನು ಬಿಟ್ಟುಬಿಡುವಂತೆ ಇವನಿಗೆ ಸದ್ಬುದ್ಧಿಯನ್ನು ಕೊಡಮ್ಮಾ. ಅರುಂಧತಿ, ಅನಸೂಯೆ, ಶಚಿ ಮೊದಲಾದ ಪತಿವ್ರತಾಮಣಿಗಳಿರಾ! ಇಂತಹ ಅಪಾಯದ ವೇಳೆಯಲ್ಲಿ ನೀವು ನೋಡಿಕೊಂಡು ಸುಮ್ಮನೆ ಇದ್ದರೆ ಈ ಭೂಮಿಯಲ್ಲಿ ಇನ್ನು ಪಾತಿವ್ರತ್ಯಧರ್ಮವು ಉಳಿಯುವುದು ಹೇಗೆ? ನೀವಾದರೂ ಬೇಗಬಂದು ನನ್ನನ್ನು ಬಿಡಿಸಿರಮ್ಮಾ.

ಎಲೈ ಪರಮೇಶ್ವರನೇ, ನನಗೆ ಈ ಪಾಂಡವರಸಂಬಂಧವನ್ನು ಕಲ್ಪಿಸಿದವನು ನೀನೇ ಅಲ್ಲವೇ? ನಿನ್ನ ಭಕ್ತಳಾದ ನನ್ನನ್ನು ಇಂತಹ ಕಷ್ಟಕಾಲದಲ್ಲಿ ರಕ್ಷಿಸದೆ ಕೈಬಿಡುವೆಯಾ? ಎಲೈ ಸುರಪತಿಯೇ! ನಾನು ನಿನ್ನ ಸೊಸೆಯಲ್ಲವೇ? ನನ್ನನ್ನು ಕಾಪಾಡು. ಎಲೈ ಯಮಧರ್ಮರಾಯನೇ, ಪ್ರಾಣಿಗಳ ಪಾಪಪುಣ್ಯಗಳನ್ನು ವಿಚಾರಿಸುವ ನೀನೂಕೂಡ ಇಂತಹ ವಿಪತ್ತನ್ನು ನೋಡಿಕೊಂಡು ಸುಮ್ಮನಿರುವೆಯಾ? ಎಲೈ ವಾಯುದೇವನೇ, ಸಮಸ್ತ ಪ್ರಾಣಿಗಳ ಉಸಿರೂ ನಿನ್ನದೇ ಆಗಿದೆ. ನಾನು ನಿನ್ನ ಸೊಸೆಯಲ್ಲವೆ? ನನ್ನನ್ನು ಕೈ ಬಿಡುವೆಯಾ? ಅಶ್ವಿನೀದೇವತೆಗಳಿರಾ, ನೀವಾದರೂ ಬಂದು ಈ ದುಷ್ಟನನ್ನು ತಡೆದು ನಿಲ್ಲಿಸಿರಿ. ಲೋಕಸಾಕ್ಷಿಯಾದ ಸೂರ್ಯನೇ, ನಿನಗೆ ನಮಸ್ಕರಿಸುವೆನು. ನನ್ನ ಕಷ್ಟವನ್ನು ಪರಿಹರಿಸು. ಎಲೈ ಹಿಮಾಂಶುವಾದ ಚಂದ್ರನೇ, ಲೋಕಕ್ಕೆಲ್ಲಾ ಶೈತ್ಯವನ್ನು ಕೊಡುವ ನೀನು ನನ್ನಲ್ಲಿಮಾತ್ರ ಏತಕ್ಕೆ ಕರುಣಿಸದೆ ಹೋದೆ? "ಹತ್ತುಮಂದಿಯ ನಡುವೆ ಬಿದ್ದ ಹಾವು ಸಾಯದು" ಎಂಬ ಗಾಧೆಯುಂಟು. ಇಂತಹ ಸಭೆಯಲ್ಲಿ ನೆರೆದಿರುವ ಮಹಾಜನರೆಲ್ಲಾ ನನ್ನ ವಿಪತ್ತನ್ನು ನೋಡಿಕೊಂಡು ಸುಮ್ಮನೆ ಕುಳಿತಿರುವರಲ್ಲಾ! ಹಾ!ಹಾ! ನಾನು ಎಂತಹ ದುರ್ದೈವಿ!! ನನ್ನನ್ನು ರಕ್ಷಿಸತಕ್ಕವರು ಒಬ್ಬರಾದರೂ ಇಲ್ಲದೆ ಹೋದರಲ್ಲಾ? ಏನುಮಾಡಲಿ?

ಈಪ್ರಕಾರ ಆರ್ತಧ್ವನಿಯಿಂದ ಪ್ರಲಾಪಿಸುತ್ತಿರುವ ಪಾಂಚಾಲಿಯನ್ನು ನೋಡಿ ಸಭೆಯಲ್ಲಿದ್ದ ವಿದುರನು ಇಂತೆಂದನು,

ವಿದು.—ತಾಯೀ, ದ್ರೌಪದೀ, ಏತಕ್ಕೆ ಸುಮ್ಮನೆ ಹಲುಬುತ್ತಿರುವೆ? ನಿನ್ನ ಗಂಡಂದಿರೇ ಸುಮ್ಮನೆ ಕುಳಿತಿರುವಾಗ ಉಳಿದವರು ಏನುಮಾಡಬಲ್ಲರು? ನ್ಯಾಯವೇನೋ ನಿನ್ನ ಪಕ್ಷವಾಗಿಯೇ ಇದೆ.

ದೈವಕೃಪೆಯು ಧರ್ಮವಿದ್ದ ಕಡೆಯೇ ಇರುವುದೆಂಬಮಾತು ಸುಳ್ಳಲ್ಲ ನಿನಗೆ ಅಕ್ಷಯ ವಸ್ತ್ರವನ್ನು ಕೊಟ್ಟು ಸಭೆಯಲ್ಲಿ ಮಾನಸಂರಕ್ಷಣೆ ಮಾಡಿದ ಪರಮಾತ್ಮನೇ ಈಗ ನಿನ್ನನ್ನು ರಕ್ಷಿಸುವನು. ನೀನು ಅಧೈರ್ಯಪಡಬೇಡ. ಈ ಮೂರ್ಖರು ಯಾರಮಾತನ್ನೂ ಕೇಳತಕ್ಕ ವರಲ್ಲವಾದುದರಿಂದ ಇವರಿಗೆ ಬುದ್ಧಿಹೇಳಿದರೂ ವ್ಯರ್ಥವೆಂದು ಸಭಿಕರು ತಿಳಿದು ಸುಮ್ಮನೆ ಇದ್ದಾರೆ.

ಈಮಾತನ್ನು ಕೇಳಿ ಗರ್ವಾಂಧನಾದ ದುರ್ಯೋಧನನು 'ಎಲೆ ತೊತ್ತೇ! ಈ ವಿದುರನಮಾತಿಗೆ ನಾನು ಹೆದರುವೆನೆಂದು ತಿಳಿದೆಯಾ? ನಿನ್ನ ಗಂಡಂದಿರು ನನ್ನನ್ನು ಏನುಮಾಡಬಲ್ಲರು? ಇವರ ಸಾಮರ್ಥ್ಯವು ಒಲೆಯಲ್ಲಿ ಆರಿದ ಕೆಂಡದಂತೆ ವ್ಯರ್ಥವೆಂದು ತಿಳಿ. ಆ ಬೆಂಕಿಯು ಇನ್ನೂ ಇದೆಯೋ ? ಇವರ ಪ್ರತಾಪವು ಅಂದೇ ನಂದಿಹೋಯಿತು. ನನ್ನನ್ನು ಇವರೇನು ಮಾಡಬಲ್ಲರು? ಇಗೋ ನೋಡು.' ಎಂದು ಪುನಃ ತನ್ನ ವಸ್ತ್ರವನ್ನೆತ್ತಿ ತೊಡೆಯನ್ನು ತೆಗೆದು ತೋರಿಸಿದನು. ಆಗಲಾ ದ್ರೌಪದಿಯು ಬಹಳವಾಗಿ ಕೋಪಿಸಿಕೊಂಡು 'ಎಲಾನೀಚಾ, ನಿನ್ನ ಮರಣವು ಈ ತೊಡೆಗಳಲ್ಲಿಯೇ ಆಗಲಿ' ಎಂದು ಶಾಪವನ್ನುಕೊಟ್ಟಳು.

ಆಗ ಭೀಮಸೇನನು ಸಮುದ್ರದ ತೆರೆಗಳನ್ನು ತಳ್ಳಿಕೊಂಡು ಬರುವ ಬಡಬಾಗ್ನಿಯಂತೆಯೂ, ಮೇಘಮಾಲೆಯನ್ನು ಒಡೆದುಕೊಂಡುಬರುವ ಸಿಡಿಲಿನಂತೆಯೂ ತನ್ನ ಪೀಠದಿಂದ ಎದ್ದು ಸಭೆಯೊಳಕ್ಕೆ ನುಗ್ಗಿ, 'ಈ ಖೂಳನನ್ನು ಈಗಲೇಕೊಂದು ಇವನ ರಕ್ತವನ್ನು ಹೀರಿಬಿಡುವೆನು. ಇವನ ತೊಡೆಗಳನ್ನು ಕಡಿದು ಬಿಸುಡುವೆನು. ನಮ್ಮಣ್ಣಯ್ಯನು ಮುನಿದರೂ ಮುನಿಯಲಿ.' ಎಂದು ಹೊರಟನು. ಇದನ್ನು ಕಂಡು ಸಭೆಯಲ್ಲಿದ್ದವರೆಲ್ಲರೂ ಹೆದರಿ ಓಡಿ ಹೋಗುತ್ತಿದ್ದರು. ದುರ್ಯೋಧನನ ಎದೆ ಒಡೆಯಿತು. ವಿದುರ ಭೀಷ್ಮ

ದ್ರೋಣರು 'ಹಾ ಹಾ! ಪ್ರಮಾದ ಸಂಭವಿಸಿತು! ಈಗ ಏನುಮಾಡತಕ್ಕದು.' ಎಂದು ಚಿಂತಿಸುತ್ತಿದ್ದರು. ಕೆದರಿದ ತಲೆಗೂದಲಿಂದ ಮುಖವನ್ನು ತಗ್ಗಿಸಿಕೊಂಡು ಅಳುತ್ತಿದ್ದ ದ್ರೌಪದಿಯ ಮುಖದಲ್ಲಿ ಕಳೆಗೂಡಿತು.

ಕಬ್ಬಿನ ತೋಟದ ಯಜಮಾನನು ಬಂದರೆ ಕಳ್ಳಮೇವು ಮೇಯಲಿಕ್ಕೆ ಹೋಗಿದ್ದ ಬಡನರಿಯು ಓಡಿಹೋಗುವಂತೆ ಈಕೆಯ ಸೆರಗನ್ನು ಹಿಡಿದು ಎಳೆಯುತ್ತಿದ್ದ ದುಶ್ಶಾಸನನು ತನ್ನ ಅಣ್ಣನಬಳಿಗೆ ಓಡಿಹೋದನು. ಆಗ ಭೀಮಸೇನನು ದ್ರೌಪದಿಯನ್ನು ನೋಡಿ "ಎಲೌ ಲಲನೇ, ಇನ್ನು ನೀನು ಹೆದರಬೇಡ. ಧೈರ್ಯದಿಂದ ಇರು. ಕರ್ಣನ ಶಿರಸ್ಸೆಂಬ ಭಾಂಡದಲ್ಲಿ ಈ ದುಶ್ಶಾಸನನ ನೊರೆ ರಕ್ತವನ್ನು ಸುರಿದು, ಇವನ ಅಣ್ಣನಾದ ಕೌರವನ ನೆಣವನ್ನು ಕೊಯ್ದು ತುಂಬಿ, ದುರುಳ ಶಕುನಿಯ ಕಾಳಿಜದೊಡನೆ ಬೆರಸಿ, ನನ್ನ ಕೋಪಾಗ್ನಿಯಿಂದ ಅದನ್ನು ಬೇಯಿಸಿ, ರಣಭೂತಗಳಿಗೆ ಉಣಬಡಿಸುವೆನು. ಈವೇಳೆಯಲ್ಲಿ ನಮ್ಮ ಅಣ್ಣಯ್ಯನ ಸಾತ್ವಿಕದ ನುಡಿಗಳನ್ನೂ ಲಕ್ಷ್ಯಮಾಡತಕ್ಕವನಲ್ಲ. ಹೆದರಬೇಡ." ಎಂದು ಹೇಳಿ ಆಕೆಯ ಕುರುಳನ್ನು ನೇವರಿಸುತ್ತಾ ಇದ್ದನು. ಆಗ ವಿವೇಕಿಯಾದ ಅರ್ಜುನನು ಸಭೆಯ ವೇದಿಯಿಂದ ಇಳಿದು ಭೀಮನನ್ನು ನೋಡಿ 'ಅಣ್ಣಯ್ಯಾ, ಗುರುವಾಗಿಯೂ, ತಂದೆಗೆ ಸಮಾನನಾಗಿಯೂ, ಇರುವ ಯುಧಿಷ್ಠಿರನನ್ನು ಧರ್ಮಚ್ಯುತನನ್ನಾಗಿ ಮಾಡಬಹುದೆ? ಶತ್ರುನಿಗ್ರಹಕ್ಕೆ ಇದು ವೇಳೆಯಲ್ಲ. ಸ್ವಲ್ಪಸಮಾಧಾನವನ್ನು ತಂದುಕೋ' ಎಂದು ಹೇಳಿ ಅವನನ್ನು ತಡೆದನು.

ಆಗ ಭೀಮನು ಹಸಿದ ಹಾವಿನಂತೆ ಬುಸುಗುಟ್ಟುತ್ತಾ ಅರ್ಜುನನನ್ನು ನೋಡಿ, 'ತಮ್ಮಾ, ನೀನು ಹೇಳಿದಂತೆ ಈಗ ಸುಮ್ಮನೆ

ಇರುವೆನು. ಮುಂದೆ ರಣದಲ್ಲಿ ಈ ಕೌರವರ ನೂರುಮಂದಿಯ ತಲೆಗಳನ್ನೂ ಕಡಿದು ಕೆಡಹುವ ಭಾರವು ನನ್ನದಾಗಿರಲಿ, ನನ್ನ ಈ ಗದೆಗೆ ದುರ್ಯೋಧನನ ತೊಡೆಗಳನ್ನೇ ಬಲಿಕೊಡುವೆನು. ಈ ದುಶ್ಶಾಸನನ ಬಿಸುರಕ್ತವನ್ನು ಕುಡಿಯದೆ ಬಿಡೆನು. ನಿನ್ನಾಣೆ. ಇದು ನಿಶ್ಚಯವೆಂದು ನಂಬು.' ಎಂದು ಹೇಳಿ, ಅಲ್ಲಿಗೂ ಕೋಪವಡಗದೆ ಇರಲು ಮತ್ತಿಂತೆಂದನು. 'ಎಲೆ ಭೂಮಿಯೇ, ಜಲವೇ, ಅಗ್ನಿಯೇ, ವಾಯುವೇ, ಆಕಾಶವೇ, ಪಂಚಭೂತಗಳಾದ ನೀವೆಲ್ಲರೂ ನನ್ನ ಈ ಮಾತಿಗೆ ಸಾಕ್ಷ್ಯರುಗಳಾಗಿರಿ. ಇಂದ್ರಾದ್ಯಷ್ಟದಿಕ್ಪಾಲರಿರಾ! ಈ ಭೀಮಸೇನನ ಭಾಷೆಗಳನ್ನು ಬರೆದುಕೊಂಡಿರಿ. ನಾನು ಈ ಮಾತಿಗೆ ತಪ್ಪಿದರೆ ವಾಯುಪುತ್ರನೇ ಅಲ್ಲವೆಂದು ಪ್ರತಿಜ್ಞೆ ಮಾಡುತ್ತೇನೆ. ಆಗಲಿ. ಇದು ಸಮಯವಲ್ಲ. ಮುಂದೆ ದೊಡ್ಡ ರಣಯಜ್ಞದಲ್ಲಿ ಈ ನರಪಶುಗಳನ್ನೆಲ್ಲ ಹೋಮಮಾಡುವೆನು.' ಎಂದು ಪ್ರಮಾಣಮಾಡಿದನು. ಈ ಶಪಥವನ್ನು ಕೇಳಿದ ಕೂಡಲೇ ಕೌರವರ ಎದೆಗಳು ಒಡೆದುಹೋದುವು.

ಆಗ ಅರ್ಜುನನು ಸರ್ವರೂ ಕೇಳುವಂತೆ ಮೇಘಗಂಭೀರಧ್ವನಿಯಿಂದ ಇಂತೆಂದನು. 'ನಮ್ಮಣ್ಣನ ಪ್ರತಿಜ್ಞೆಯನ್ನೆಲ್ಲರೂ ಕೇಳಿರುವಿರಿ. ಇದರ ಜತೆಗೆ ನಾನೂ ಒಂದು ಪ್ರತಿಜ್ಞೆಮಾಡುವೆನು. ಕೇಳಿರಿ. ಕರ್ಣನ ಕೊರಳಿಗೂ ನನ್ನ ಪ್ರಾಣಕ್ಕೂ ಉಂಗುರದುಡಿಕೆ, ಈ ಕರ್ಣನಿಗೆ ಇಂದ್ರಾದ್ಯಷ್ಟದಿಕ್ಪಾಲಕರೂ ಬ್ರಹ್ಮಾದಿ ತ್ರಿಮೂರ್ತಿಗಳೂ ನೆರವಾಗಿ ಬಂದರೂ ನಾನು ಇವನನ್ನು ಕೊಲ್ಲದೆ ಬಿಡುವವನಲ್ಲ. ಈಮಾತು ತಪ್ಪಿದರೆ ನಾನು ಗುರುದ್ರೋಹದ ಪಾತಕಕ್ಕೆ ಗುರಿಯಾಗುವೆನು.' ಎಂದನು. ಸಹದೇವನು ಸಭಿಕರನ್ನು ನೋಡಿ ಮಹಾಜನರುಗಳಿರಾ ಕೇಳಿರಿ. ಅಣ್ಣಯ್ಯನನ್ನು ಕಪಟದ್ಯೂತಕ್ಕೆ

ಪ್ರೇರೇಪಿಸಿ, ನಮ್ಮನ್ನೆಲ್ಲಾ ಇಷ್ಟರ ಕಷ್ಟಕ್ಕೆ ಗುರಿಮಾಡಿದ ದುರಾತ್ಮನಾದ ಈ ಶಕುನಿಯ ತಲೆಗೆ ಈಗಲೇ ಸಂಚಕಾರವನ್ನು ಕೊಟ್ಟಿರುವೆನು. ಇವನನ್ನು ವಧಿಸಿದ ಹೊರತು ನನ್ನ ಮನಸ್ಸು ಸಮಾಧಾನ ಹೊಂದುವುದಿಲ್ಲ.' ಎಂದನು.

ಆ ವೇಳೆಯಲ್ಲಿ ಹಸ್ತಿನಾಪುರದ ನೆಲವು ಬಾಯಿಬಿಟ್ಟಿತು. ಪಟ್ಟಣದೊಳಗೆ ರಕ್ತದಮಳೆ ಸುರಿಯಿತು. ರಾಜನ ಅಗ್ನಿಹೋತ್ರದ ಹತ್ತಿರ ನರಿಗಳು ಒರಲಿದುವು. ದೇವಾಲಯಗಳಲ್ಲಿದ್ದ ವಿಗ್ರಹಗಳು ಹುಂಕರಿಸುತ್ತಿದ್ದುವು. ಭಟರ ಆಯುಧಗಳಿಂದ ಬೆಂಕಿಯ ಕಿಡಿಗಳು ಉದುರುತ್ತಿದ್ದುವು. ಪಟ್ಟದ ಆನೆ ಕುದುರೆಗಳ ಕಣ್ಣುಗಳಿಂದ ನೀರು ಸುರಿಯುತ್ತಿದ್ದಿತು. ಆಕಾಶದಲ್ಲಿ ಧೂಮಕೇತುಗಳು ಕಾಣಿಸಿಕೊಂಡುವು. ಗೋಪುರದ ಕಲಶಗಳು ಮುರಿದು ಬೀಳುತ್ತಿದ್ದುವು. ಭೂಮಿಯು ಅದುರಿತು. ನಡುಹಗಲಿನಲ್ಲಿಯೇ ಕತ್ತಲೆ ಕವಿಯಿತು. ಕೆರೆತೊರೆಗಳ ನೀರು ಉಕ್ಕಿತು.

ಇಂತಹ ಹಲವು ಉತ್ಪಾತಗಳನ್ನು ನೋಡಿ ಭೀಷ್ಮನು ಇಂತೆಂದನು. "ಓಹೋ ! ಇದೇನಿದು ! ಈ ಭೂತಕ್ಷೋಭವು ಕುರುಕುಲವನ್ನು ನಾಶಮಾಡದೆ ಬಿಡದು. ಅಯ್ಯೋ ! ಸಾಧ್ವಿಯಾದ ದ್ರೌಪದಿಯನ್ನು ಇಷ್ಟು ಗೋಳಾಡಿಸಿದರಲ್ಲ ! ಈಕೆಯ ಸಂತಾಪವು ವ್ಯರ್ಥವಾಗಿ ಹೋಗುವುದುಂಟೆ? ಇವೆಲ್ಲಾ ದೈವಾಜ್ಞೆಯಲ್ಲದೆ ಬೇರೆ ಅಲ್ಲ. ಎಲೈ ಧೃತರಾಷ್ಟ್ರನೇ, ಕಪಟಿಗಳಾದ ನಿನ್ನಮಕ್ಕಳ ಅಕೃತ್ಯಕ್ಕೆ ತಕ್ಕ ಫಲವನ್ನು ನೀನು ಅನುಭವಿಸಲೇಬೇಕಾಗಿದೆ. ಈಗಲೇ ಹೋಗಿ ಪಾಂಡವರ ಪತ್ನಿಯಾದ ದ್ರೌಪದಿಯನ್ನು ಸಮಾಧಾನಮಾಡು. ಇಲ್ಲದಿದ್ದರೆ ಈಕೆಯ ಕೋಪದಿಂದ ಇನ್ನೂ ಬಹಳ ಅನರ್ಥಗಳಾಗದೆ ತಪ್ಪದು."

ಈ ಮಾತುಗಳನ್ನು ಕೇಳಿ ಗುರುವಾದ ದ್ರೋಣಾಚಾರ್ಯನೂ, ಕೃಪಾಚಾರ್ಯನೂ, ವಿದುರನೂ ಧೃತರಾಷ್ಟ್ರನನ್ನು ನೋಡಿ 'ರಾಯನೇ, ಈ ಆರ್ಯನಮಾತು ಸುಳ್ಳಲ್ಲ. ಯಜ್ಞದಲ್ಲಿ ಉದಿಸಿದ ಈ ದ್ರೌಪದಿಯು ಸಾಮಾನ್ಯ ಸ್ತ್ರೀಯೆಂದು ತಿಳಿಯಬೇಡ. ಈಗಲೇ ಈಕೆಯನ್ನು ಪ್ರಾರ್ಥಿಸಿ ನಿನ್ನ ಕುಲಕ್ಷಯವಾಗದಂತೆ ಅಭಯವನ್ನು ಬೇಡು. ನೀನೂ ನಿನ್ನಮಕ್ಕಳೂ ಕ್ಷೇಮದಿಂದ ಇರಬೇಕಾದರೆ ಈ ಕೆಯ ಪ್ರಸನ್ನತೆಯನ್ನು ಈಗಲೇ ಪಡೆಯುವುದು ಅಗತ್ಯವು. ಮಿಂಚಿ ಹೋದಮೇಲೆ ಕೆಲಸ ಕೆಡುವುದು. ಬೇಗಹೋಗು' ಎಂದು ಆತ ನನ್ನು ಮುಂದಕ್ಕೆ ನೂಕಿದರು. ಆಗಲಾ ಧೃತರಾಷ್ಟ್ರನು ದ್ರೌಪದಿಯ ಬಳಿಗೆ ಬಂದು ದೈನ್ಯದಿಂದ ಇಂತೆಂದನು.

ಧೃತ.—ಮಗಳೇ, ನನ್ನಮಾತನ್ನು ಮನ್ನಿಸು. ಕೋಪಿಸಿ ಕೊಳ್ಳಬೇಡ. ನಾನು ನಿನ್ನ ಮಾವನಲ್ಲವೇ ! ಕಣ್ಣಿಲ್ಲದ ಈ ನನ್ನ ಮಾತನ್ನು ತೆಗೆದುಹಾಕಬೇಡ. ದುರಾತ್ಮರಾದ ನನ್ನಮಕ್ಕಳಮಾತುಗಳನ್ನು ಮರೆತುಬಿಡಮ್ಮಾ. ನನಗೆ ನನ್ನಮಗಳಾದ ದುಶ್ಶಳೆಯೂ ಒಂದೇ. ನೀನೂ ಒಂದೇ, ನಿಮ್ಮಿಬ್ಬರಲ್ಲಿ ಭೇದವಿಲ್ಲವೆಂದು ತಿಳಿದಿದ್ದೇನೆ. ನೀನು ದೊಡ್ಡಮನಸ್ಸುಮಾಡಿ ನನ್ನ ವಂಶವನ್ನು ಕಾಪಾಡಬೇಕೆಂದು ಪ್ರಾರ್ಥಿಸುತ್ತೇನೆ. ಇವರು ಮಾಡಿದ ಅಕೃತ್ಯಗಳನ್ನು ಕ್ಷಮಿಸು.

ದ್ರೌಪ.—ಮಾವಯ್ಯಾ, ನಿಮಗೆ ನಮಸ್ಕರಿಸುವೆನು. ನಾನು ನಿಮಗೆ ಮಗಳೂ ಅಹುದು. ಸೊಸೆಯೂ ಅಹುದು. ನಿಮ್ಮ ಮಗನ ಕಣ್ಣಿಗೆಮಾತ್ರ ನಾನು ಕಾಲಕೂಟದ ಮಗಳೋ ಸೊಸೆಯೋ ಆತನನ್ನೇ ಕೇಳಿರಿ. ಸತ್ಯಸಂಧರಾದ ಪಾಂಡವರು ನಿಮ್ಮಮಕ್ಕಳ ಯುಕ್ತಿಗಳಿಗೆ ಅಂಜಿದರೋ, ಪಾಪದಭಯಕ್ಕಂಜಿದರೋ ನೀವೇ ಯೋಚಿಸಿರಿ.

ಧೃತ.—ತಾಯಿಾ, ನಡೆದು ಹೋದುದನ್ನು ಮನಸ್ಸಿನಲ್ಲಿಡಬೇಡ. ಮರೆತುಬಿಡು. ನಿಮ್ಮದೇ ಧರ್ಮವು, ನಮ್ಮವರದೆಲ್ಲಾ ಪಾಪಕೃತ್ಯಗಳೇ. ನಿನ್ನ ಪತಿಗಳು ಧರ್ಮಾತ್ಮರೆಂತಲೂ, ಪಾಪರಹಿತರೆಂತಲೂ ಲೋಕಪ್ರಸಿದ್ಧವಾಗಿದೆ. ನನ್ನನ್ನು ನೋಡಿ ನೀಚರಾದ ನನ್ನ ಮಕ್ಕಳ ಅಕೃತ್ಯಗಳನ್ನೆಲ್ಲಾ ಕ್ಷಮಿಸಮ್ಮಾ. ನನ್ನ ಮಕ್ಕಳು ದುಷ್ಟರು. ಅವರ ಮನಸ್ಸು ಒಳ್ಳೆಯದಲ್ಲ. ದುರಹಂಕಾರಿಗಳಾದ ಅವರ ಹೆಸರೆಲ್ಲಾ ದುಷ್ಕಾರಪೂರ್ವಕವಾಗಿರುವುದೇ ಇದಕ್ಕೆ ದೃಷ್ಟಾಂತವಾಗಿದೆ. ನೀವು ದಯಾಮಯರು. ನಿನ್ನ ಪತಿಗಳು ಸದ್ಗುಣಗರಿಷ್ಠರು. ನಮ್ಮವರು ಮಾಡಿದ ಅಪರಾಧಗಳನ್ನು ಮನಸ್ಸಿನಲ್ಲಿಡದೆ ಕ್ಷಮಿಸು. ಮಗಳೇ. ದ್ರೌಪದೀ! ವ್ಯರ್ಥವಾಗಿ ನಿಮ್ಮನ್ನು ನೋಯಿಸಿದುದಕ್ಕೆ ಪಶ್ಚಾತ್ತಾಪಪಡುವೆನು. ಸತ್ಯವೇ ಆಯುಧವಾಗಿವುಳ್ಳ ನಿನ್ನ ಪತಿಗಳು ಶತ್ರುಗಳನ್ನು ಕೊಲ್ಲಲಿಕ್ಕೆ ಹೊರಟರೆ ಅವರ ಎದುರಿಗೆ ನಿಲ್ಲತಕ್ಕವರಿರುವರೆ? ಅಪರಾಧಿಗಳಾದ ನಮ್ಮನ್ನು [illegible]ನ್ನಿಸು. ನಿನಗೆ ಬೇಕಾದ ವರಗಳನ್ನು ಬೇಡು. ಕೊಡುವೆನು.

ದ್ರೌಪ.—ಮಾವಯ್ಯಾ, ನಮ್ಮ ದುರ್ದೈವದಿಂದ ಆಗತಕ್ಕುವುಗಳೆಲ್ಲಾ ಆಗಿಹೋದುವು. ಇದಕ್ಕೆ ನೀವೇನು ಮಾಡಬಲ್ಲಿರಿ? ಮುಖ್ಯವಾಗಿ ನಿಮ್ಮ ಮಕ್ಕಳನ್ನು ಸ್ವಾಧೀನದಲ್ಲಿಟ್ಟುಕೊಳ್ಳದಕಾರಣ ಇಷ್ಟು ಅನರ್ಥಗಳು ವುಂಟಾದುವು. ಇದುವರೆಗೂ ಅವರ ಅಕೃತ್ಯಗಳನ್ನು ತಡೆಯದೆ ಸುಮ್ಮನಿದ್ದಿರಿ. ಈಗ ಆದರೂ ನಿಮಗೆ ಜ್ಞಾನೋದಯವಾದುದಕ್ಕಾಗಿ ಸಂತೋಷಿಸುತ್ತೇನೆ. ನೀವು ಪ್ರಸನ್ನರಾಗಿ ವರವನ್ನು ಕೊಡು. ವುದಾದರೆ ಮಹಾರಾಜರಾದ ನನ್ನ ಪತಿಗಳನ್ನು ದಾಸ್ಯದಿಂದ ಮುಕ್ತ ಮಾಡಿರಿ. ಪ್ರತಿವಿಂದ್ಯಾದಿ ನನ್ನ ಮಕ್ಕಳು ದಾಸಪುತ್ರರೆನಿಸಬಾರದು.

ಧೃತ.—ತಾಯಿ, ನಿನ್ನ ಇಷ್ಟದಂತೆ ಈ ವರವನ್ನು ಕೊ

ಟ್ಟಿದ್ದೇನೆ. ಮತ್ತೊಂದು ವರವನ್ನು ಬೇಡು. ಕೊಡುವೆನು.

ದ್ರೌಪ.—ಆರ್ಯರೇ, ನನ್ನ ಪತಿಗಳೈವರಿಗೂ ಅವರವರಶಸ್ತ್ರಾಸ್ತ್ರಗಳನ್ನೂ, ಗಜರಥ ತುರಗ ಪದಾತಿಗಳನ್ನು ಹಿಂದಕ್ಕೆಕೊಡಿಸತಕ್ಕದು.

ಧೃತ.—ಮಗಳೇ. ಈ ವರವನ್ನೂ ಕೊಟ್ಟಿರುವೆನು. ಮತ್ತೇನು ಬೇಡುವೆ? ಕೇಳಿಕೊ, ಕೊಡುವೆನು.

ದ್ರೌಪ.—ಮಹಾರಾಜರೇ, ಧರ್ಮಶಾಸ್ತ್ರದಂತೆ ವೈಶ್ಯರಿಗೆ ಒಂದುವರವೂ, ಕ್ಷತ್ರಿಯಸ್ತ್ರೀಗೆ ಎರಡು ವರಗಳೂ, ರಾಜರಿಗೆ ಮೂರು ವರಗಳೂ, ಬ್ರಾಹ್ಮಣರಿಗೆ ನೂರುವರಗಳೂ ಪಡೆಯಲಿಕ್ಕೆ ಅರ್ಹತೆಯುಂಟು. ಇದಕ್ಕಿಂತ ಹೆಚ್ಚಾಗಿ ಬಯಸಿದರೆ ಅತ್ಯಾಶೆಯಿಂದ ನಾಶವು ತಪ್ಪದು. ಇನ್ನು ನಾನು ಮತ್ತೇನನ್ನೂ ಬೇಡಲೊಲ್ಲೆನು.

ಧೃತ.—ಎಲೌ ಸದ್ಗುಣಸಂಪನ್ನೇ.? ನೀನು ಬೇಡಿದ ವರಗಳನ್ನು ಕೊಟ್ಟಿರುವೆನು. ಮತ್ತು ನಿನ್ನಪತಿಯು ಸೋತಿರುವ ಸಮಸ್ತ ಆಸ್ತಿಯನ್ನೂ ಹಿಂದಕ್ಕೆ ಕೊಟ್ಟಿರುವೆನು. ನಿನ್ನ ಮನಸ್ಸಿನಲ್ಲಿ ಇರುವ ಕ್ರೋಧವನ್ನು ಬಿಟ್ಟು, ಸಂತೋಷದಿಂದ ಸಕಲೈಶ್ವರ್ಯಗಳನ್ನೂ ಪಡೆದು, ನಿನ್ನ ಪತಿಗಳೊಂದಿಗೆ ಇಂದ್ರಪ್ರಸ್ಥಕ್ಕೆ ಪ್ರಯಾಣ ಮಾಡಬಹುದು. ನಾವು ಮಾಡಿದ ತಪ್ಪುಗಳನ್ನು ಮನ್ನಿಸಿ ಸಲಹಮ್ಮ.

ಈಮಾತನ್ನು ಕೇಳಿ ದ್ರೌಪದಿಯು ಸುಮ್ಮನೆ ಆದಳು. ಆಗ ಕರ್ಣನು ಆ ಸಾಧ್ವಿಯನ್ನು ನೋಡಿ 'ಎಲೇ ದ್ರೌಪದೀ, ಪತಿವ್ರತೆಯೆಂದರೆ ನೀನೇ ಸರಿ! ಮಾರಿಹೋಗಿದ್ದ ನಿನ್ನ ಸೀಮಂತ ರತ್ನವನ್ನು ಮರಳಿ ಬಿಡಿಸಿಕೊಂಡೆಯಲ್ಲಾ! ಗೂಡಿನಲ್ಲಿ ಸಿಕ್ಕಿಬಿದ್ದಿದ್ದ ಹುಲಿಗಳನ್ನು ಬಿಡಿಸಿ ಹೊರಕ್ಕೆ ತಂದೆಯಲ್ಲಾ? ನಿನ್ನ ಪತಿಗಳ ದುಃಖಸಮುದ್ರಕ್ಕೆ ಸೇತುವಾದೆ? ಬರಡಾದ ಮರವನ್ನು ಫಲಿಸುವಂತೆ ಮಾಡಿದೆ. ಶಹಬಾಸ್! ನೀನೇ ಧನ್ಯಳು.' ಎಂದು ತಲೆದೂಗಿ ಹೊಗಳಿದನು.

ಆಗ ಭೀಮನು ಅತ್ಯಾಗ್ರಹದಿಂದ ಘುಡುಘುಡಿಸುತ್ತಾ, ಹುಬ್ಬುಗಳನ್ನು ಗಂಟಿಟ್ಟುಕೊಂಡು, ಕಣ್ಣುಗಳಿಂದ ಕೆಂಡಗಳನ್ನು ಕಾರುತ್ತಾ, ಆ ದುರಾತ್ಮನಾದ ಕರ್ಣನನ್ನು ಕೊಂದುಬಿಡಬೇಕೆಂದು ಬಾಗಿಲಿನಲಾಳನುಂಡಿಗೆಯ ಕಡೆ ದೃಷ್ಟಿಸಿ ನೋಡಿದನು. ಇದನ್ನು ತಿಳಿದು ಧರ್ಮರಾಯನು ಅವನನ್ನು ನೋಡಿ 'ತಮ್ಮಾ, ಕೋಪಿಸಬೇಡ. ಈ ಕೌರವರು ನಮ್ಮ ಶತ್ರುಗಳಲ್ಲ. ಕಾಮ ಕ್ರೋಧಾದಿ ಅರಿಷಡ್ವರ್ಗವೇ ನಮ್ಮ ನಿಜವಾದ ವೈರಿಗಳು. ಇವುಗಳಲ್ಲಿ ಒಂದಾದ ಕ್ರೋಧವನ್ನು ದೂರಮಾಡು. ಈ ಕರ್ಣನು ಆಡಿದ ಮಾತಿಗೆ ಕೋಪವೇತಕ್ಕೆ ? ನಮ್ಮ ಪ್ರಾರಬ್ಧ ಕರ್ಮದಂತೆ ನಡೆಯತಕ್ಕದು ತಪ್ಪದು.'

ಈ ಪ್ರಕಾರ ಸಮಾಧಾನ ಹೇಳಿ, ಅರ್ಜುನಾ, ನಕುಲಾ, ಸಹದೇವಾ, ಇಲ್ಲಿ ಬನ್ನಿರಿ ಎಂದು ಕರೆಯಲು ನಾಲ್ವರು ತಮ್ಮಂದಿರೂ ಯುಧಿಷ್ಠಿರನ ಹತ್ತಿರಕ್ಕೆ ಬಂದರು. ಅವರು ಅಣ್ಣನ ಪಾದಗಳಿಗೆ ನಮಸ್ಕರಿಸಿ, 'ಆರ್ಯನೇ, ನಮಗೆ ಏನು ಅಪ್ಪಣೆ ? ನಮಗೆಲ್ಲಾ ನೀನೇ ಗುರುವೂ, ದೇವರೂ, ತಾಯಿಯೂ, ತಂದೆಯೂ ಆಗಿದ್ದೀಯೆ. ನಿನ್ನಮಾತಿಗೆ ಎದುರು ಹೇಳತಕ್ಕವರಲ್ಲ.' ಎಂದು ವಿಧೇಯರಾಗಿ ನಿಂತರು. ಯುಧಿಷ್ಠಿರನು ಅವರನ್ನೆಲ್ಲಾ ಕರೆದುಕೊಂಡು ಬಂದು ಧೃತರಾಷ್ಟ್ರನ ಪಾದಗಳಿಗೆ ವಂದಿಸಿ, "ಮಹಾರಾಜನೇ, ನಮಗೆ ಏನು ಅಪ್ಪಣೆ ಕೊಡುವೆ ? " ಎಂದು ಕೇಳಿದನು. ಧೃತರಾಷ್ಟ್ರನು ಅವನನ್ನು ನೋಡಿ 'ಎಲೈ ಧರ್ಮಪುತ್ರನೇ, ನನ್ನ ಮಕ್ಕಳು ನಿಮಗೆ ಮಹಾಪರಾಧವನ್ನು ಮಾಡಿದರು. ನನ್ನನ್ನು ನೋಡಿ ಇವರ ತಪ್ಪುಗಳನ್ನು ಕ್ಷಮಿಸು. ನೀವೇ ನನ್ನ ಮಕ್ಕಳು; ದುರಾತ್ಮರಾದ ಈ ಕೌರವರು ನನ್ನ ಮಕ್ಕಳಲ್ಲ. ಈ ಶಕುನಿಯ ಪ್ರೇರಣೆಯಿಂದ ಇಷ್ಟು ಅನರ್ಥಕ್ಕೆ ಅವಕಾಶವಾಯಿತೆಂದು ತಿಳಿಯುತ್ತೇ

ಸೆ. ನಿಮ್ಮಲ್ಲಿ ಲೇಶವಾದರೂ ತಪ್ಪಿಲ್ಲ. ಎಲ್ಲಾ ತಪ್ಪುಗಳನ್ನೂ ನನ್ನ ಮಕ್ಕಳೇ ಮಾಡಿರುವುದರಿಂದ ಕ್ಷಮಿಸೆಂದು ನಿನ್ನನ್ನು ಪ್ರಾರ್ಥಿಸುತ್ತೇನೆ. ನೀನು ಇವುಗಳನ್ನು ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡಬೇಕು. (ಯುಧಿಷ್ಠಿರನನ್ನು ಆಲಿಂಗಿಸಿಕೊಂಡು)" ಮಗನೇ, ಗಾಂಧಾರಿಯು ನಿನಗೆ ಅನ್ಯಳೇ? ಹುಟ್ಟುಕುರುಡನಾದ ನನ್ನಲ್ಲಿ ಕರುಣಿಸು. ಧರ್ಮಮೂರ್ತಿಯಾದ ನೀನು ಕೋಪಿಸಿಕೊಂಡರೆ ನನ್ನ ಮಕ್ಕಳು ಬದುಕಲಾರರು. ಈ ವೇಳೆಯಲ್ಲಿ ನಮ್ಮ ತಪ್ಪುಗಳನ್ನೆಲ್ಲಾ ದಯಮಾಡಿ ಕ್ಷಮಿಸೆಂದು ಬೇಡಿಕೊಳ್ಳುತ್ತೇನೆ. ಎಲೈ ಯುಧಿಷ್ಠಿರನೇ, ನೀವು ಸಾಮಾನ್ಯ ಪುರುಷರೇ! ಜಗತ್ಪ್ರಸಿದ್ಧವಾದ ರಾಜಸೂಯಯಾಗವನ್ನುಮಾಡಿ ಮೂರುಲೋಕಗಳನ್ನೂ ಮೆಚ್ಚಿಸಿದಿರಿ. ನಿಮ್ಮ ತಂದೆಯಾದ ಪಾಂಡುರಾಯನಿಗೆ ಸದ್ಗತಿಯುಂಟುಮಾಡಿದಿರಿ. ನಾನೊಬ್ಬನುಳಿದಿರುವೆನು. ಮುದುಕನಾದ ನನ್ನ ಮನಸ್ಸನ್ನು ನೋಯಿಸಬೇಡವಪ್ಪಾ! ಬೇಡ. ನನಗೆ ನೀನೇ ಗತಿಯಲ್ಲದೆ ಮತ್ತಾರಿರುವರು? ನನ್ನ ಮಕ್ಕಳುಮಾಡಿದ ಅಕೃತ್ಯಗಳನ್ನೆಲ್ಲಾ ಮನಸ್ಸಿನಲ್ಲಿಡದೆ ಮರೆತುಬಿಡು. ನಿನ್ನ ತಮ್ಮಂದಿರೊಂದಿಗೆ ಪತ್ನೀಸಹಿತನಾಗಿ ನಿನ್ನ ರಾಜಧಾನಿಗೆ ಹೋಗಿ ಸುಖದಿಂದ ರಾಜ್ಯವಾಳಿಕೊಂಡು ಬಹುಕಾಲ ಬದುಕು."

ಈ ಪ್ರಕಾರವಾಗಿ ಆಶೀರ್ವದಿಸಿ, ಅವರಿಗೆ ಸಮಾಧಾನದ ಮಾತುಗಳನ್ನು ಆಡಿದುದಲ್ಲದೆ ಅವರಿಗೆಲ್ಲಾ ಗೌರವಾನುಗುಣವಾದ ಉಡುಗೆರೆಗಳನ್ನೂ, ದ್ರೌಪದಿಗೆ ದುಕೂಲರತ್ನಾಭರಣಗಳನ್ನೂ, ಗಂಧಪುಷ್ಪ ತಾಂಬೂಲಗಳನ್ನೂ ಕೊಟ್ಟು ಸತ್ಕರಿಸಿ ಗಾಂಧಾರಿಯಬಳಿಗೆ ಕಳುಹಿದನು. ಅವರು ಆ ಮಹಾರಾಣಿಗೆ ವಿನಯದಿಂದ ವಂದಿಸಿ ನಿಂತರು. ಆಗ ಆಕೆಯು ಪಾಂಡವರನ್ನು ನೋಡಿ ಇಂತೆಂದಳು.

ಮಕ್ಕಳಿರಾ, ಕುಲಗೇಡಿಗಳಾದ ನನ್ನ ಮಕ್ಕಳ ಅವಿನಯ ವನ್ನು ನೋಡಬೇಡಿರಿ. ಅಂಧಕನಾದ ಧೃತರಾಷ್ಟ್ರನನ್ನೂ ನನ್ನನ್ನೂ ನೋಡಿ, ಅವರ ಅಕೃತ್ಯಗಳನ್ನು ಮರೆತುಬಿಡಿರಿ. ರಾಜನು ಹೇಳಿದಂತೆ ನಿಮ್ಮ ಯಾವದಾಸ್ತಿಯನ್ನೂ ಮರಳಿ, ಪಡೆದು, ರಾಜ ಧಾನಿಗೆಹೋಗಿ ಎಂದಿನಂತೆ ರಾಜ್ಯವಾಳಿಕೊಂಡು ಸುಖದಿಂದ ಇರಿ. (ದ್ರೌಪದಿಯನ್ನು ನೋಡಿ) ತಾಯಿಾ, ದ್ರೌಪದೀ ! ನೀನು ಬಹು ನೊಂದೆಯಮ್ಮಾ ! ದುರಾತ್ಮರಾದ ನನ್ನ ಮಕ್ಕಳು ನಿನ್ನನ್ನು ಬಹು ಬಾಧೆಪಡಿಸಿದರು. ಇದನ್ನೆಲ್ಲಾ ನಾನೇ ಮಾಡಿದೆನೆಂದು ತಿಳಿದು ಕ್ಷಮಿಸಮ್ಮಾ.

ದ್ರೌಪದಿ.—ಅತ್ತೆಯವರೇ, ನಡೆದುಹೋದುದೆಲ್ಲಾ ಆಗಲೇ ಮರೆತುಹೋಯಿತು. ವಿಧಿವಶದಿಂದ ಪ್ರಾಪ್ತವಾದ ಸಂಕಟಗಳು ಭಗವದನುಗ್ರಹದಿಂದಲೂ, ನನ್ನ ಪೂರ್ವಾರ್ಜಿತ ಪುಣ್ಯದಿಂದಲೂ ಪರಿಹರವಾಗಿ ಮಾನಸಂರಕ್ಷಣೆಯಾಯಿತು. ಒಬ್ಬರು ನಮಗೆ ಕೇಡು ಮಾಡಿದರೆಂದು ಹೇಳುವುದು ಹೆಡ್ಡತನವು. ಪಾಂಡವರನ್ನು ಕರೆಯಿಸಿ ಬಲಾತ್ಕಾರದಿಂದ ಇಷ್ಟು ಅನರ್ಥಗಳಿಗೆ ಅವಕಾಶಕೊಟ್ಟುದು ಭಾವ ನವರ ಬುದ್ಧಿಯೋ, ನನ್ನ ಪ್ರಾರಬ್ಧಕರ್ಮವೋ ಅಥವಾ ದೈವಾಜ್ಞೆ ಯೋ ತಿಳಿಯಲಾರೆನು. ಮುಖ್ಯವಾಗಿ ಆಪನ್ನರನ್ನು ಪರಿಹರಿಸುವವನು ಜಗನ್ನಾಯಕನಾದ ನಾರಾಯಣನೇ ಅಲ್ಲವೇ ?

ಈ ರೀತಿಯಲ್ಲಿ ದ್ರೌಪದಿಯು ಮರ್ಮಭೇದಕವಾಗಿ ಗಾಂಧಾ ರಿಯ ಮಾತಿಗೆ ಪ್ರತ್ಯುತ್ತರಕೊಟ್ಟಳು. ಬಳಿಕ ಪಾಂಡವರು ಭೀಷ್ಮಾದಿ ಹಿರಿಯರಿಂದಲೂ ಧೃತರಾಷ್ಟ್ರವಿದುರರಿಂದಲೂ ಅಪ್ಪಣೆಪಡೆದು, ತಮ್ಮ ರಾಜಧಾನಿಯಾದ ಇಂದ್ರಪ್ರಸ್ಥಕ್ಕೆ ಪ್ರಯಾಣಮಾಡಿದರು.



# ಹನ್ನೆರಡನೆಯ ಸಂಧಿ.

ಸೂ॥ ಇಂದ್ರಪ್ರಸ್ಥಕ್ಕೆ ಹೋಗುತ್ತಿದ್ದ ಪಾಂಡವರನ್ನು ಧೃತರಾಷ್ಟ್ರ ರಾಯನು ತನ್ನ ಮಕ್ಕಳ ಮಾತಿನಮೇಲೆ ಹಿಂದಕ್ಕೆ ಕರೆಯಿಸಿದನು. ಬಳಿಕ ಶಕುನಿಯೊಡನೆ ಯುಧಿಷ್ಠಿರನು ಅನುದ್ಯೂತವಾಡಿ ಅದರಲ್ಲಿಯೂ ಸೋತು, ತಮ್ಮಂದಿರೊಡನೆ ಹೆಂಡತಿಯನ್ನೂ ಕರೆದುಕೊಂಡು, ವನವಾಸಕ್ಕೆ ಹೊರಟನು.

ಪಾಂಡವರು ಧೃತರಾಷ್ಟ್ರನ ಅಪ್ಪಣೆಯಿಂದ ತಮ್ಮ ಚತುರಂಗ ಸೈನ್ಯದೊಂದಿಗೆ ತಮ್ಮ ರಾಜಧಾನಿಯಾದ ಇಂದ್ರಪ್ರಸ್ಥಕ್ಕೆ ಪ್ರಯಾಣಮಾಡಿ ಹೋಗುತ್ತಿದ್ದರು. ಇತ್ತ ಹಸ್ತಿನಾಪುರದಲ್ಲಿ ದುರ್ಯೋಧನನು ಕರ್ಣ ಶಕುನಿಗಳೊಂದಿಗೆ ಸಂಭಾಷಿಸುತ್ತಾ ಕುಳಿತಿರುವಾಗ ದುಶ್ಶಾಸನನು ಆತುರದಿಂದ ಬಂದು ಇಂತೆಂದನು.

ದುಶ್ಶಾ.—ಅಣ್ಣಾ! ಇನ್ನೇನು? ನಮ್ಮ ಪಾಡು ನೆಟ್ಟಗಾಯಿತು. ಆ ಪಾಂಡುಪುತ್ರರನ್ನು ಅಪ್ಪನೂ ಅಮ್ಮನೂ ಮನ್ನಿಸಿ, ಅವರ ರಾಜಧಾನಿಗೆ ಕಳುಹಿಸಿಕೊಟ್ಟರು. ನಾವು ಇಷ್ಟು ಕುತಂತ್ರ ಮಾಡಿದರೂ ಅವರಮೇಲೆ ನಮ್ಮ ಪ್ರಯೋಗವು ಎಳ್ಳಷ್ಟಾದರೂ ನಡೆಯದೆ, ಅವರಿಗೆ ಅನುಕೂಲವೇ ಆಯಿತಲ್ಲಾ! ಮುಂದಿನ ಮಾರ್ಗವೇನು?

ಶಕುನಿ.—(ದುರ್ಯೋಧನನನ್ನು ನೋಡಿ) ಕುರುಪತಿಯೇ! ನಾವು ಪಾಂಡವರಿಂದ ಗೆದ್ದುಕೊಂಡಿದ್ದ ರಾಜ್ಯವೂ ನಮ್ಮ ಕೈತಪ್ಪಿ ಹೋಯಿತು. ಕೌರವರು ಕೆಟ್ಟವರೆಂಬ ಅಪವಾದಕ್ಕೂ ಗುರಿಯಾದೆವು. ಈಗಿನ ಸ್ಥಿತಿಯು ನಮಗೆ ಅನುಕೂಲವಾಗಿದ್ದರೂ ನಿಷ್ಫಲವಾಗಿ ತೋರುತ್ತಿದೆಯಲ್ಲಾ! ಅಯ್ಯೋ! ಆ ಭೀಮಾರ್ಜುನರು ರೋಷ

ದಿಂದ ಹುಬ್ಬು ಗಂಟುಹಾಕಿಕೊಂಡು, ಬುಸುಗುಟ್ಟುತ್ತಾ ಹೋಗುತ್ತಿದ್ದುದನ್ನು ನೆನಸಿಕೊಂಡರೆ ಈಗಲೂ ನನಗೆ ಮೈಜುಮ್ಮೆನ್ನುವುದು. ಮದಿಸಿದ ಆನೆಯನ್ನೂ, ಮುಳಿದಿರುವ ಸಿಂಹವನ್ನೂ ಕೆರಳಿಸಿದ ಹಾಗಾಯಿತು. ರೇಗಿದ ಕೃಷ್ಣಸರ್ಪವನ್ನು ತಂದು ಕೊರಳಿಗೆ ಸುತ್ತಿಕೊಂಡರೆ ಸುಖವಾಗಿ ಬದುಕಬಹುದೆ ? ಇನ್ನು, ಮುಂದೆ ನೆಮ್ಮದಿಯಾಗಿ ಇರಬಹುದೆಂದು ಹೇಳಲಿಕ್ಕೆ ಆಗದು.

ಕರ್ಣ.—ಅಯ್ಯಾ ಮಿತ್ರನೇ ! ಕಪಟದಿಂದ ನೀವು ಜೂಜಿನಲ್ಲಿ ಗೆದ್ದ ರಾಜ್ಯವನ್ನು ಇಟ್ಟುಕೊಂಡು ಏಕಛತ್ರಾಧಿಪತ್ಯದಿಂದ ಆಳಿಕೊಂಡಿದ್ದರೆ ಎಷ್ಟೋ ಸುಖವಾಗಿ ಇದ್ದಿತು. ಅಷ್ಟಕ್ಕೆ ತೃಪ್ತಿಪಡದೆ ಆ ಪಾಂಡವರ ಹೆಂಡತಿಯನ್ನು ಹಿಡಿದು ಎಳೆದು ತಂದುದೂ, ಆಕೆಯ ಸೀರೆಯ ಸೆರಗನ್ನು ಸುಲಿಸಿ, ಮಾನಭಂಗಕ್ಕೆ ಪ್ರಯತ್ನಿಸಿದುದೂ, ಇವು ಹೆಚ್ಚಿನ ಕೆಲಸಗಳು. ಇದರಿಂದಲೇ ಆ ಭೀಮಾರ್ಜುನರ ಕೋಪವು ಇಮ್ಮಡಿಸಿತೆಂದು ತೋರುತ್ತದೆ. ಆ ಪಾಂಚಾಲಿಯು ಸಾಮಾನ್ಯ ಸ್ತ್ರೀಯಲ್ಲ. ಪತಿವ್ರತಾಜನಕ್ಕೆ ಗುರುವಾಗಿರುವಳು. ಅವಳ ಭಾಗ್ಯವಶದಿಂದ ಅವಳು ಉಟ್ಟಿದ್ದ ಒಂದು ಸೀರೆಯೇ ಅಕ್ಷಯವಾಗಿ ಎಷ್ಟೆಷ್ಟು ತೆಗೆದುಹಾಕುತ್ತಾ ಬಂದರೂ ವಸ್ತ್ರರಾಶಿ ಬಿದ್ದಿತೇ ಹೊರತು ಆಕೆಯ ಮಾನರಕ್ಷಣೆಗೆ ಯಾವಭಂಗವೂ ಬಂದಿಲ್ಲ. ನಿಮ್ಮೆಲ್ಲರ ಸಮಕ್ಷದಲ್ಲಿ ನಡೆದ ವಿಷಯಗಳು ಇಷ್ಟುಬೇಗ ಮರೆಯತಕ್ಕವರಲ್ಲ.

ದುರ್ಯೋ.—ಅಯ್ಯಾ ಕರ್ಣನೇ, ನಿನ್ನಮಾತು ನಿಜ. ಈಗಿನ ನಮ್ಮ ಸ್ಥಿತಿಯು ವಿಪರೀತವಾಗಿ ಪರಿಣಮಿಸುವಂತೆಯೇ ತೋರುತ್ತಿದೆ. ಶತ್ರುಗಳಾದ ಪಾಂಡವರನ್ನು ಮೊದಲೇ ಕೆಣಕದಿದ್ದರೆ ಚೆನ್ನಾಗಿದ್ದಿತು. ಈಗ ಏನುತಾನೇ ಮಾಡಲಿಕ್ಕಾಗುವುದು? ಹಿರಿಯರ ಎದುರಿಗೆ

ನಮ್ಮ ಯತ್ನವು ಸಾಗುವುದೆ? ನಮ್ಮ ತಂದೆಯು ಹುಚ್ಚನು, ಸುಮ್ಮ ನಿರದೆ ಆ ದ್ರೌಪದಿಗೆ ವರಗಳನ್ನು ಕೊಟ್ಟುಬಿಟ್ಟನು. ಜಾಣೆಯಾದ ಆ ದ್ರೌಪದಿಯು ಗಂಡಂದಿರ ದಾಸ್ಯವನ್ನು ಬಿಡಿಸಿದುದಲ್ಲದೆ ಸೋತ ಸಕಲೈಶ್ವರ್ಯವನ್ನೂ ಬೇಡಿ ಪಡೆದುಕೊಂಡಳು. ನಮ್ಮ ಅಪರಾಧ ವನ್ನು ಭೀಮಾರ್ಜುನರು ಮರೆಯದೆ ನಮಗೆ ಪ್ರತಿಕ್ರಿಯೆಮಾಡಿ, ತಮ್ಮ ಹಗೆ ತೀರಿಸಿಕೊಳ್ಳುವರೆಂದು ಯೋಚಿಸುತ್ತೇನೆ. ವಿಧಿಲಿಖಿತ ವಿದ್ದಂತೆ ಆಗಲಿ. ನಮ್ಮ ಯತ್ನವೇನು ಇದೆ? 'ಸಪ್ತಮಂ ದೈವ ಚಿಂತನಂ' ಎಂಬಂತೆ ಮಾನುಷಪ್ರಯತ್ನಕ್ಕೆ ಮೀರಿದ ವಿಧಿವಿಲಾಸವು ಹೇಗಿದೆಯೋ ಬಲ್ಲವರಿಲ್ಲ.

ಈ ಪ್ರಕಾರ ಖಿನ್ನಮಾನಸನಾಗಿ ನಿಟ್ಟುಸಿರು ಬಿಡುತ್ತಾ, ತನ್ನ ಹತ್ತಿರ ಕುಳಿತಿದ್ದ ಶಕುನಿಯ ಮುಖವನ್ನು ನೋಡಿದನು.

ಶಕು.—ಎಲೈ ರಾಯನೇ! ಇದಕ್ಕೆ ಚಿಂತಿಸುವುದೇತಕ್ಕೆ? ಹೀಗೆ ಉದಾಸೀನನಾಗಿ ವೈರಾಗ್ಯದಿಂದ ಕುಳಿತುಕೊಂಡರೆ ಕಾರ್ಯ ಸಾಧನೆಯಾಗುವುದೆ? ಪ್ರಬಲರಾದ ಆ ಭೀಮಾರ್ಜುನರು ನಮ್ಮ ಉಪಾ ಯಗಳಿಗೆ ಸಿಕ್ಕದೆ ತಪ್ಪಿಸಿಕೊಂಡು ಹೋದರು. ಬೋನಿನಲ್ಲಿರುವ ಹುಲಿಗಳನ್ನು ತೆಗೆದು ಹೊರಕ್ಕೆಬಿಟ್ಟು ಬಿಟ್ಟಂತೆ ಅವರಿಗೆ ಬಂಧವಿಮೋ ಚನೆಯಾದುದರಿಂದ ಮುಂದೆ ಅವರು ನಿಮ್ಮನ್ನು ನಾಶಮಾಡಿ, ನಿಮ್ಮ ವಂಶವನ್ನೆಲ್ಲಾ ನಿರ್ಮೂಲಮಾಡುವತನಕ ಬಿಡುವಹಾಗಿಲ್ಲ. ಆದುದ ರಿಂದ ಈಗಲೇ ನಿಮ್ಮ ಅಪ್ಪಾಜಿಯವರಿಗೆ ಹೇಳಿಕೊಂಡು, ಊರಿಗೆ ಹೋಗುತ್ತಿರುವ ಆ ಪಾಂಡವರನ್ನು ಹಿಂದಕ್ಕೆ ಕರೆಯಿಸಿದರೆ ಕೆಟ್ಟು ಹೋಗಿರುವ ಕಾರ್ಯವನ್ನು ನೆಟ್ಟಗೆ ಮಾಡಲು ಪ್ರಯತ್ನಿಸಬಹುದು.

ಈ ಮಾತನ್ನು ಕೇಳಿ ಕುರುಪತಿಯು ಸಂತೋಷಪಟ್ಟು, ತಂದೆಯಸಂಗಡ ಹೇಳಿ ಆ ಪಾಂಡವರನ್ನು ಹಿಂದಕ್ಕೆ ಕರೆಯಿಸಿ

ಕೊಂಡು, ಅನುದ್ಯೂತವನ್ನಾಡಿ ಅವರನ್ನು ದೇಶಭ್ರಷ್ಟರನ್ನಾಗಿ ಮಾಡಿಬಿಡಬೇಕೆಂಬ ಅವರ ಅಭಿಪ್ರಾಯವನ್ನು ಒಪ್ಪಿಕೊಂಡನು. ಬಳಿಕ ಆ ನಾಲ್ವರೂ ಧೃತರಾಷ್ಟ್ರನ ಅರಮನೆಗೆ ಹೋಗಿ, ಅಲ್ಲಿ ಗಾಂಧಾರೀ ಸಹಿತನಾಗಿ ಕುಳಿತಿದ್ದ ರಾಜನನ್ನು ನೋಡಿ, ದುರ್ಯೋಧನನು ದುಃಖಿಸುತ್ತಾ ಇಂತೆಂದನು.

ದುರ್ಯೋ.—ಅಪ್ಪಾಜಿಯವರೇ! ಒಂದು ಬಿನ್ನಹವಿದೆ. ದಯಮಾಡಿ ಕೇಳತಕ್ಕದು. ನೀವು ನಮ್ಮ ವಶರಾಗಿದ್ದ ಪಾಂಡವರನ್ನು ದಾಸ್ಯದಿಂದ ಬಿಡುಗಡೆಮಾಡಿ, ಅವರು ಸೋತಿದ್ದ ರಾಜ್ಯವನ್ನು ಅನುಗ್ರಹಿಸಿ, ಅವರಿಗೆ ಹಿಂದಕ್ಕೆ ಕೊಟ್ಟು ಅವರ ರಾಜಧಾನಿಗೆ ಕಳುಹಿಬಿಟ್ಟಿರಿ? ಇದರಿಂದ ನಿಮ್ಮ ಔದಾರ್ಯವೂ ಆ ಪಾಂಡವರ ಸದ್ಗುಣಗಳೂ ಲೋಕಪ್ರಸಿದ್ಧವಾದುವು. ಆದರೆ ನಮಗೆ ಮಾತ್ರ ಸ್ಥಿರವಾದ ದುರ್ಯಶವು ತಲೆಯಮೇಲೆ ಕುಳಿತು ಕೊಂಡಿತು. ಹೊರಕ್ಕೆ ಮುಖತೋರಿಸಿದರೆ ಯಾರೇನು ಆಡಿಕೊಳ್ಳುವರೋ ಎಂಬ ಭಯ ಒಂದುಕಡೆ, ಕೋಪಾಗ್ನಿಯಿಂದ ಕದಡಿದ ಮನಸ್ಸುಳ್ಳ ಭೀಮಾರ್ಜುನರು ಯಾವಾಗ ಬಂದು ತಮ್ಮ ಹಗೆ ತೀರಿಸಿಕೊಳ್ಳುವರೋ ಎಂಬ ಭಯ ಒಂದು ಕಡೆ, ಈ ಸಂಕಟಗಳ ಮಧ್ಯದಲ್ಲಿ ಸಿಕ್ಕಿಬಿದ್ದಿರುವ ನಮಗೆ ಯಾವ ಉಪಾಯವೂ ತೋರದೆ ಇದೆ. ನಿಮಗೆ ಆ ಪಾಂಡವರೇ ಮುಖ್ಯ ಬಂಧುಗಳು. ಧರ್ಮಾತ್ಮರಾದ ಅವರಮೇಲೆ ನಿಮ್ಮ ಪ್ರೀತಿಯೂ, ಕರುಣವೂ ಇರಬೇಕಾದುದು ಸಹಜವೇ. ಎಲ್ಲಿಹೋದರೂ ನಾವೇ ದುಷ್ಟರು. ಅವರನ್ನು ಜೂಜಿನಲ್ಲಿ ಸೋಲಿಸಿ, ಅವರ ಆಸ್ತಿಯನ್ನೆಲ್ಲಾ ಅಪಹರಿಸಿದೆವು. ಪಂಚಪಾಂಡವರನ್ನು ದ್ರೌಪದಿಯೊಂದಿಗೆ ಗೆದ್ದು ಅವರ ಸ್ವಾತಂತ್ರ್ಯವನ್ನು ಕಿತ್ತುಕೊಂಡಿದ್ದೆವು. ನಿಮ್ಮ ಸ್ವಾಭಾವಿಕವಾದ ಮರುಕ

ದಿಂದ ಅವರ ಸ್ವತ್ತುಗಳನ್ನು ಕೊಟ್ಟುಬಿಟ್ಟಿರಿ. ದಾಸ್ಯದಿಂದಲೂ ಅವರನ್ನು ಬಿಡುಗಡೆ ಮಾಡಿದಿರಿ. ಇನ್ನೇನು ಮಾಡಬೇಕಾಗಿದೆ? ನಿನ್ನ ಮಕ್ಕಳಾದ ನಮ್ಮ ಕೈಗಳಿಗೆ ಚಿಪ್ಪನ್ನುಕೊಟ್ಟು ದೇಶಾಂತರ ಕಳುಹಿಬಿಡು. ಅನಾಥರಾದ ನಾವು ಇನ್ನು ಇಲ್ಲಿದ್ದು ಜೀವಿಸಲಾರೆವು. ನಮ್ಮಮೇಲೆ ಯಾವಾಗಲೂ ವಿಷವನ್ನೇ ಕಾರುತ್ತಿರುವ ಆ ಭೀಮಸೇನನು ನಮ್ಮನ್ನು ಪ್ರಾಣದೊಂದಿಗೆ ಉಳಿಸುವನೇ? (ಕಣ್ಣೀರು ಸುರಿಸುತ್ತಾ ಗಾಂಧಾರಿಯ ಕಡೆಗೆ ತಿರುಗಿ) ತಾಯಿೀ ! ಇಗೋ, ಕಡೆಯ ವಂದನವನ್ನು ಸ್ವೀಕರಿಸು. ನೀನು ನಮ್ಮನ್ನು ಹೊತ್ತು ಹೆತ್ತು ಸಾಕಿ ಸಲಹಿ, ಪ್ರೀತಿಯಿಂದ ಬೆಳೆಯಿಸಿದೆ. ನಾವು ಇದುವರೆಗೂ ಏನೋ ಒಂದು ರೀತಿಯಿಂದ ಸುಖವಾಗಿಯೇ ಇದ್ದೆವು. ಈಗ ನಾಗರಹಾವನ್ನು ಕೆಣಕಿದಂತೆ ಆ ಪಾಂಡವರನ್ನು ಕೆಣಕಿ, ಬುಡಕ್ಕೆ ಕೊಡಲಿಹಾಕಿದಂತೆ ಆಯಿತು. ಬಲಶಾಲಿಗಳಾದ ಆ ಭೀಮಾರ್ಜುನರ ಕೋಪಕ್ಕೆ ಸಿಕ್ಕಿ ಇನ್ನು ನಾವು ಬದುಕುವ ಸಂಭವ ಕಾಣಲಿಲ್ಲ. ಎಲ್ಲಿಯಾದರೂ ದೇಶಾಂತರ ಹೊರಟು ಹೋಗಿ ಪ್ರಾಣಸಂರಕ್ಷಣೆಮಾಡಿಕೊಳ್ಳುವೆವು. ನಿಮಗೆ ವಿಶ್ವಾಸಪಾತ್ರರಾದ ಆ ಪಾಂಡವರನ್ನೇ ಕರೆಯಿಸಿಕೊಂಡು ಅವರೊಂದಿಗೆ ನೆಮ್ಮದಿಯಾಗಿ ಇರಬಹುದು. ನಾನು ಇನ್ನೊಂದು ನಿಮಿಷವೂ ಇಲ್ಲಿ ನಿಲ್ಲಲಾರೆನು.

ಈ ಪ್ರಕಾರ ಹೇಳಿ ಆಕೆಯ ಕಾಲುಗಳಮೇಲೆ ಬಿದ್ದು ಹೊರಳಾಡಿದನು. ಆಗ ಧೃತರಾಷ್ಟ್ರನು ಗಾಂಧಾರಿಯನ್ನು ಕುರಿತು ಇಂತೆಂದನು.

ಧೃತ.—ಸಾಧ್ವೀ, ನಿನ್ನ ಮಗನ ಬುದ್ಧಿಯು ಏತಕ್ಕೆ ಹೀಗಾಯಿತು ? ಇವನ ಅವಿವೇಕವು ದಿನದಿನಕ್ಕೂ ಜೆಳೆಯುತ್ತಲೇ

ಬರುವುದಲ್ಲಾ! ಇವನ ಅಕೃತ್ಯಗಳಿಂದ ನಮಗೆ ಈ ಲೋಕದಲ್ಲಿ ಒಳ್ಳೆಯ ಹೆಸರು ಬರುವ ಹಾಗೆ ತೋರುವುದಿಲ್ಲ. ಈ ನಿನ್ನ ಮಗನು ನಮ್ಮ ಕುಲವನ್ನು ಹಾಳುಮಾಡುವುದರಲ್ಲಿ ಅನುಮಾನವಿಲ್ಲ. ಅಷ್ಟೇ ಅಲ್ಲದೆ ನಮ್ಮ ಈ ದೇಶವನ್ನೂ ಸಮಸ್ತ ಭೂಮಂಡಲವನ್ನೂ ದುಃಖಸಮುದ್ರದಲ್ಲಿ ಮುಳುಗಿಸಿ ಬಿಡುವನೆಂದು ಹೆದರುತ್ತೇನೆ. ಏನು ಮಾಡಲಿ? ಎಷ್ಟು ಹೇಳಿದರೂ ಇವನಿಗೆ ಬುದ್ಧಿಯು ಬರುವಹಾಗಿಲ್ಲ. (ಮಗನಕಡೆಗೆ ತಿರುಗಿ) ಮಗೂ, ಸುಯೋಧನಾ, ಏತಕ್ಕೆ ಹೀಗೆ ಅಸೂಯೆಪಡುವೆ? ಆ ಪಾಂಡವರು ನಿನಗೆ ಮಾಡಿದ ದ್ರೋಹವೇನು? ನ್ಯಾಯಮಾರ್ಗದಿಂದ ಅವರು ಅರ್ಧರಾಜ್ಯಕ್ಕೆ ಬಾಧ್ಯರಲ್ಲವೆ? ಅವರೇನು ಅನ್ಯರೆಂದು ಭಾವಿಸಿದೆಯಾ? ಅಷ್ಟುಮಾತ್ರವೇ ಅಲ್ಲ. ಅವರಲ್ಲಿ ಯಾವುದೊಂದು ದುರ್ಗುಣವನ್ನಾದರೂ ಹುಡುಕಿ ನೋಡುವುದಕ್ಕೆ ಸಿಕ್ಕದು. ಅವರ ಭುಜಬಲವನ್ನು ನಿನಗೆ ಹೇಳಬೇಕೆ? ದೇವದಾನವರು ಕೂಡ ಅವರ ಎದುರಿಗೆ ನಿಂತು ಹೋರಾಡಲಾರರು. ಅವರ ನಡತೆಗಳನ್ನು ನೋಡಿದರೆ ಎಂತಹ ಮಹರ್ಷಿಗಳಾದರೂ ನಾಚಿಕೊಳ್ಳುವಂತೆ ಸದಾಚರಣೆಯುಳ್ಳವರು. ಅಂತವರ ಮೇಲೆ ಹಗೆತನವನ್ನು ಬೆಳೆಸಿ, ನೀನು ಯಾವ ಲಾಭವನ್ನು ಪಡೆಯುವೆ? ಕಂದಾ! ಈ ದುಷ್ಟಬುದ್ಧಿಯನ್ನು ಬಿಡಪ್ಪಾ!

ಗಾಂಧಾರಿ —ಮಗುವೇ, ಏತಕ್ಕೆ ಹೀಗೆ ಹಟಹಿಡಿಯುವೆ? ಆ ಪಾಂಡವರು ನಿನಗೆ ಅನ್ಯರಲ್ಲ, ಅವರ ವಿಷಯದಲ್ಲಿ ನೀನು ದ್ವೇಷಬುದ್ಧಿಮಾಡಬೇಡ. ಹಿರಿಯರು ಹೇಳಿದಹಾಗೆ ಕೇಳು. ಈ ದುರ್ಬುದ್ಧಿಯನ್ನು ಬಿಟ್ಟುಬಿಡು.

ದುರ್ಯೋ.—ತಾಯಿ ತಂದೆಗಳಿರಾ! ನಿಮಗೆ ಆ ಪಾಂಡವರಲ್ಲಿಯೇ ವಿಶ್ವಾಸವು ಹೆಚ್ಚು. ಅವರನ್ನು ಕಂಡರೆ ಮನದಲ್ಲಿ ಮರು

ಗುವಿರಿ. ನಿಮ್ಮ ದೃಷ್ಟಿಯಿಂದ ಅವರೇ ಧರ್ಮಾತ್ಮರು, ಸಜ್ಜನರು, ಸದಾಚಾರ ಸಂಪನ್ನರು. ಅವರು ನಿಮಗೆ ವಿಶ್ವಾಸಪಾತ್ರರಾಗಿದ್ದಾರೆ. ನಿಮ್ಮ ಸ್ವಂತಮಕ್ಕಳಾದ ನಾವೆಲ್ಲರೂ ದ್ರೋಹಿಗಳೂ, ಕಪಟಿಗಳೂ ಆಗಿದ್ದೇವೆ. ಇಂತಹ ನೀಚರನ್ನು ನೀವು ಹತ್ತಿರದಲ್ಲಿ ಇಟ್ಟುಕೊಳ್ಳಬಾರದು. ನಮಗೆ ಅಪ್ಪಣೆಕೊಟ್ಟರೆ ಎಲ್ಲಿಯಾದರೂ ಹೋಗಿ ಬದುಕಿಕೊಳ್ಳುವೆವು.

ಹೀಗೆ ಹೇಳಿ ದುರ್ಯೋಧನನು ಮೇಲಕ್ಕೆದ್ದು ಹೊರಟು ಹೋದನು. ಇದನ್ನು ನೋಡಿ ಧೃತರಾಷ್ಟ್ರನ ಮನಸ್ಸು ಕರಗಿತು ಕಣ್ಣುಗಳಿಂದ ನೀರು ಧಾರೆಯಾಗಿ ಸುರಿಯುತ್ತಿದ್ದಿತು. ಆಗ ಅವನು ಪತ್ನಿಯನ್ನು ನೋಡಿ 'ಗಾಂಧಾರೀ ! ನಿನ್ನ ಮಗನನ್ನು ಕರೆದುಕೊಂಡು ಬಾ, ಎಷ್ಟು ಹೇಳಿದರೂ ಅವನು ತನ್ನ ಹುಟ್ಟು ಬುದ್ಧಿಯನ್ನು ಬಿಡನು. ಇನ್ನೊಂದುಸಾರಿ ಹೇಳಿ ನೋಡೋಣ ಎಂದನು.

ಕೂಡಲೇ ಗಾಂಧಾರಿಯು ಎದ್ದುಹೋಗಿ, ಮಗನನ್ನು ಕರೆದು ಕೊಂಡು ಬಂದಳು. ಆಗ ಧೃತರಾಷ್ಟ್ರನು ಅವನನ್ನು ನೋಡಿ ಇಂತೆಂದನು.

ಧೃತ.—ಮಗನೇ, ನಿನಗೆ ಹಿತವಾದ ಮಾತುಗಳನ್ನು ಹೇಳಿದರೆ ನೀನು ಕೋಪಿಸಿಕೊಳ್ಳುವೆ. ನಿನ್ನನ್ನು ತೊರೆದು ನಾವು ಜೀವಿಸಬಲ್ಲೆವೆ? ನಿನ್ನ ಅಭಿಪ್ರಾಯವೇನು? ಹೇಳು.

ದುರ್ಯೋ.—ಅಪ್ಪಾ! ಹೇಳುವುದೇನಿದೆ ? ನಾವು ಆ ಪಾಂಡವರನ್ನು ಬಹಳವಾಗಿ ನೋಯಿಸಿದೆವು. ಮುಂದೆ ಅವರೊಂದಿಗೆ ಹೊಂದಿ ಬಾಳುವುದು ನಮ್ಮಿಂದ ಆಗದು. ಎಂದಿಗಾದರೂ ಅವರು ನಮ್ಮನ್ನು ನಿರ್ಮೂಲಮಾಡದೆ ಬಿಡರು. ಈ ಭೂಮಿಗೆಲ್ಲಾ ಏಕಛತ್ರಾ

ಧಿಪತಿಗಳಾಗಿ ನಾವೇ ಇರಬೇಕು. ಅಥವಾ ಅವರೇ ಚಕ್ರವರ್ತಿಗಳಾಗಿರಬೇಕು; ನಾವು ಎಲ್ಲಿಗಾದರೂ ಹೊರಟುಹೋಗಬೇಕು. ಒಂದು ನೆಲಕ್ಕೆ ಇಬ್ಬರು ಅರಸರಾದರೆ ಬಾಳುವುದು ಕಷ್ಟ.

ಧೃತ.—ಮಗನೇ ಹಾಗಾದರೆ ಈಗ ನೀನು ಹೇಳುವ ಮಾತೇನು ?

ದುರ್ಯೋ.—ನನ್ನ ಅರಿಕೆ ಮತ್ತೇನೂ ಇಲ್ಲವು. ಈಗ ಊರಿಗೆ ಹೋಗುತ್ತಿರುವ ಪಾಂಡವರನ್ನು ಹಿಂದಕ್ಕೆ ಕರೆಸಿಕೊಡಿರಿ. ಇನ್ನೊಂದುಸಾರಿ ಕಡೆಯ ಜೂಜನ್ನಾಡುವೆವು. ಇದರಲ್ಲಿ ಧನಕನಕಾದಿಗಳ ಪಣವೊಂದೂ ಇಡುವುದಿಲ್ಲ. ಸೋತವರು ಹನ್ನೆರಡುವರುಷ ವನವಾಸವನ್ನೂ ಒಂದು ವರುಷ ಅಜ್ಞಾತವಾಸವನ್ನೂ ಮಾಡಬೇಕೆಂದು ಗೊತ್ತುಮಾಡುವೆವು. ಅವರು ಸೋತರೆ ಕಾಡಿಗೆ ಹೊರಟು ಹೋಗುವರು. ನಾವು ಸೋತರೆ ನಾವೇ ಹೊರಟು ಹೋಗುವೆವು. ಅವರೇ ರಾಜ್ಯವನ್ನು ಏಕಾಧಿಪತ್ಯವಾಗಿ ಆಳಿಕೊಂಡಿರಲಿ. ನೀನು ಇದಕ್ಕೆ ಸಮ್ಮತಿಸಿ, ಖಂಡಿತವಾಗಿ ಅವರನ್ನು ಕರೆಸಿಕೊಡು. ಇಲ್ಲದಿದ್ದರೆ ಇಂತಹ ಪಣದಲ್ಲಿ ನಾವೇ ಸೋತುಹೋದೆನೆಂದು ತಿಳಿದು, ಈಗಲೇ ನಮಗೆ ವನವಾಸಕ್ಕೆ ಅನುಜ್ಞೆಕೊಟ್ಟುಬಿಡು.

ಆಗ ಅಲ್ಲಿಯೇ ಕುಳಿತಿದ್ದ ಶಕುನಿಯು ರಾಜನನ್ನು ನೋಡಿ 'ಭಾವಾ! ನಿಮ್ಮ ಮಕ್ಕಳ ಕ್ಷೇಮಚಿಂತೆಯು ನಿಮಗೆ ಅಗತ್ಯವಾಗಿದ್ದರೆ ಈ ದುರ್ಯೋಧನನ ಇಷ್ಟದಂತೆ ನಡಿಸಬಹುದು. ಇದು ವಿಹಿತವೆಂದು ನನಗೂ ತೋರುತ್ತದೆ. ವಿಳಂಬಮಾಡಿದರೆ ಕೆಲಸವು ಕೆಡುವುದು, ಇದು ನಿಮಗೂ ಸಮಂಜಸವಾಗಿ ತೋರಿದರೆ ಯುಕ್ತಾನುಸಾರ ನಡಿಸಬಹುದು.' ಎಂದನು.

ಧೃತರಾಷ್ಟ್ರನಿಗೆ ಆಗ ಯಾವ ಆಲೋಚನೆಯೂ ತೋರದೆ

ಹೋಯಿತು. ಭೀಷ್ಮಾದಿ ಗುರುಜನರನ್ನು ಕರೆಯಿಸಿ, ಅವರ ಯೋಚನೆಯನ್ನು ಕೇಳಲಿಕ್ಕೆಸುದಾ ಅವಕಾಶಕೊಡದಂತೆ ಶಕುನಿ ದುರ್ಯೋಧನರು ತ್ವರೆಗೊಳಿಸುತ್ತಾ ಬಂದರು. ಅನಂತರ ಧೃತರಾಷ್ಟ್ರನು ಸ್ವಲ್ಪಹೊತ್ತು ಯೋಚಿಸಿ, ಪ್ರಾತಿಕಾಮಿಯನ್ನು ಕರೆದು 'ಎಲೈ ಸೂತನೇ, ನೀನು ಈಗಲೇ ಹೋಗಿ, ತಮ್ಮ ರಾಜಧಾನಿಗೆ ಹೋಗುತ್ತಿರುವ ಆ ಪಾಂಡವರನ್ನು ಹಿಂದಕ್ಕೆ ಕರೆದುಕೊಂಡುಬಾ. ನನ್ನ ಆಜ್ಞೆಯಾಗಿರುವುದೆಂದು ಯುಧಿಷ್ಠಿರನಿಗೆ ಹೇಳು.' ಎಂದು ಕಳುಹಿದನು. ಅವನು ಜಾಗ್ರತೆಯಲ್ಲಿ ಪ್ರಯಾಣಮಾಡಿ ಹೊರಟನು.

ಇತ್ತ ವಿದುರಭೀಷ್ಮಾದಿಗಳಿಗೆ ಈ ಸಮಾಚಾರವು ತಿಳಿಯಿತು. ಅವರು ಮನಸ್ಸಿನಲ್ಲಿ ಬಹಳವಾಗಿ ಚಿಂತಿಸಿ, 'ಆಹಾ! ವೃದ್ಧನಾದ ಧೃತರಾಷ್ಟ್ರನಿಗೆ ಇಂತಹ ವಿಪರೀತಬುದ್ಧಿ ಹುಟ್ಟಬಹುದೆ? ಅವನು ಮುಂದಿನ ಆಗುಹೋಗುಗಳನ್ನು ಯೋಚಿಸದೆ ಹೀಗೆ ಪಾಂಡವರನ್ನು ಹಿಂದಕ್ಕೆ ಕರೆಯಿಸಬಹುದೆ? ಹಸಿದ ಹೆಬ್ಬುಲಿಗಳನ್ನು ಕೆಣಕುವಹಾಗೆ ಕೋಪಾವಿಷ್ಟರಾಗಿ ಹೋಗುತ್ತಿರುವ ಭೀಮಾರ್ಜುನರನ್ನು ಪುನಃ ಕೆಣಕಿ, ಇವರು ಬದುಕುವರೆ? ಆ ಪಾಂಡವರಿಗೆ ಸಾಕ್ಷಾತ್ತಾಗಿ ದೈವಸಹಾಯವೇ ಇರುವುದೆಂದು ತಿಳಿದೂಕೂಡ ಈ ಯೋಚನೆ ಮಾಡುವರೆ? ಇವರ ಕುತಂತ್ರಗಳಿಗೆ ಹಿಂದೆ ಆದ ಅವಮಾನವನ್ನೂ ಫಲವನ್ನೂ ಪ್ರತ್ಯಕ್ಷದಲ್ಲಿ ನೋಡಿದ್ದರೂ ಇವರಿಗೆ ಇನ್ನೂ ಬುದ್ಧಿಬಂದಿಲ್ಲವೆ! ಕಾಲವಶದಿಂದ ಈ ಕೌರವರಿಗೆ ಇಂತಹ ದುರ್ಬುದ್ಧಿಹುಟ್ಟುತ್ತಿದೆ. ಇದಕ್ಕೆ ನಾವೇನುಮಾಡಬಲ್ಲೆವು!' ಎಂದು ಚಿಂತಿಸುತ್ತಿದ್ದರು.

ಪಾಂಡವರನ್ನು ಕರೆಯಲಿಕ್ಕೆ ಹೋದ ಪ್ರಾತಿಕಾಮಿಯು ಬಹು ವೇಗದಿಂದ ಪ್ರಯಾಣಮಾಡಿ, ನಾಲ್ಕಾರು ದಿನಗಳಲ್ಲಿಯೇ ಅವ

ರಿರುವ ಸ್ಥಳವನ್ನು ಸೇರಿ, ರಾಜನಾದ ಯುಧಿಷ್ಠಿರನ ವೇಳೆಯನ್ನ
ರಿತು, ಆತನನ್ನು ಕಂಡು, ಧೃತರಾಷ್ಟ್ರನ ಆಜ್ಞೆಯನ್ನು ತಿಳಿಸಿದನು.
ಆ ರಾಯನು ತಮ್ಮಂದಿರೊಡನೆ ಆಲೋಚನೆಮಾಡಿ ಈ ವೇಳೆಯಲ್ಲಿ
ಧೃತರಾಷ್ಟ್ರನ ಅಪ್ಪಣೆಯಂತೆ ಹಿಂದಿರುಗಿ ಹೋಗುವುದೇ ಲೇಸೆಂ
ದನು. ಭೀಮಾದಿಗಳು ಇದರಿಂದ ಅನರ್ಥಗಳುಂಟಾಗುವುದೆಂದು
ಅರಿಕೆಮಾಡಿದರೂ ಯುಧಿಷ್ಠಿರನು ತನ್ನ ಸಂಕಲ್ಪವನ್ನು ಬಿಡಲಿಲ್ಲ.
"ಹಿರಿಯನೂ ನಮ್ಮ ಹಿತಚಿಂತಕನೂ ಆದ ಧೃತರಾಷ್ಟ್ರನು ಕರೆಯಿ
ಸಿದರೆ ಆತನ ಮಾತನ್ನು ಉಲ್ಲಂಘಿಸಿ ನಡೆಯುವುದು ನಮಗೆ ಧರ್ಮ
ವಲ್ಲವು. ಆತನ ಅಪ್ಪಣೆಯಂತೆ ಹೋಗಿ ನೋಡೋಣ. ಇದರಿಂದ
ಹಿತವೇ ಆಗಲಿ, ಅಹಿತವೇ ಆಗಲಿ, ಬಂದುದನ್ನು ಅನುಭವಿಸಲಿಕ್ಕೆ
ಸಿದ್ಧನಾಗಿದ್ದೇನೆ. ಭೀಮಾರ್ಜುನರಿರಾ, ನನ್ನಮಾತಿನಲ್ಲಿ ವಿಶ್ವಾಸವಿ
ದ್ದರೆ ನೀವೂ ಬರಬಹುದು." ಎಂದು ಹೇಳಿದನು.

ಅಷ್ಟಕ್ಕೆ ತಮ್ಮಂದಿರು 'ಆರ್ಯನೇ, ನಾವು ನಿನ್ನ ಪಾದ ಸೇವ
ಕರು. ನೀನು ಹೇಳಿದಂತೆ ಶಿರಸಾವಹಿಸಿ ನಡೆಯಲು ಸಿದ್ಧರಾಗಿ
ದ್ದೇವೆ. ನಮಗೆ ಯಾವ ಸ್ವಾತಂತ್ರ್ಯವೂ ಇಲ್ಲ. ' ನಿನ್ನ ಇಷ್ಟದಂ
ತೆಯೇ ಆಗಬಹುದು.' ಎಂದು ಒಪ್ಪಿದರು. ಬಳಿಕ ಅವರೆಲ್ಲರೂ
ಇಂದ್ರಪ್ರಸ್ಥದ ದಾರಿಯನ್ನು ಬಿಟ್ಟು ಹಸ್ತಿನಾವತಿಯ ಕಡೆಗೆ ತಿರುಗಿ
ಜಾಗ್ರತೆಯಲ್ಲಿ ಬಂದು ಸೇರಿದರು. ಪಾಂಡವರು ಹಿಂದಿರುಗಿ ಬಂದ
ರೆಂಬ ಸುದ್ದಿಯನ್ನು ಕೇಳಿದಕೂಡಲೇ ಮಕ್ಕಳ ಮೋಹಕ್ಕೆ ಸಿಕ್ಕಿದ
ಧೃತರಾಷ್ಟ್ರನು ಉಚಿತ ಮರ್ಯಾದೆಗಳಿಂದ ಅವರನ್ನು ಬರಮಾಡಿ
ಕೊಂಡು, ಅವರನ್ನು ನೋಡಿ ಇಂತೆಂದನು.

ಧೃತ.—ಎಲೈ ಧರ್ಮಪುತ್ರನೇ, ನೀವು ಜೂಜಿನಲ್ಲಿ ಸೋತು
ಮನಸ್ಸಿನಲ್ಲಿ ಬಲು ನೊಂದಿರುವಿರಿ. ಇಂತಹ ಚಿಂತೆಯಿಂದ ನಿಮ್ಮನ್ನು

ಕಳುಹಿದುದು ನನಗೂ ಗಾಂಧಾರಿಗೂ ಬಹು ವ್ಯಸನಕರವಾಗಿದೆ. ನನ್ನ ಮಕ್ಕಳಾದ ದುರ್ಯೋಧನಾದಿಗಳುಕೂಡ ಕೋಪಗೊಂಡಿರುವ ನಿಮ್ಮನ್ನು ಸಮಾಧಾನಪಡಿಸಿ, ಕೆಲವು ದಿನಗಳು ನಿಮ್ಮನ್ನಿಲ್ಲಿಯೇ ಇರಿಸಿಕೊಂಡಿದ್ದು, ನಿಮ್ಮ ಮನಃಕಷಾಯವನ್ನು ಬಿಡಿಸಬೇಕೆಂದು ಅಪೇಕ್ಷಿಸುತ್ತಿದ್ದಾರೆ. ಆದುದರಿಂದ ಮರಳಿ ನಿಮ್ಮನ್ನು ಹಿಂದಕ್ಕೆ ಕರೆಯಿಸಿದೆನು. ನೀವು ಕೌರವರೊಂದಿಗೆ ಒಂದಾಗಿ ಬೆರೆದು ಇನ್ನೂ ಕೆಲವು ದಿನಗಳು ಇಲ್ಲಿಯೇ ಇದ್ದು ಅವರ ಸತ್ಕಾರವನ್ನು ಪಡೆದು ವಿನೋದದಿಂದ ಕಾಲಕಳೆಯುತ್ತೀರಿ.

ಎಂದು ಹೇಳಿದನು. ಯುಧಿಷ್ಠಿರನು ನಿಮ್ಮ ಅಪ್ಪಣೆಯಂತೆ ನಡೆಯುವೆನೆಂದು ಒಪ್ಪಿಕೊಂಡು ಅಲ್ಲಿಯೇ ನಿಂತನು.

ನಾಲ್ಕಾರು ದಿನಗಳು ಕಳೆದಮೇಲೆ ಒಂದುದಿನ ಭೀಷ್ಮ ದ್ರೋಣಾದಿ ವೀರರೆಲ್ಲಾ ಸಭೆಯಲ್ಲಿ ಕುಳಿತಿರುವಾಗ ಶಕುನಿಯು ಯುಧಿಷ್ಠಿರನ ಸಂಗಡ ಅನುದ್ಯೂತದ ಪ್ರಸ್ತಾಪವನ್ನೆತ್ತಿದನು. ಆಗ ದುರ್ಯೋಧನನು ಯುಧಿಷ್ಠಿರನನ್ನು ನೋಡಿ, 'ಅಣ್ಣಯ್ಯಾ, ಹಿಂದಿನ ಜೂಜಾಟದಲ್ಲಿ ನಿಮ್ಮ ಆಟವು ಅನೇಕಸಾರಿ ಕೆಟ್ಟುಹೋಗಿ ನಿಮ್ಮ ಮನಸ್ಸಿಗೆ ತುಂಬ ವ್ಯಥೆಯಾಗಿರಬಹುದು. ಈ ಕೊರತೆಯನ್ನು ಪರಿಹಾರ ಮಾಡಬೇಕಾದರೆ ನಮ್ಮ ಶಕುನಿಮಾವಯ್ಯನು ಹೇಳಿದಂತೆ ಅನುದ್ಯೂತವಾಡಿ ಕೊನೆಯ ಸೋಲುಗೆಲುವುಗಳನ್ನು ಪರೀಕ್ಷಿಸಿ ಬಿಡಬಹುದು. ಇದರಲ್ಲಿ ಹಿಂದಿನ ಆಟಗಳಂತೆ ದ್ವೇಷಾಸೂಯೆಗಳಿಗೆ ಅವಕಾಶ ಕೊಡುವುದಿಲ್ಲ. ಈ ಆಟದ ಪಣವು ಒಂದೇ, ನಾವು ಸೋತರೆ ಹನ್ನೆರಡು ವರುಷಗಳು ವನವಾಸಮಾಡಿ, ಒಂದು ವರುಷ ಅಜ್ಞಾತವಾಸಮಾಡುವೆವು. ನೀವು ಸೋತರೂ ಹಾಗೆಯೇ ಮಾಡಿರಿ.' ಎಂದನು. ಧೃತರಾಷ್ಟ್ರನು ಯಾವಮಾತನ್ನೂ ಹೇಳದೆ ಮೌನ

ವಾಗಿದ್ದನು. ಯುಧಿಷ್ಠಿರನು ಆ ರಾಜನನ್ನು ನೋಡಿ, ,,ಆರ್ಯನೇ ಸುಯೋಧನನ ಅಭಿಪ್ರಾಯಕ್ಕೆ ನೀನು ಸಮ್ಮತಿಸಿದಂತೆ ಮೌನವಾಗಿ ರುವೆ. ಅನುದ್ಯೂತವಾಡಬೇಕೆಂದು ನೀನು ಅಪ್ಪಣೆ ಕೊಟ್ಟರೆ ಆಟಕ್ಕೆ ಕುಳ್ಳಿರುವೆನು'' ಎಂದನು. ಧೃತರಾಷ್ಟ್ರನು ತನ್ನ ಮಕ್ಕಳ ಮೋಹಕ್ಕೆ ಬದ್ಧನಾಗಿ ಆಡಬಹುದೆಂದು ಅನುಮತಿಕೊಟ್ಟನು. ಅಷ್ಟ ರಲ್ಲಿ ದುರ್ಯೋಧನನು ಪಗಡೆಯ ಆಟದ ಸಾಮಾನುಗಳನ್ನು ಮುಂ ದಕ್ಕೆ ಸರಿಸಿದನು. ಆಗ ಯುಧಿಷ್ಠಿರನಿಗೆ ಹಿಂದು ಮುಂದು ತೋರದೆ, ವಿಧಿವಿಲಾಸವಿದ್ದಂತೆ ಆಗಲಿ ಎಂದು ಆಟಕ್ಕೆ ಕುಳಿತನು.

ಆಡಲಿಕ್ಕೆ ಆರಂಭಿಸಿದರೆ ಸೋಲು ಗೆಲವುಗಳಿಗೆ ಸಾವಕಾಶವೇ ಇಲ್ಲ. ಶಕುನಿಯು ಒಂದೇಸಾರಿ ದಾಳವನ್ನು ಹಾಕಿ ,,ಇಗೋ ಗೆದ್ದೆನು. ಈ ಆಟದಲ್ಲಿಯೂ ಯುಧಿಷ್ಠಿರನೇ ಸೋತುಬಿಟ್ಟನು. ನಮ್ಮರಸ ನಾದ ಸುಯೋಧನನೇ ಏಕಛತ್ರಾಧಿಪತಿಯಾದನು. ಪಟ್ಟಣದಲ್ಲೆಲ್ಲಾ ಗುಡಿಕಟ್ಟಿಸಿ ದಂಡೋರೆ ಹೊಡೆಯಿಸಿರಿ'' ಎಂದು ಕೂಗಿಕೊಂಡನು.

ವಿಧಿಯು ಪ್ರತ್ಯಕ್ಷವಾಗಿ ಬಂದು ಫಲಗಳನ್ನು ಕೊಡುವುದಿಲ್ಲ, ಮತ್ತು ಅದು ಗೋಪಾಲಕನು ಕೈಯಲ್ಲಿ ದೊಣ್ಣೆಯನ್ನು ಹಿಡಿದು ಕೊಂಡು ಬಂದು ದನಗಳನ್ನು ರಕ್ಷಿಸುವಂತೆ ಜನರನ್ನು ರಕ್ಷಿಸುವುದಿಲ್ಲ. ದತ್ತಸ್ವಾತಂತ್ರ್ಯವುಳ್ಳ ಮನುಷ್ಯನ ವಿಷಯದಲ್ಲಿ ಅದು ಪ್ರವರ್ತಿಸುವ ರೀತಿಯೇ ಬೇರೆ. ಅದು ವಿಪತ್ಕಾಲದಲ್ಲಿ ಜೀವಿಯ ಧರ್ಮಾನುಗುಣ ವಾಗಿ ಮೊದಲು ಬುದ್ಧಿಯನ್ನು ಪ್ರೇರಿಸುವುದು. ಅದರಂತೆ ಮನು ಷ್ಯನು ಕೆಲಸಮಾಡಿ ತಕ್ಕ ಫಲವನ್ನು ಅನುಭವಿಸುವಂತೆ ಮಾಡಿಸು ವುದು. ಎಷ್ಟುಬಲವಿದ್ದರೇನು? ಎಂತಹ ಐಶ್ವರ್ಯವಿದ್ದರೇನು? ಎಷ್ಟರ ಬುದ್ಧಿ ಇದ್ದರೇನು? ವಿಧಿ ಲಿಖಿತದಂತೆ ನಡೆಯಬೇಕಾದುದು ತಪ್ಪದೆ ನಡೆದುಹೋಗುತ್ತಿರುವುದು. ಅದನ್ನು ತಪ್ಪಿಸಲಿಕ್ಕೆ ಯಾ

ರಿಂದಲೂ ಸಾಧ್ಯವಲ್ಲವು. ಲಂಕಾಧಿಪತಿಯಾದ ರಾವಣನು ಸಾಮಾನ್ಯನೆ? ಅವನು ಬ್ರಹ್ಮನ ಸಾಕ್ಷಾತ್ಪ್ರಪೌತ್ರನು. ಧನಾಧಿಪತಿಯಾದ ಕುಬೇರನ ಸಹೋದರನು. ಶೂರನಾದ ಕುಂಭಕರ್ಣನ ಅಣ್ಣನು. ತ್ರಿಲೋಕಾಧಿಪತಿಯನ್ನು ಗೆದ್ದ ಇಂದ್ರಜಿತುವಿನ ತಂದೆಯು. ಸಮುದ್ರಮಧ್ಯದಲ್ಲಿ ದುರ್ಗಮವಾದ ಪಟ್ಟಣದಲ್ಲಿ ಅವನು ವಾಸ. ಇಂದ್ರಾದಿ ದಿಕ್ಪಾಲರೆಲ್ಲಾ ಅವನ ಮನೆಯ ಚಾಕರರಾಗಿದ್ದರಂತೆ! ಇಂತಹ ಬಲಶಾಲಿಯಾಗಿದ್ದರೂ ಆ ರಾವಣನು ಸೀತೆಯನ್ನು ಮೋಹಿಸಿ ಅವಳನ್ನು ತಂದು ಸೆರೆಯಲ್ಲಿಟ್ಟು, ಆ ದುಷ್ಕರ್ಮದೋಷದಿಂದ ಪುತ್ರಮಿತ್ರಾಮಾತ್ಯಸಹಿತವಾಗಿ ನಾಶಹೊಂದಿದನು. ಸಾಕ್ಷಾದ್ರಾಮಚಂದ್ರನು ಕೂಡ ರಾಕ್ಷಸನ ಮಾಯೆಯಿದೆಂದು ತಡೆದ ಲಕ್ಷ್ಮಣನ ಮಾತನ್ನು ಕೇಳದೆ ಮಾಯಾಮೃಗವನ್ನು ಹಿಡಿಯಲಿಕ್ಕೆ ಹೋಗಿ ಕಷ್ಟಗಳಿಗೆ ಗುರಿಯಾದನು. ನಳನು ವಿಧಿಪ್ರೇರಣೆಯಿಂದ ಪುಷ್ಕರನೊಂದಿಗೆ ಜೂಜಾಡಿ, ಸರ್ವಸ್ವವನ್ನೂ ಕಳೆದುಕೊಂಡು ಕಾಡಿಗೆ ಹೋಗಿ, ಪತ್ನಿಯನ್ನು ಒಂಟಿಗಳಾಗಿ ಬಿಟ್ಟುಬಿಟ್ಟು ದೇಶಾಂತರ ಹೊರಟುಹೋಗಿ ಬಹು ಕಷ್ಟಪಟ್ಟನು. ಹೀಗೆಯೇ ಹರಿಶ್ಚಂದ್ರಾದಿ ಸಾರ್ವಭೌಮರನ್ನು ಕೂಡ ವಿಧಿಯು ಹಿಡಿದು ಜಗ್ಗಿಸಿಬಿಟ್ಟಿತು. ಭವಿತವ್ಯತೆಗೆ ಅನುಸಾರವಾಗಿ ತಕ್ಕ ಸಾಧನಗಳು ಒಂದೊಂದಾಗಿ ಒದಗಿ ತಕ್ಕ ಫಲಗಳುಂಟಾಗುವುವೇ ಹೊರತು ಮನುಷ್ಯನ ಬುದ್ಧಿಯಿಂದಲಾಗಲಿ, ಪ್ರಯತ್ನದಿಂದಲಾಗಲಿ ಕೆಲಸವಾಗುತ್ತಿರುವುದೆಂದು ಹೇಳುವುದು ಸರಿಯಲ್ಲವು.

ಬಳಿಕಲಾ ಪಾಂಡವರು ವನವಾಸಕ್ಕೆ ಸಿದ್ಧರಾದರು, ಕೃಷ್ಣಾಜಿನೋತ್ತರೀಯಗಳನ್ನು ಧರಿಸಿಕೊಂಡರು. ಅಧಿಕಾರಹೀನರಾಗಿ ಕಾಡಿಗೆ ಹೊರಟ ಆ ಪಾಂಡವರನ್ನು ನೋಡಿ ಸ್ವಭಾವವಾಗಿ ದುಷ್ಟ

ಬುದ್ಧಿಯುಳ್ಳ ದುಶ್ಶಾಸನನು ತಾನು ಮೊದಲು ದ್ರೌಪದಿಗೆ ಅಪಮಾನ ಮಾಡಲಿಕ್ಕೆ ಹೋಗಿ, ತಾನೇ ಅವಮಾನಪಟ್ಟುದನ್ನು ಕೂಡ ಮರೆತು ಸಭೆಯಕಡೆ ತಿರುಗಿ, ಎಲ್ಲರಿಗೂ ಕೇಳಿಸುವಂತೆ ಇಂತೆಂದನು.

ದೈವವಶದಿಂದ ಪಾಂಡವರು ರಾಜ್ಯಕೋಶಾದಿಗಳನ್ನು ಕಳೆದುಕೊಂಡು ಕಾಡಿಗೆ ಹೊರಟರು. ಇನ್ನು ಧೃತರಾಷ್ಟ್ರನ ಮಕ್ಕಳು ಏಕಛತ್ರಾಧಿಪತಿಗಳಾಗಿ ರಾಜ್ಯವನ್ನಾಳಬಹುದು. ಈ ಪಾಂಡವರು ಅಧಿಕಾರಮದದಿಂದ ನಮ್ಮಣ್ಣನನ್ನು ಹಾಸ್ಯಮಾಡಿದ್ದರಂತೆ ! ಅವರು ಈಗ ಸಕಲೈಶ್ವರ್ಯಗಳನ್ನೂ ಕಳೆದುಕೊಂಡು ಕಾಡುಪಾಲಾಗಿ ಹೋಗುವ ಸ್ಥಿತಿಗೆ ಬಂದರು. ಜನರು ಐಶ್ವರ್ಯಬಂದಾಗ ಇತರರನ್ನು ಪರಿಹಾಸ್ಯಮಾಡಿದರೆ ಇದೇಗತಿಗೆ ಬರುವರಲ್ಲವೆ? ದ್ರುಪದರಾಯನಿಗೆ ಬುದ್ಧಿ ಕಡಿಮೆ, ನಪುಂಸಕರಾದ ಈ ಪಾಂಡವರಿಗೆ ಮಗಳನ್ನು ಕೊಟ್ಟು, ಈ ದುಃಖವನ್ನ ನೋಡಬೇಕಾಯಿತು. ಪಾಪ "ಎಲಾ ದ್ರೌಪದೀ! ನೀನು ನಾರುಸೀರೆಗಳನ್ನುಟ್ಟುಕೊಂಡು ಇವರೊಂದಿಗೆ ಕಾಡಿನಲ್ಲಿ ಅಲೆಯುತ್ತಾ ಏತಕ್ಕೆಕಷ್ಟಪಡಬೇಕು? ಕೌರವರಲ್ಲಿ ಯಾರನ್ನಾದರೂ ಒಬ್ಬನನ್ನು ಪತಿಯಾಗಿ ವರಿಸಿ, ಸಕಲಭೋಗಗಳನ್ನು ಅನುಭವಿಸಿಕೊಂಡು ಇಲ್ಲಿಯೇ ಸೌಖ್ಯದಿಂದ ಇರು. ಮುನಿಗಳಂತೆ ವನವಾಸಿಗಳಾದ ಈ ಹೇಡಿಗಳನ್ನು' ಏಕೆ ಅನುಸರಿಸಿ ಹೋಗುತ್ತೀಯೆ!' ಎಂದನು. ಈ ಮಾತುಗಳನ್ನು ಕೇಳಿ ಪರಾಕ್ರಮಿಯಾದ ಭೀಮಸೇನನಿಗೆ ಬಹುರೋಷಬಂತು. ಹಿಮವತ್ಪರ್ವತದ ಗುಹೆಯಲ್ಲಿದ್ದ ಸಿಂಹವು ತನ್ನನ್ನು ಹಾಸ್ಯಮಾಡುವ ನರಿಯನ್ನು ಕಂಡು ಕೋಪದಿಂದ ಗರ್ಜಿಸುವಂತೆ ಉಚ್ಚಧ್ವನಿಯಿಂದ ಅವನನ್ನು ಕುರಿತು ಇಂತೆಂದನು

ಎಲಾ ನೀಚಾ! ಶಕುನಿಯು ಕಪಟದಿಂದ ಅಧರ್ಮವಾಗಿ

ಜೂಜನಾಡಿಸಿ ಐಶ್ವರ್ಯವನ್ನಪಹರಿಸಿದ ನೀನು ಬುದ್ಧಿಯಿಲ್ಲದೆ ಇಂತಹ ಮಾತುಗಳನ್ನಾಡಬೇಡ. ಇಂದಿಗೆ ಮನ್ನಿಸಿರುವೆನು. ಸಾಕು. ನಿಲ್ಲಿಸು. ಮುಂದೆ ಹೀಗೆನುಡಿದರೆ ನಿನ್ನನ್ನೂ ನಿನ್ನ ರಕ್ಷಕರನ್ನೂ ಯುದ್ಧದಲ್ಲಿ ಯಮಪುರಿಗೆ ಕಳುಹದೆಬಿಡೆನು.

ಹೀಗೆ ಗರ್ಜಿಸಿದ ಭೀಮನನ್ನು ನೋಡಿ ದುಶ್ಶಾಸನನು ನಗುತ್ತಾ ನಾಚಿಕೆಯಿಲ್ಲದವನಾಗಿ "ಎಲಾ ಹೋರೀ ಹೋರೀ" ಎಂದು ಹೇಳಿಕೊಂಡು ಕುಣಿದಾಡಿದನು. ಆಗ ಭೀಮಸೇನನು ಅತ್ಯಾಗ್ರಹದಿಂದ ಸಭಿಕರನ್ನು ನೋಡಿ ಇಂತೆಂದನು.

ಮಹನೀಯರೇ! ದುರಾತ್ಮನಾದ ಈ ದುಶ್ಶಾಸನನು ಮಾಡಿದ ಅಪರಾಧಗಳನ್ನೂ ಇವನಾಡಿದ ಅವಾಚ್ಯವಾದ ಮಾತುಗಳನ್ನೂ ನೀವು ಮೊದಲಿಂದಲೂ ನೋಡಿಯೂ ಕೇಳಿಯೂ ಇರುವಿರಿ. ಧರ್ಮಪಾಶಬದ್ಧನಾದ ಅಣ್ಣನ ಅಜ್ಞಾನುಸಾರ ನಾನು ಸೈರಿಸಿಕೊಂಡಿದ್ದೇನೆ. ಆದರೂ ಮುಂದೆ ನಡೆಯುವ ಘೋರಯುದ್ಧದಲ್ಲಿ ಇವನನ್ನು ಮಡುಹಿ ಇವನ ಬಿಸಿರಕ್ತವನ್ನು ಕುಡಿಯುವೆನು. ಇವನ ಕರುಳನ್ನು ಬಗಿದು ಆ ರಕ್ತದಿಂದ ದ್ರೌಪದಿಯ ಮುಂಡೇಕೂದಲುಗಳನ್ನು ನೆನೆಯಿಸಿ, ಇವನ ಹಲ್ಲುಗಳೆಂಬ ಬಾಚಣಿಗೆಯಿಂದ ಬಾಚಿ, ಕುರುಳನ್ನು ಕಟ್ಟುವೆನು. ಇವನ ತಮ್ಮಂದಿರನ್ನೆಲ್ಲಾ ಯಮಪುರಿಗೆ ಕಳುವುದಲ್ಲದೆ ಪತಿವ್ರತೆಯಾದ ಪಾಂಚಾಲಿಗೆ ತನ್ನ ತೊಡೆ ತೋರಿಸಿ ಹಾಸ್ಯಮಾಡಿದ ದುರಾತ್ಮನಾದ ದುರ್ಯೋಧನನ ತೊಡೆಗಳನ್ನು ಈ ಗದೆಯಿಂದ ಕಡಿದು ಹಾಕುವೆನು. ಕೌರವರನ್ನೆಲ್ಲಾ ಕಡಿದು ಹಾಕದಿದ್ದರೆ ನಾನು ವಾಯುಪುತ್ರನೇ ಅಲ್ಲ. ಸೂರ್ಯನು ತನ್ನ ಉಷ್ಣಕಿರಣಗಳನ್ನಾದರೂ ಬಿಡಬಹುದು. ಅಗ್ನಿಯು ತಣ್ಣಗಾದರೂ ಆಗಬಹುದು. ಹಿಮಾಚಲವೂ ಚಲಿಸಲೂಬಹುದು. ಈ ಭೀಮಸೇ

ನನ ಪ್ರತಿಜ್ಞೆಯು ಎಂದಿಗೂ ವ್ಯರ್ಥವಾಗಲಿಕ್ಕಿಲ್ಲ.

ಈ ಪ್ರಕಾರ ಪ್ರತಿಜ್ಞೆಮಾಡಿ ತನ್ನ ತೋಳುಗಳನ್ನು ಬಲವಾಗಿ ಹೊಡೆಯುತ್ತಿದ್ದನು. ಅದನ್ನು ಕೇಳಿ ಕರ್ಣನು ಅವನನ್ನು ಕುರಿತು, ''ಭೀಮಾ! ವ್ಯರ್ಥವಾದ ಇಂತಹ ಪ್ರತಿಜ್ಞೆಗಳಿಂದ ಗೌರವವನ್ನೇಕೆ ಕಳೆದುಕೊಳ್ಳುವೆ? ಕೇಳಲಾರೆನು ಸಾಕು. ಬಾಯಿ ಮುಚ್ಚು'' ಪ್ರಕೃತದಲ್ಲಿ ನಿಮ್ಮ ಅಣ್ಣನಂತೆ ವನವಾಸ ಹೋಗಿ ಪ್ರತಿಜ್ಞೆಯನ್ನು ಉಳಿಸಿಕೋ. ಈ ಅವಧಿಯಲ್ಲಿ ನೀನು ಉಳಿದು ಬಂದ ಮೇಲೆ ನಿನ್ನ ಈ ಬಣಹರಟೆಯನ್ನು ಎಷ್ಟರಮಟ್ಟಿಗೆ ನೆರವೇರಿಸುವೆಯೋ ನೋಡದೆ ಹೋಗುವೆನೆ? ಎಂದನು. ಅದನ್ನು ಕೇಳಿ ಅರ್ಜುನನಿಗೆ ಬಹುರೋಷವು ಬಂದಿತು. ಅವನು ಕರ್ಣನನ್ನು ನೋಡಿ ''ಎಲಾ ಸೂತಪುತ್ರಾ! ನೀನು ದುಶ್ಯಾಸನನ ಗುಂಪಿಗೆ ಸೇರಿದವನೂ ಅಂಬಿಗನ ಮಗನೂ ಅಲ್ಲವೆ! ಗರ್ವಿಯಾದ ನೀನು ಯಾವಾಗಲೂ ನನಗೆ ಸಮವಾರೂ ಇಲ್ಲವೆಂದು ಬೆರೆಯುತ್ತಲೇ ಇರುವೆ. ನಿನ್ನ ಅಹಂಕಾರವನ್ನು ಮುರಿಯಲಿಕ್ಕೆ ನನ್ನ ಹೊರತು ಮತ್ತಾರಿಂದಲೂ ಆಗದು. ಇಗೋ! ನನ್ನ ಪ್ರತಿಜ್ಞೆಯನ್ನು ಎಲ್ಲರೂ ಲಾಲಿಸಲಿ.

ನನ್ನ ಅಣ್ಣನಾದ ಭೀಮನು ಕೌರವ ಕುಲವನ್ನೇ ನಾಶಮಾಡುವುದಾಗಿ ಈ ಮೊದಲೇ ಪ್ರತಿಜ್ಞೆಮಾಡಿಬಿಟ್ಟಿರುವುದರಿಂದ ಇವರಿಗೆ ಸಹಾಯಕರಾದವರನ್ನು ನಿಗ್ರಹಿಸುವ ಅಲ್ಪಭಾರವನ್ನಾದರೂ ನಾವು ವಹಿಸಿಕೊಳ್ಳುವುದೇ ಧರ್ಮವು ಪೂರ್ವದಿಂದಲೂ ಈ ಕರ್ಣನು ನನಗೆ ಸಮಪಕ್ಷಿಯಾಗಿ ನಿಂತು, ಕುರುಪತಿಯನ್ನು ತನ್ನ ಆಶ್ರಯದಲ್ಲಿಟ್ಟುಕೊಂಡು ರಕ್ಷಿಸುತ್ತಿರುವನು. ಇವನನ್ನು ಕೊಂದಹೊರತು ಉಳಿದವರ ನಿಗ್ರಹಕ್ಕೆ ಅವಕಾಶವಿಲ್ಲ. ಇನ್ನು ಹದಿಮೂರು

ವರುಷಗಳು ಕಳೆದ ಕೂಡಲೇ ಇಲ್ಲಿಗೆ ಬರುವೆವು. ನಮ್ಮ ರಾಜ್ಯವನ್ನು ಹಿಂದಿರುಗಿ ಕೊಡದಿದ್ದರೆ ಘೋರಯುದ್ಧವು ಜರುಗುವುದು. ಆ ಯುದ್ಧದಲ್ಲಿ ಇವನ ಪ್ರಾಣಗಳನ್ನು ತೆಗೆದುಕೊಳ್ಳಲಿಕ್ಕೆ ಈಗಲೇ ಸಂಚಕಾರವಿದೆಂದು ಭೂಮಿಯನ್ನು ತನ್ನ ಕೈಯಿಂದ ಅಪ್ಪಳಿಸಿದನು. ಆಗ ಶಕುನಿಯು ಕಪಟದ ನುಡಿಗಳಿಂದ ಅರ್ಜುನನಿಗೆ ಸಮಾಧಾನ ಹೇಳಲಿಕ್ಕೆ ಬಂದನು. ಅವನನ್ನು ನೋಡಿ ಮಾದ್ರೀನಂದನನಾದ ಸಹದೇವನು ‹‹ಎಲಾ ಮೂಢಾತ್ಮನಾದ ಶಕುನಿಯೇ! ಕಾಪಟ್ಯದಿಂದ ಮರುಳುಗೊಳಿಸಿ, ಈ ಜೂಜನ್ನಾಡಿಸಿ, ಗಾಂಧಾರಕುಲಕ್ಕೇನೇ ಕಳಂಕವನ್ನು ತಂದ ನಿನ್ನನ್ನು ನನ್ನ ಕ್ರೂರಬಾಣಗಳಿಂದ ಸಂಹಾರ ಮಾಡಿಬಿಡುವೆನು. ನಮ್ಮ ಅಣ್ಣಂದಿರು ಮಾಡಿರುವ ಪ್ರತಿಜ್ಞೆಗಳ ಜತೆಗೆ ಇದನ್ನೂ ಸಭಿಕರು ಬರೆದುಕೊಳ್ಳಲಿ ಎಂದನು.

ಆಗ ನಕುಲ ನಿಂತೆಂದನು ಮಹಾಜನರೇ, ಅಂತಃಪುರವರ್ತಿನಿಯಾದ ಪಾಂಚಾಲಿಯನ್ನು ಸಭೆಗೆ ಎಳೆದುತಂದು ಅವಮಾನಮಾಡಿದ ಈ ದುರಾತ್ಮರನ್ನೆಲ್ಲಾ ನಮ್ಮ ಅಣ್ಣಯ್ಯನೇ ಕೊಂದುಬಿಡುವನು. ನಾನು ಕೂಡ ಈ ಧೃತರಾಷ್ಟ್ರಪುತ್ರರಲ್ಲಿ ಕೈಗೆಸಿಕ್ಕಿದವರನ್ನೆಲ್ಲಾ ಸಂಹಾರಮಾಡಿ, ಇವರಕುಲವನ್ನೇ ಜಾಗ್ರತೆಯಲ್ಲಿ ಈ ಭೂಮಂಡಲದಲ್ಲಿ ಇಲ್ಲವೆನಿಸುವೆನು.

ಈ ಪ್ರಕಾರವಾಗಿ ಅವರೆಲ್ಲರೂ ತಮ್ಮ ಕೈಗಳನ್ನೆತ್ತಿ ಪ್ರತಿಜ್ಞೆಮಾಡಿ ಧೃತರಾಷ್ಟ್ರನ ಬಳಿಗೆ ಬಂದರು. ಆಗ ಯುಧಿಷ್ಠಿರನು ಸಭೆಯಲ್ಲಿ ಇದ್ದವರನ್ನೆಲ್ಲಾ ಪ್ರತ್ಯೇಕವಾಗಿ ಆಮಂತ್ರಿಸಿ ಇಂತೆಂದನು. ಎಲೈ ಕುರುಪಿತಾಮಹನೆ. ಪೂಜ್ಯನಾದ ಧೃತರಾಷ್ಟ್ರನೆ. ಸೋಮದತ್ತ ಮಹಾರಾಜನೆ, ಬಾಹ್ಲಿಕನೆ, ಗುರುಗಳಾದ ದ್ರೋಣಾಚಾರ್ಯರೇ, ಕೃಪಾಚಾರ್ಯರೇ, ಅಶ್ವತ್ಥಾಮಾಚಾರ್ಯರೇ, ಎಲೈ ಧರ್ಮಜ್ಞನಾ

ದ ವಿದುರನೇ, ದುರ್ಯೋಧನಾದಿ ಸಹೋದರರಿರಾ, ಎಲೈ ಯುಯುತ್ಸು ವೇ, ಸಂಜಯನೇ, ಉಳಿದ ಸಭಾಸದರೇ ಎಲ್ಲರೂ ಕೇಳಿರಿ. ನಿಮ್ಮ ಸ ನ್ನಿಧಿಯಲ್ಲಿ ಅರಿಕೆಮಾಡುತ್ತೇನೆ, ನೀವುಗಳು ದಯಮಾಡಿ ನನಗೆ ವನ ವಾಸಕ್ಕೆ ಅಪ್ಪಣೆಕೊಡಿರಿ. ಅವಧಿತೀರವ ಪರ್ಯಂತವಿದ್ದು ನನ್ನ ಪ್ರತಿ ಜ್ಞೆಯು ಪೂರಯಿಸಿದ ಮೇಲೆ ಮರಳಿ ಬಂದು ನಿಮ್ಮಗಳ ದರ್ಶನವನ್ನು ಪಡೆಯುವೆನು.

ಸಭಿಕರೆಲ್ಲರೂ ಈ ಮಾತನ್ನು ಕೇಳಿ ನಾಚಿಕೆಯಿಂದ ಯಾವ ಉತ್ತರವನ್ನೂ ಕೊಡಲಾರದೆ ತಲೆಬಾಗಿ, ಮನಸ್ಸಿನಲ್ಲಿಯೇ ಅವರಿಗೆ ಮಂಗಳಾಶಾಸನವನ್ನು ಮಾಡಿದರು. ಬಳಿಕ ವಿದುರನು ಯುಧಿಷ್ಠಿರ ನನ್ನು ಕುರಿತು ಇಂತೆಂದನು.

ಎಲೈ ಧರ್ಮರಾಯನೆ, ಮುದುಕಿಯಾದ ಈ ಕುಂತೀದೇವಿಯು ಕಾಡಿಗೆ ಬರಲಾರಳು, ಸುಕುಮಾರಿಯಾಗಿ ಕಷ್ಟಪಡಲಾರದೆ ಇರುವ ಈಕೆಯು ನೀವು ಬರುವ ತನಕ ನನ್ನ ಮನೆಯಲ್ಲಿಯೇ ಇರಲಿ, ನೀವು ಹೋಗಿ ನಿಮ್ಮ ಸಮಯವನ್ನು ನೆರವೇರಿಸಿಕೊಂಡು ಬನ್ನಿರಿ, ನಿಮಗೆ ಆರೋಗ್ಯವೂ ಸುಖವೂ ಎಲ್ಲಾ ಕಡೆಗಳಲ್ಲಿಯೂ ಉಂಟಾಗಲಿ.

ಈ ಮಾತನ್ನು ಕೇಳಿ ಪಾಂಡವರು ,, ಎಲೈ ವಿದುರನೆ, ನೀನು ನಮ್ಮ ತಂದೆಯ ಸಮಾನನು. ಯಾವಾಗಲೂ ನಮ್ಮ ಹಿತವನ್ನೇ ಬಯಸುತ್ತಿರುವನು. ನಿನ್ನ ಇಷ್ಟದಂತೆಯೇ ಮಾಡಬಹುದು. ಗುರು ವಿಗೆ ಸಮಾನನಾದ ನೀನು ಆಜ್ಞಾಪಿಸಿದಂತೆ ನಡೆಯುವುದಕ್ಕೆ ಸಿದ್ಧ ವಾಗಿದ್ದೇವೆ. ನಿನ್ನ ಮಾತಿಗೆ ಎದುರಾಡತಕ್ಕವರಲ್ಲ, ನಮಗೆ ತಕ್ಕ ಬುದ್ಧಿವಾದವನ್ನು ಹೇಳು.

ವಿದು:— ಯುಧಿಷ್ಠಿರನೇ ನನ್ನ ಮಾತಿನಲ್ಲಿ ವಿಶ್ವಾಸವಿಡುವ ವಾದರೆ ಹೇಳುವೆನು. ಕೇಳು. ಅಧರ್ಮದಿಂದ ಸಂಪಾದಿಸಿದ ಸಂಪತ್ತು

ದಕ್ಕುವುದಿಲ್ಲ. ಸೋತವರು ಕೆಡುವುದೂ ಇಲ್ಲ. ನೀನು ಧರ್ಮ ಸೂಕ್ಷ್ಮಗಳನ್ನು ಬಲ್ಲವನು. ಯುದ್ಧದಲ್ಲಿ ಅರ್ಜುನನು ಎಂದೆಂದಿಗೂ ಜಯಶೀಲನಾಗಿಯೇ ಇರುವನು. ಭೀಮಸೇನನು ಶತ್ರುಸಂಹಾರ ಮಾಡುವದರಲ್ಲಿ ಸ್ವಲ್ಪವೂ ಹಿಂಜರಿಯತಕ್ಕವನಲ್ಲ. ನಕುಲನು ಅರ್ಥಸಂಗ್ರಹ ಮಾಡುವುದರಲ್ಲಿ ನಿಪುಣನು. ಸಹದೇವನು ಕಾರ್ಯಗಳನ್ನು ಉಚಿತವರಿತು ಮಾಡತಕ್ಕವನು. ನಿಮ್ಮ ಪುರೋಹಿತನಾದ ಧೌಮ್ಯನು ಒಳ್ಳೆಯ ಬ್ರಹ್ಮವೇದಿಯು. ನಿಮ್ಮ ಸಹ ಧರ್ಮಚಾರಿಣಿಯಾದ ದ್ರೌಪದಿಯು ಧರ್ಮಾರ್ಥಕುಶಲಳಾಗಿದ್ದಾಳೆ, ವೀರರಾಗಿ ಜಯಿಸಲಸಾಧ್ಯರಾದ ನಿಮ್ಮನ್ನು ಯಾರುತಾನೇ ಎದುರಿಸಿ ಬದುಕಬಲ್ಲರು? ನಿಮಗೆ ಎಲ್ಲಾ ಕಡೆಗಳಲ್ಲಿಯೂ ಒಳ್ಳೆಯದೇ ಆಗುತ್ತಿರುವುದು. ವೇದವ್ಯಾಸರಿಂದಲೂ ಶ್ರೀ ಕೃಷ್ಣನಿಂದಲೂ ನಾರದನಿಂದಲೂ ಸಮಸ್ತ ನೀತಿಗಳನ್ನೂ ಕೇಳಿತಿಳಿದಿರುವೆ. ಪುರೂರವನಂತೆ ಬುದ್ಧಿಶಕ್ತಿಗಳನ್ನುಳ್ಳ ನೀನು ಧರ್ಮವನ್ನು ಕಾಪಾಡಿಕೊಂಡು ಸಕಲೈಶ್ವರ್ಯಗಳನ್ನೂ ಪಡೆಯುವೆ. ನಿಮಗೆ ಸರ್ವಮಂಗಳವೂ ಉಂಟಾಗಲಿ. ಮುಂದೆ ಆರೋಗ್ಯವಾಗಿ ಬಂದು ಸೇರುವ ನಿಮ್ಮನ್ನು ನೋಡುವೆನು. ಎಂತಹ ಕಷ್ಟಕಾಲದಲ್ಲಿಯೂ ಧರ್ಮವನ್ನು ಬಿಡಬೇಡ. ಸತ್ಯಪ್ರತಿಜ್ಞರಾಗಿ ಬರುವ ನಿಮ್ಮಗಳನ್ನು ಪುನಃ ನೋಡುವೆನು.

ಈ ಪ್ರಕಾರವಾಗಿ ಹೇಳಿದ ವಿದುರನ ಮಾತುಗಳನ್ನು ಕೇಳಿ ಯುಧಿಷ್ಠಿರನು ನಿನ್ನ ಅಪ್ಪಣೆಯಂತೆ ನಡೆಯುವೆನೆಂದು ಹೇಳಿ ಆತನಿಗೆ ನಮಸ್ಕರಿಸಿ ವನವಾಸಕ್ಕೆ ಹೊರಟನು. ಆಗ ಪಾಂಡವರ ಅಂತಃಪುರದಲ್ಲಿ ಆರ್ತಧ್ವನಿಯು ತುಂಬಿ ಹೋಯಿತು. ಕುಂತಿಯು ಅತ್ಯಂತ ವ್ಯಸನದಿಂದ ಮಕ್ಕಳನ್ನು ಆಶೀರ್ವದಿಸಿ ದ್ರೌಪದಿಯನ್ನು ನೋಡಿ ಮರುಕದಿಂದ ಇಂತೆಂದಳು.

ಮಗಳೇ ಇಂತಹ ಮಹದ್ವ್ಯಸನವು ಪ್ರಾಪ್ತವಾಯಿತೆಂದು ದುಃಖಿಸಬೇಡ. ಶೀಲವತಿಯಾದ ನೀನು ಸ್ತ್ರೀ ಧರ್ಮಗಳನ್ನೆಲ್ಲಾ ಬಲ್ಲೆ. ನಿನಗೆಬುದ್ಧಿಯ ಮಾತುಗಳನ್ನು ಹೊಸದಾಗಿಹೇಳಬೇಕಾದುದು ಅಗತ್ಯವಿಲ್ಲ: ಎಲೌ ಸಾಧ್ವೀಮಣಿಯೇ, ಸುಗುಣಸಂಪನ್ನೆಯಾದ ನಿನ್ನ ದೆಸೆಯಿಂದ ಉಭಯಕುಲಗಳೂ ಪಾವನವಾಗಿವೆ. ಭಾಗ್ಯ ಹೀನರಾದ ಕೌರವರು ನಿನ್ನ ಕೋಪಾಗ್ನಿಯಿಂದ ಭಸ್ಮವಾಗಿ ಹೋಗುವರು. ನಿನಗೆ ಮಾರ್ಗದಲ್ಲಿ ಸಮಸ್ತ ಕಷ್ಟಗಳೂ ನಿವಾರಣೆಯಾಗಲಿ, ನೀನು ಧರ್ಮಪರಿಪಾಲಕಳಾಗಿ ಶ್ರೇಯಸ್ಸನ್ನು ಹೊಂದು.

ಈ ಮಾತನ್ನು ಕೇಳಿ ದ್ರೌಪದಿಯು "ತಾಯಿ, ನಿಮ್ಮ ಅಪ್ಪಣೆಯಂತೆ ಶಿರಸಾವಹಿಸಿ ನಡೆಯುವೆನು" ಎಂದು ಹೇಳಿ ಪುನಃ ಕುಂತಿಗೆ ನಮಸ್ಕರಿಸಿದಳು. ಆ ಕುಂತೀದೇವಿಯು ಕೆದರಿದ ಮುಂಡೇಕೂದಲುಗಳುಳ್ಳ ಸೊಸೆಯನ್ನೂ ವಸ್ತ್ರಾಭರಣಗಳನ್ನು ಕಳೆದುಕೊಂಡು ನಾರುಮಡಿಗಳನ್ನುಟ್ಟಿರುವ ತನ್ನಮಕ್ಕಳನ್ನೂ ನೋಡಿ ಬಹುದುಃಖದಿಂದ ಗೋಳಾಡಿದಳು. ಆಕೆಯು ದೈವಭಕ್ತರಾಗಿಯೂ ಸಮರ್ಥರಾಗಿಯೂ, ಇದ್ದರೂ ಕಾಂತಿಹೀನರಾಗಿ ಹೊರಟಿರುವ ತನ್ನಮಕ್ಕಳನ್ನು ನೋಡಿ "ಅಯ್ಯೋ? ದೈವವಿಲಾಸವು ಈ ಗತಿಗಾಯಿತೆ? ನೀವು ಯಾವ ಅಪರಾಧ ಮಾಡಿದಿರಪ್ಪಾ! ನನ್ನ ದೌರ್ಭಾಗ್ಯದಿಂದ ನಿಮಗಿಂತಹ ಕಷ್ಟಪ್ರಾಪ್ತವಾಯಿತೆ? ಸುಕುಮಾರರಾದ ನೀವು ವನವಾಸದ ಕ್ಲೇಶವನ್ನು ಹೇಗೆ ಸಹಿಸುವಿರಿ? ವೀರ್ಯ, ಸತ್ಯ, ತೇಜಸ್ಸು, ವಿದ್ಯಾ ಬುದ್ಧಿಗಳಲ್ಲಿ ನಿಮ್ಮ ಸಮಾನರು ಈ ಪೃಥ್ವಿಯಲ್ಲಿಯೇ ಇಲ್ಲವಲ್ಲಾ! ಪ್ರಾಪ್ತವಾದ ರಾಜ್ಯವು ಕೂಡ ನಿಮಗೆ ದಕ್ಕದೆ ಕೈತಪ್ಪಿಹೋಯಿತಲ್ಲಾ? ಈ ಕಷ್ಟಗಳನ್ನು ನೋಡುವುದಕ್ಕಾಗಿಯೇ ದೈವವು ನನ್ನನ್ನು ಈ ಲೋಕದಲ್ಲಿ

ಇರಿಸಿತೆ? ಪುಣ್ಯವತಿಯಾದ ಮಾದ್ರಿಯೇ ಧನ್ಯಳು. ಅವಳು ಯಾವ ಕಷ್ಟವನ್ನೂ ನೋಡದೆ ಪತಿಯೊಂದಿಗೆ ಸಹಗಮನವಮಾಡಿದಳು. ಮಕ್ಕಳಿರಾ, ನೀವು ಮರಳಿ ಬರುವತನಕ ನಾನು ದುಃಖದಿಂದ ಜೀವಿಸಿರಬಲ್ಲೆನೆ? ಎಲೈ ಕೃಷ್ಣನೆ, ನಿನಗೂ ಕರುಣವಿಲ್ಲದೆ ಹೋಯಿತೆ? ಅನಾಥರಕ್ಷಕನಾಗಿಯೂ ದೀನದಯಾಳುವಾಗಿಯೂ ಇರುವ ನೀನು ನಿನ್ನ ಪ್ರಾಣಗಳೆಂದು ತಿಳಿದಿರುವ ಈ ಪಾಂಡವರನ್ನು ಇಂತಹ ಕಷ್ಟಕಾಲದಲ್ಲಿ ಕೈಬಿಡಬಹುದೆ? ಧರ್ಮಾತ್ಮರಾದ ಇವರ ವಿಷಯದಲ್ಲಿ ಸ್ವಲ್ಪವಾದರೂ ಕರುಣಿಸಬಾರದೆ? ಎಲೈ ಪಾಂಡುರಾಯನೆ! ನೀನು ಎಲ್ಲಿದ್ದೀಯೆ? ನಿನ್ನ ಮಕ್ಕಳ ಅವಸ್ಥೆಯನ್ನು ನೋಡಿ ಏತಕ್ಕೆ ಉಪೇಕ್ಷಿಸುತ್ತಿರುವೆ? ಹಾಹಾ! ಎಲೈ ಸಹದೇವನೆ, ನಿಮ್ಮ ಅಣ್ಣಂದಿರು ಅರಣ್ಯಕ್ಕೆ ಹೋದರೆ ಹೋಗಲಿ. ನೀನು ಮಾತ್ರ ಇಲ್ಲಿಯೇ ಇದ್ದು ನನ್ನನ್ನು ಕಾಪಾಡಿಕೊಂಡಿರಪ್ಪಾ!" ಎಂದು ಪ್ರಲಾಪಿಸುತ್ತಿದ್ದಳು.

ಹೀಗೆ ಅಳುತ್ತಿರುವ ಕುಂತಿಯನ್ನು ನೋಡಿ ಯುಧಿಷ್ಠಿರಾದಿಗಳು ಮೃದುಮಧುರ ವಾಕ್ಯಗಳಿಂದ ಆಕೆಯನ್ನು ಸಮಾಧಾನಗೊಳಿಸಿ, ಕಾಡಿಗೆ ಹೊರಟರು. ವಿದುರನು ಕುಂತಿಯನ್ನು ಸಾಂತ್ವವಚನಗಳಿಂದ ಸಂತೈಸಿ ಆಕೆಯನ್ನು ತನ್ನ ಮನೆಗೆ ಕಳುಹಿಸಿಕೊಟ್ಟು ಪಾಂಡವರ ಹಿಂದೆ ಸ್ವಲ್ಪದೂರಹೋದನು. ಧೃತರಾಷ್ಟ್ರನ ಹೆಂಡತಿಯೂ, ಸೊಸೆಯರೂ ಇತರ ಸ್ತ್ರೀಯರೂ ಗೋಳಾಡುತ್ತಿದ್ದರು. ಧೃತರಾಷ್ಟ್ರನುಕೂಡ ಅವರ ಅಗಲಿಕೆಗಾಗಿ ದುಃಖಿಸುತ್ತಿದ್ದನು. ವಿದುರನು ಪಾಂಡವರ ಹಿಂದೆ ಸ್ವಲ್ಪದೂರ ಹೋಗಿ, ಅವರಿಗೆ ತಕ್ಕ

ಬುದ್ಧಿವಾದಗಳನ್ನು ಹೇಳಿ ಅವರಿಗೆ ಅಪ್ಪಣೆಕೊಟ್ಟು ಕಳುಹಿ ಧೃತರಾಷ್ಟ್ರನ ಮನೆಗೆ ಬಂದನು.

ಧೃತರಾಷ್ಟ್ರನು ಆ ವಿದುರನನ್ನು ನೋಡಿ, ಪಾಂಡವರನ್ನಗಲಿದ ದುಃಖದಿಂದ ಅವರ ಸ್ಥಿತಿಯನ್ನು ತಿಳಿಯಬೇಕೆಂದು ಯೋಚಿಸಿ, ಆತನನ್ನು ಕುರಿತು ಇಂತೆಂದನು.

ಧೃತ.--ತಮ್ಮಾ, ಪಾಂಡವರಹಿಂದೆ ಎಷ್ಟುದೂರ ಹೋಗಿದ್ದೆ? ಅವರು ಸುರಕ್ಷಿತರಾಗಿರುವರೆ ? ಯುಧಿಷ್ಠಿರನು ಇಲ್ಲಿಂದ ಹೇಗೆ ಪ್ರಯಾಣಮಾಡಿದನು ? ಭೀಮಾರ್ಜುನರು ಹೇಗೆ ಹೋಗುತ್ತಿದ್ದರು? ನಕುಲಸಹದೇವರು ಏನೆಂದರು? ಸಾಧ್ವಿಯಾದ ದ್ರೌಪದಿಯು ಹೇಗೆ ನಡೆಯುತ್ತಿದ್ದಳು? ಧೌಮ್ಯನು ಸುಮ್ಮನೆ ಹೋಗುತ್ತಿದ್ದನೆ? ಇವುಗಳನ್ನು ವಿವರವಾಗಿ ತಿಳಿಸು.

ವಿದು.--ಎಲೈ ರಾಯನೇ ನಾನು ಪಾಂಡವರ ಸಂಗಡ ಸ್ವಲ್ಪದೂರಹೋಗಿ ಸಾಗಕಳುಹಿಬಂದೆನು. ಅವರು ಸೌಖ್ಯವಾಗಿಯೇ ಇರುವರು. ಅವರು ಹೋಗುತ್ತಿದ್ದ ಸ್ಥಿತಿಯನ್ನು ಹೇಳುವೆನು. ಕೇಳು. ಕುಂತೀಪುತ್ರನಾದ ಧರ್ಮರಾಯನು ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಹೋಗುತ್ತಿದ್ದನು. ಭೀಮಸೇನನು ವಿಶಾಲವಾಗಿಯೂ ಬಲವಾಗಿಯೂ ಇರುವ ತನ್ನ ಬಾಹುಗಳನ್ನು ನೋಡಿಕೊಳ್ಳುತ್ತಾ ಹೋದನು, ಬಲಶಾಲಿಯಾದ ಅರ್ಜುನನು ಎಡಗೈಯಲ್ಲಿ ಮರಳನ್ನು ತುಂಬಿಕೊಂಡು ಬಲಗೈಯಿಂದ ಚೆಲ್ಲುತ್ತಾ ಹೋದನು, ಸುಂದರಾಂಗನಾದ ನಕುಲನು ಧೂಳಿಯಿಂದ ತನ್ನ ಅವಯವಗಳನ್ನೆಲ್ಲಾ ಮುಚ್ಚಿಕೊಂಡು ಪ್ರಯಾಣ ಮಾಡುತ್ತಿದ್ದನು, ಸಹದೇವನು ತನ್ನ ಮುಖಕ್ಕೆ ಇಜ್ಜಲು ಬಳಿದುಕೊಂಡು ಹೋಗುತ್ತಿದ್ದನು, ಪತಿವ್ರತೆಯಾದ ದ್ರೌಪದಿಯು ಮುಂಗೇಕೂದ

ಲುಗಳಿಂದ ಮುಖವನ್ನು ಮುಚ್ಚಿಕೊಂಡು ಅಳುತ್ತಾ ಪ್ರಯಾಣ ಮಾಡಿದಳು, ಅವರ ಪುರೋಹಿತನಾದ ಧೌಮ್ಯನು ರೌದ್ರಗಳಾದ ಯಮದೇವತಾಕವಾದ ಮಂತ್ರಗಳನ್ನು ಹಾಡುತ್ತಾ ಕೈಯಲ್ಲಿ ದರ್ಭೆಯನ್ನು ಹಿಡಿದುಕೊಂಡು ಹೋಗುತ್ತಿದ್ದನು.

ಧೃತ.-ಎಲೈ ವಿದುರನೇ ಆ ಪಾಂಡವರು ಬೇರೆಬೇರೆ ರೂಪ ಚೇಷ್ಟೆಗಳಿಂದ ಪ್ರಯಾಣಮಾಡಿದುದಕ್ಕೆ ಕಾರಣಗಳೇನೆಂಬು ದನ್ನು ದಯಮಾಡಿ ತಿಳಿಸಬೇಕು.

ವಿದು.—ಎಲೈ ರಾಯನೆ, ನಿನ್ನ ಮಕ್ಕಳು ಕಪಟದ್ಯೂತದಿಂ ದ ಆ ಪಾಂಡವರ ಸರ್ವಸ್ವವನ್ನೂ ಅಪಹರಿಸಿದರು. ಇದರಿಂದ ಆಯು ಧಿಷ್ಠಿರನಿಗೆ ಮಹತ್ತರವಾದ ಕೋಪವುಂಟಾಗಿದೆ. ಈ ಕ್ರೋಧದ ಕಣ್ಣುಗಳಿಂದ ಯಾವ ವಸ್ತುವನ್ನು ನೋಡಿದರೂ ಅವು ಕೂಡಲೇ ಆತನ ಧರ್ಮ ಬಲದಿಂದ ಭಸ್ಮವಾಗಿ ಹೋಗುವುವು. ಪ್ರಾಣಿಹಿಂಸೆಯ ನ್ನು ಸಹಿಸಲೊಲ್ಲದ ಆ ಮಹಾತ್ಮನು ತನ್ನಿಂದ ಯಾವ ಪ್ರಾಣಿಗೂ ತೊಂದರೆಯುಂಟಾಗಬಾರದೆಂದು ತನ್ನ ಮುಖವನ್ನು ವಸ್ತ್ರದಿಂದ ಮುಚ್ಚಿಕೊಂಡು ಹೋದನು. ಭೀಮನು ಅನ್ಯಾದೃಶವಾದ ಬಲವು ಳ್ಳ ತನ್ನ ಬಾಹುಗಳನ್ನು ಶತ್ರುನಾಶಕ್ಕೇನೇ ಉಪಯೋಗಿಸುವನೋ ಎಂಬಂತೆ ವಿಶಾಲವಾಗಿಯೂ ದೃಢವಾಗಿಯೂ ಇರುವ ಭುಜಗಳನ್ನು ತೋರಿಸುತ್ತಾ ಹೋದನು, ಅರ್ಜುನನು ಯುದ್ಧದಲ್ಲಿ ತನಗೆ ಯಾ ರೂ ಇದಿರಿಲ್ಲವೆಂತಲೂ ತನ್ನ ಅಕ್ಷಯ ತೂಣೀರದಲ್ಲಿ ಅಮೋಘವಾ ದ ದಿವ್ಯಾಸ್ತ್ರಗಳು ಮರಳು ಕುಪ್ಪೆಯಂತೆ ಅಸಂಖ್ಯಾತವಾಗಿವೆಯೆಂತ ಲೂ ಅವುಗಳನ್ನು ಹೇಗೆ ತೆಗೆದು ಶತ್ರುಗಳಮೇಲೆ ಉಪಯೋಗಿಸಿ ಸಂಹರಿಸುವೆನೆಂತಲೂ, ಮರಳನ್ನು ಚೆಲ್ಲುತ್ತಾ ಹೋದನು. ಸಹ ದೇವನು ಕೌರವರ ಮೇಲಣ ಕೋಪದಿಂದ “ ಛೀ ನೀಚರಿರಾ.

ಈಗ ಕಾಪಟ್ಯದಿಂದ ನಮ್ಮ ಸರ್ವಸ್ವವನ್ನೂ ಅಪಹರಿಸಿದಿರಿ! ಮುಂದೆ ಯುದ್ಧದಲ್ಲಿ ನಿಮ್ಮ ಮುಖಗಳಿಗೆಲ್ಲಾ ಮಸೀಬಳಿಯುವೆನೆಂದು ತೋರಿಸುವನೋ ಎಂಬಂತೆ ಮುಖಕ್ಕೆ ಮಸಿಬಳಿದುಕೊಂಡಿದ್ದನು. ನಕುಲನು ಶತ್ರುಗಳನ್ನೆಲ್ಲಾ ದಿಗಂಬರರನ್ನಾಗಿ ಧೂಳಿ ಪಟ ಮಾಡದೆ ಬಿಡೆನೆಂದು ಸರ್ವಾಂಗವನ್ನೂ ಧೂಳಿಯಿಂದ ಮುಚ್ಚಿಕೊಂಡು ಹೋದನು. ಏಕವಸ್ತ್ರಧರಳಾಗಿಯೂ, ಮುಕ್ತಕೇಶಿನಿಯಾಗಿಯೂ ರಜಸ್ವಲೆಯಾಗಿಯೂ ಇರುವ ದ್ರೌಪದಿಯು ಆರ್ತ ಧ್ವನಿಯಿಂದ ಮುಂದೆ ಹದಿನಾಲ್ಕನೆಯ ವರುಷದಲ್ಲಿ ನನಗೆ ತೊಂದರೆ ಪಡಿಸಿದ ದುರಾತ್ಮರ ಹೆಂಡಿರು ತಮ್ಮ ಪತಿಗಳನ್ನೂ ಮಕ್ಕಳನ್ನೂ ಯುದ್ಧದಲ್ಲಿ ಕಳೆದುಕೊಂಡು ಹೀಗೆ ಅಳುತ್ತಾ ಹೋಗುವರೆಂದು ತೋರಿಸುತ್ತಿದ್ದಳು. ಧೌಮ್ಯನು ಮಹಾಯುದ್ಧದಲ್ಲಿ ಕುರು ವೀರರೆಲ್ಲರೂ ಪಾಂಡವರ ದೆಸೆಯಿಂದ ಹತರಾದ ಬಳಿಕ ಅವರ ಸಂಸ್ಕಾರಗಳನ್ನು ಇದೇ ಮಂತ್ರಗಳಿಂದಲೇ ಮಾಡಿಸುವೆನೆಂದು ಸಂಕಲ್ಪಿಸಿ ದರ್ಭಹಸ್ತನಾಗಿ ಮಂತ್ರಹಾಡುತ್ತಾ ಹೋಗುತ್ತಿದ್ದನು

ಎಲೈರಾಯನೆ ಕೇಳು--ಇಷ್ಟು ಮಾತ್ರವೇ ಅಲ್ಲ. ''ಅಯ್ಯಯ್ಯೋ; ನಮ್ಮ ಪ್ರಭುಗಳು ಕಾಡಿಗೆ ಹೊರಟುಹೋದರು. ದುರ್ಮಾರ್ಗರಾದ ಮಕ್ಕಳ ಅಕೃತ್ಯಗಳನ್ನು ಸಹಿಸಿಕೊಂಡು ಕುರುವೃದ್ಧರು ವಿನೋದವನ್ನು ನೋಡುತ್ತಿರುವರು. ದುರ್ವಿನೀತರಾದ ಕೌರವರ ವಿಷಯದಲ್ಲಿ ನಮಗೆ ಸ್ವಲ್ಪವಾದರೂ ಪ್ರೀತಿಯಿಲ್ಲವು. ನಾವು ಈ ಪಾಂಡವರ ಹಿಂದೆಯೇ ಅರಣ್ಯವಾಸಕ್ಕೆ ಹೊರಟು ಹೋಗೋಣ. ಧರ್ಮಾತ್ಮನಾದ ಯುಧಿಷ್ಠಿರನ ಆಶ್ರಯದಲ್ಲಿದ್ದರೆ ನಮಗೆ ಯಾವ ಕಷ್ಟಗಳೂ ತೋರುವುದಿಲ್ಲ'' ಎಂದು ಊರ ಜನರೆಲ್ಲರೂ ಆ ಪಾಂಡವರನ್ನು ಹಿಂಬಾಲಿಸಿ ಹೋಗುತ್ತಿದ್ದರು. ಯುಧಿಷ್ಠಿರನು

ಅವರನ್ನೆಲ್ಲಾ ಉಚಿತವಚನಗಳಿಂದ ಸಮಾಧಾನಗೊಳಿಸಿ ಕಳುಹಿದನು. ಈ ರೀತಿಯಲ್ಲಿ ಆ ಪಾಂಡವರು ಹಸ್ತಿನಾಪುರದಿಂದ ಹೊರಟಕೂಡಲೇ ಆಕಾಶದಲ್ಲಿ ಮೋಡಗಳಿಲ್ಲದಿದ್ದರೂ ಬಲವಾಗಿ ಮಿಂಚು ಹೊಳೆಯಿತು. ಭೂಮಿಯು ನಡುಗಿತು. ಪರ್ವಕಾಲವಲ್ಲದಿದ್ದರೂ ರಾಹುವು ಸೂರ್ಯಮಂಡಲವನ್ನು ತುಡುಕಿದ್ದನು. ಎಡಗಡೆ ಕೊಳ್ಳಿ ದೆವ್ವಗಳು ಕಾಣಿಸಿಕೊಂಡವು. ಹದ್ದು, ನರಿ, ಕಾಗೆ ಮುಂತಾದ ಮಾಂಸಹಾರಿಗಳಾದ ಪ್ರಾಣಿಗಳು ಒರಲುತ್ತಿದ್ದುವು. ಇನ್ನೂ ಅನೇಕವಾಗಿ ಉತ್ಪಾತಗಳು ಕಾಣಿಸಿಕೊಂಡವು. ಎಲೈ ರಾಜನೇ. ನಿನ್ನದುರ್ಮಂತ್ರದಿಂದ ಭರತವಂಶವು ನಷ್ಟವಾಗುವಹೊತ್ತು ಬಂತು. ವಿದುರ ಧೃತರಾಷ್ಟ್ರರು ಸಂಭಾಷಿಸುತ್ತಾ ಇರುವಾಗ ಸಭಾಮಧ್ಯದಲ್ಲಿ ನಾರದ ಮಹರ್ಷಿಯು ಕಾಣಿಸಿಕೊಂಡು ಸರ್ವರಿಗೂ ಕೇಳಬರುವಂತೆ ಇಂತೆಂದನು.

" ಇಂದಿಗೆ ಹದಿನಾಲ್ಕನೆಯ ವರುಷದಲ್ಲಿ ಕೌರವರಿಗೆಲ್ಲಾ ದೊಡ್ಡ ವಿಪತ್ತು ಸಂಭವಿಸುವುದು. ದುರ್ಯೋಧನನ ಅಪರಾಧದಿಂದ ಪಾಂಡವರಿಗೆ ಕೋಪವುಂಟಾಗಿ, ಭೀಮಾರ್ಜುನರ ಪರಾಕ್ರಮದಿಂದ ಬಹುಮಂದಿ ರಾಜಕುಮಾರರು ಹತರಾಗುವರು."

ಹೀಗೆ ಹೇಳಿ ನಾರದನು ಅದೃಶ್ಯನಾದನು. ಬಳಿಕ ದುರ್ಯೋಧನು, ಕರ್ಣ, ಶಕುನಿ, ದುಶ್ಶಾಸನರೊಂದಿಗೆ ಸೇರಿ, ಮುಂದೆ ತಮಗೆ ಮಹದ್ಭಯವುಂಟಾಗದೆ ತಪ್ಪದೆಂದು ನಿರ್ಧರಿಸಿಕೊಂಡನು. ಈ ಸಂದರ್ಭದಲ್ಲಿ ಅಸ್ತ್ರಾಚಾರ್ಯನಾದ ದ್ರೋಣನನ್ನು ಬಿಟ್ಟರೆ ಮತ್ತಾರೂ ತನಗೆ ರಕ್ಷಕರಿಲ್ಲವೆಂದು ತಿಳಿದು, ಆತನ ಬಳಿಗೆ ಬಂದನು, ಆ ಕೌರವನು ಆಚಾರ್ಯನಿಗೆ ನಮಸ್ಕರಿಸಿ, ತನ್ನ ರಾಜ್ಯವನ್ನೆಲ್ಲಾ ಆಗುರುವಿನ

ಪಾದಕ್ಕೆ ಒಪ್ಪಿಸಿ, ತನ್ನನ್ನು ಕಾಪಾಡಬೇಕೆಂದು ಬೇಡಿಕೊಂಡನು. ಆಗ ದ್ರೋಣಾಚಾರ್ಯನು ಇಂತೆಂದನು.

ಎಲೈ ಕುರುಪತಿಯೇ, ನೀನು ನನ್ನ ಶರಣವನ್ನು ಅಪೇಕ್ಷಿಸಿರುವುದರಿಂದ ನಾನು ನಿನ್ನನ್ನು ಕೈ ಬಿಡಲಾರೆನು, ಆದರೂ ದೈವವು ಮಾನುಷಶಕ್ತಿಗಿಂತ ಬಲವತ್ತರವಾದುದೆಂದು ತಿಳಿ. ಆ ಪಾಂಡವರು ಹನ್ನೆರಡು ವರ್ಷಗಳ ಕಾಲ ಕಾಡಿನಲ್ಲಿ ಬ್ರಹ್ಮಚರ್ಯವನ್ನು ಕಾಪಾಡಿಕೊಂಡು ಹಿಂದಿರುಗಿ ಬಂದಮೇಲೆ ಕ್ರೋಧಾಗ್ನಿಯಿಂದ ಮೂರು ಲೋಕಗಳನ್ನಾದರೂ ದಹಿಸಬಲ್ಲರು. ಅವರು ನಿಮ್ಮ ವಿಷಯದಲ್ಲಿ ಕೈಯಲ್ಲಾದ ಸಾಹಸಮಾಡಿ, ಹಗೆ ತೀರಿಸಿಕೊಳ್ಳದೆ ಇರತಕ್ಕವರಲ್ಲ. ಎಲೈ ದುರ್ಯೋಧನನೇ ಮತ್ತೊಂದು ವಿಶೇಷವನ್ನು ಹೇಳುವೆನು. ಕೇಳು, ನನ್ನಿಂದ ಅವಮಾನಿತನಾದ ದ್ರುಪದರಾಯನು ನನ್ನ ವಧೆಗೋಸ್ಕರವಾಗಿಯೇ ಯಾಜೋಪಯಾಜದಿಂದ ಯಜ್ಞವನ್ನು ಮಾಡಿಸಿ ಧೃಷ್ಟದ್ಯುಮ್ನ ದ್ರೌಪದಿಯರೆಂಬ ಮಕ್ಕಳನ್ನು ಪಡೆದಿರುವನು. ದೇವದತ್ತವಾದ ಕವಚವೂ ಧನುರ್ಬಾಣಗಳೂ ಉಳ್ಳ ಆ ಧೃಷ್ಟದ್ಯುಮ್ನನ ದೆಸೆಯಿಂದ ನನಗೆ ಮಹದ್ಭಯ ಉಂಟಾಗಿಯೇ ಇರುವುದು. ದ್ರೋಣವಧಾರ್ಥವಾಗಿಯೇ ಅವನು ಹುಟ್ಟಿರುವನೆಂದು ಲೋಕಪ್ರಸಿದ್ಧವಾಗಿಯೇ ಇರುವುದರಿಂದ ಭಯಗ್ರಸ್ತನಾದ ನಾನು ನಿನಗೆ ಹೇಗೆ ಅಭಯವನ್ನು ಕೊಡಲಿ? ರಾಜನೆ, ಇದರಿಂದ ನೀನು ಮತ್ತಷ್ಟು ಹೆದರಬೇಡ. ಕಾಲ ಬಂದಂತೆ ನಡೆಯುವುದು ಅಗತ್ಯ. ಈಗ ನಿನಗೆ ಸರ್ವಸಂಪತ್ತುಗಳೂ ಉಂಟಾಗಿರುವುದರಿಂದ ಯಜ್ಞಯಾಗಾದಿಗಳನ್ನು ಮಾಡಿ ದೇವತಾನುಗ್ರಹವನ್ನು ಸಂಪಾದಿಸಿಕೋ. ಮುಂದೆ ವಿಪತ್ತು ಬರುವುದೆಂಬ ಹೆದರಿಕೆಯಿಂದ ಕೊರಗಬೇಡ. ನನ್ನ ಶಕ್ತಿ ಇರುವ ತನಕ ನಿನ್ನನ್ನು ಕೈ ಬಿಡದೆ ರಕ್ಷಿಸುವೆನು.

ಈ ಮಾತುಗಳನ್ನು ಕೇಳಿ ದುರ್ಯೋಧನನು ಕೈಮುಗಿದು ತಮ್ಮ ಚಿತ್ತವಿದ್ದಂತೆ ಆಗಲಿ ಎಂದು ಒಪ್ಪಿಕೊಂಡನು. ಧೃತರಾಷ್ಟ್ರನು ಮನಶ್ಚಾಂಚಲ್ಯದಿಂದ ವಿದುರನನ್ನು ನೋಡಿ “ತಮ್ಮಾ. ನನ್ನ ಮನಸ್ಸು ತುಂಬ ಕಳವಳಗೊಂಡಿದೆ. ನೀನು ಹೋಗಿ ಆ ಪಾಂಡವರಿಗೆ ಸಮಾಧಾನ ಹೇಳಿ, ಅವರನ್ನು ಹಿಂದಕ್ಕೆ ಕರೆದುಕೊಂಡು ಬಾ. ಅವರು ಬರುವುದಿಲ್ಲವೆಂದು ಹೇಳಿದರೆ ಚತುರಂಗ ಬಲವನ್ನೂ ಶಸ್ತ್ರಾಸ್ತ್ರಗಳನ್ನೂ ಅವರಿಗೆ ಸಹಾಯವಾಗಿ ಕೊಟ್ಟು ಬಾ” ಎಂದನು ವಿದುರನು ಆತನನ್ನು ನೋಡಿ, ಎಲೈ ಮಹಾರಾಯನೆ, ಇಷ್ಟು ಅನರ್ಥಗಳುಂಟಾಗದ ಹಾಗೆ ಮೊದಲೇ ತಡೆದು ಇದ್ದರೆ ಎಲ್ಲರೂ ಸೌಖ್ಯವಾಗಿರುತ್ತಿದ್ದರು. ನೀನು ಮಾಡತಕ್ಕದ್ದೆಲ್ಲಾ ಹೀಗೆಯೇ. ಈಗ ಮಿಂಚಿ ಹೋಯಿತು. ಚಿಂತಿಸಿ ಫಲವಿಲ್ಲ. ಆ ಪಾಂಡವರು ಬಹುದೂರ ಹೊರಟು ಹೋದರು. ಆ ಸುದ್ದಿ ಬಿಡು. ಎಂದು ಸಮಾಧಾನ ಹೇಳಿದನು. ಯಾರು ಬಂದು ಹೇಳಿದರೂ ಧೃತರಾಷ್ಟ್ರನ ಮನಸ್ಸು ಸಮಾಧಾನ ಹೊಂದಲಿಲ್ಲ, ಆಗ ಅವನ ಆಪ್ತನಾದ ಸಂಜಯನು ಬಂದು ಆತನನ್ನು ನೋಡಿ ಇಂತೆಂದನು.

ಸಂ.—ಎಲೈ ರಾಜನೇ. ಏಕೆ ಹೀಗೆ ನಿಟ್ಟುಸಿರು ಬಿಡುತ್ತಿರುವೆ? ನಿನಗೇನು ಕಡಿಮೆಯಾಗಿದೆ? ಆ ಪಾಂಡವರ ಸಕಲೈಶ್ವರ್ಯವೂ ನಿಮಗೆ ಸೇರಿತು, ಅವರನ್ನು ಮುನಿವೇಷದಿಂದ ಕಾಡಿಗೆ ಅಟ್ಟಿಬಿಟ್ಟಿರಿ! ನಿಷ್ಕಂಟಕವಾಗಿ ರಾಜ್ಯವನ್ನೆಲ್ಲಾ ಏಕಛತ್ರಾಧಿಪತ್ಯದಿಂದ ಆಳಿಕೊಂಡಿರಬಹುದಲ್ಲ! ಇನ್ನು ಚಿಂತಿಸುವುದಕ್ಕೆ ಕಾರಣವೇನು?

ಧೃತ:—ಮಿತ್ರನೇ. ಬಲಶಾಲಿಗಳಾದ ಪಾಂಡವರ ವೈರವನ್ನು ಸಂಪಾದಿಸಿಕೊಂಡ ನನಗೆ ನೆಮ್ಮದಿ ಎತ್ತಣದು? ಯಾವ ಕಾಲದಲ್ಲಿ ಯೇನು ವಿಪತ್ತು ಬರುವುದೋ ಎಂದು ಹೆದರುತ್ತೇನೆ.

ಸಂ:—ಎಲೈ ಪ್ರಭುವೇ ಇವೆಲ್ಲ ಅಕೃತ್ಯದ ಫಲಗಳೇ ಅಲ್ಲವೇ! ಸುಖವಾಗಿ ತಮ್ಮ ಇಂದ್ರಪ್ರಸ್ಥ ರಾಜ್ಯದಲ್ಲಿ ಆಳಿಕೊಂಡಿದ್ದ ಆ ಪಾಂಡವರನ್ನು ಮಗನ ಮಾತಿನಂತೆ ಇಲ್ಲಿಗೆ ಏತಕ್ಕೆ ಕರೆಸಿಕೊಂಡೆ? ಅವರು ಬಂದರೂ ಚಿಂತೆಯಿಲ್ಲ. ಅವರನ್ನು ಸಂತೋಷಪಡಿಸಿ ಕಳುಹದೆ ಕಪಟದ್ಯೂತಕ್ಕೆ ಏತಕ್ಕೆ ಅನುಮತಿಕೊಡಬೇಕು? ಅದೂ ಹೋಗಲಿ, ವಿದುರ, ಭೀಷ್ಮ ದ್ರೋಣಾದಿಗಳು ಬೇಡಬೇಡ, ಜೂಜನ್ನು ನಿಲ್ಲಿಸು ಎಂದು ಹೇಳುತ್ತಿದ್ದರೂ ತಡೆಯಲಾರದೆ ಇಷ್ಟು ಅನರ್ಥಕ್ಕೆ ಅವಕಾಶ ಕೊಟ್ಟವರು ಯಾರು? ರಜಸ್ವಲೆಯಾಗಿ ಏಕವಸ್ತ್ರಧರಳಾಗಿ ಅಂತಃಪುರವನ್ನು ಬಿಟ್ಟು ಹೊರಡಲಾರದೆ ಇದ್ದ ಆ ಸಾಧ್ವಿಯನ್ನು ಬಲಾತ್ಕಾರದಿಂದ ಎಳೆದು ತರಿಸಿ, ಸಭಾಮಧ್ಯದಲ್ಲಿ ಸೀರೆಯನ್ನು ಬಿಚ್ಚಿಸಿ ಅವಮಾನಪಡಿಸಿದುದು ಸಾಧುಕೃತ್ಯವೆಂದು ನಿನ್ನ ಮನಸ್ಸು ಒಡಂಬಟ್ಟಿತೇ? ಕೇಳೈಯ್ಯ ರಾಜನೆ, ನಿನ್ನ ಮಗನ ಅವಿನಯದಿಂದ ಮಹತ್ತಾದ ಭಯವು ಉಂಟಾಗದೆ ತಪ್ಪದು.

ಧೃತ:—ಸಂಜಯಾ, ನೀನು ಹೇಳಿದುದು ನಿಜ. ದೈವಬಲವಿಲ್ಲದಿದ್ದರೆ ಯಾವುದು ತಾನೇ ಸಿದ್ಧಿಸುವುದು? ನಮ್ಮ ಯತ್ನಗಳೊಂದೂ ಅದರ ಮುಂದೆ ನಡೆಯುವಹಾಗಿಲ್ಲ. ಕಾಲಮಹಿಮೆ.

ಸಂಜ:—ರಾಜನೇ ಹಾಗೆ ಹೇಳಬೇಡ. ವಿಧಿವಿಲಾಸದಿಂದ ಸಕಲ ವ್ಯಾಪಾರಗಳೂ ನಡೆಯುತ್ತಲಿರುವುವು. ಆ ವಿಧಿಯು ಕೂಡ ಅವರವರು ಮಾಡಿದ ಕರ್ಮಾನುಗುಣವಾಗಿ ತಕ್ಕ ಫಲಗಳನ್ನು ನಿರ್ಣಯಿಸುತ್ತಿರುವುದು. ಭಗವದಿಚ್ಛೆಯಂತೆ ಇವೆಲ್ಲಾ ನಡೆದವೆಂದು ತಿಳಿದು ನಿಶ್ಚಿಂತನಾಗಿರು.

ಧೃತ:—ಅಹುದು. ನನ್ನ ವಿಧಿಯು ಹೀಗೆಯೇ ಇದ್ದಿತು. ಮುಂದೆ ಇನ್ನೂ ಏನೇನು ಅನರ್ಥಗಳು ಸಂಭವಿಸುವುವೋ ಕಾಣೆನು. ಈಗ ನಾನು ಏನು ಮಾಡಬೇಕೆಂಬುದು ತೋರದೆ ಇದೆ. ನಿನಗೆ ತೋರಿರುವ ಉಪಾಯವನ್ನು ಹೇಳು; ನೋಡೋಣ.

ಸಂ:—ಮಹಾರಾಜನೇ, ಆ ಪಾಂಡವರು ಧರ್ಮಮೂರ್ತಿಗಳು. ಭಗವದನುಗ್ರಹಕ್ಕೆ ಪಾತ್ರರು, ಸದ್ಗುಣ ಸಂಪನ್ನರು. ನಿನ್ನ ಮಕ್ಕಳು ತಮಗೆ ಮಾಡಿದ ದ್ರೋಹಗಳನ್ನೆಲ್ಲಾ ಮರೆತು, ಧರ್ಮವೇ ಜಯವೆಂದು ನಂಬಿ, ಈಶ್ವರೇಚ್ಛೆಯಿಂದ, ಬಂದುದನ್ನು ಅನುಭವಿಸಿಕೊಂಡು ಸಮಾಧಾನಚಿತ್ತದಿಂದಲೇ ಇರುವರು. ಅವರು ತಮ್ಮ ಪ್ರತಿಜ್ಞೆಯಂತೆ ವನವಾಸವ್ರತವನ್ನು ಮುಗಿಸಿಕೊಂಡು ಬಂದ ಮೇಲೆಯಾದರೂ ಅವರಿಗೆ ನೀವು ಅಪಹರಿಸಿರುವ ರಾಜ್ಯಕೋಶಾದಿಗಳನ್ನು ಒಪ್ಪಿಸಿ ಯುಧಿಷ್ಠಿರನ ಮನಸ್ಸನ್ನು ಪ್ರಸನ್ನಗೊಳಿಸಿದರೆ ಇನ್ನೂ ಕೆಲವುಕಾಲ ಸುಖದಿಂದ ಇರಬಹುದು. ಇದರಿಂದ ನಿನಗೂ ನಿನ್ನ ಮಕ್ಕಳಿಗೂ ಶ್ರೇಯಸ್ಸು ಉಂಟಾಗುವುದು.

ಈ ಮಾತುಗಳನ್ನು ಕೇಳಿ ಧೃತರಾಷ್ಟ್ರನು "ಅಯ್ಯಾ ಸಂಜಯನೇ ನಡೆದುಹೋದುದನ್ನು ಚಿಂತಿಸಿ ಫಲವಿಲ್ಲ. ಮುಂದೆ ಯೋಚಿಸೋಣ" ಎಂದು ಹೇಳಿ ಅವನನ್ನು ಮನೆಗೆ ಕಳುಹಿಸಿಕೊಟ್ಟನು.

ಅತ್ತಲಾ ಪಾಂಡವರು ತಮಗೆ ಸಂಭವಿಸಿದ ಕಷ್ಟಗಳಿಗೆ ಎದೆಗುಂದದೆ ಭಗವದಿಚ್ಛಾನುಸಾರ, ಬಂದುದನ್ನನುಭವಿಸುವುದು ತಮ್ಮ ಧರ್ಮವೆಂತಲೂ, ಆರ್ತರಕ್ಷಕನಾದ ಶ್ರೀಕೃಷ್ಣನು ತನ್ನನ್ನು ನಂಬಿದವರನ್ನು ಕೈಬಿಡಲಾರನೆಂತಲೂ, ಈ ಕಷ್ಟವೇ ಎಂದೆಂದೂ ಇರಲಾರದೆಂತಲೂ, ಕ್ಷಣಿಕವಾದ ಕಷ್ಟಸುಖಗಳಿಗೋಸುಗ ಸತ್ಯಧರ್ಮಗಳನ್ನು ಉಲ್ಲಂಘಿಸುವುದು ಉಚಿತವಲ್ಲವೆಂದೂ, ಧರ್ಮಿಷ್ಠರಿಗೆ ದೈವಬಲವುಂಟಾಗುವುದೆಂತಲೂ ಭಾವಿಸಿ ಕಟ್ಟಳೆಯಪ್ರಕಾರ ಹನ್ನೆರಡು ವರ್ಷಗಳಕಾಲ ವನವಾಸವನ್ನೂ ಒಂದುವರ್ಷಕಾಲ ಅಜ್ಞಾತವಾಸವನ್ನೂ ಮಾಡುವುದಕ್ಕಾಗಿ ದ್ರೌಪದಿಯೊಡನೆ ಹೊರಟುಹೋದರು. ಶ್ರೀಕೃಷ್ಣನ ದಯೆಯಿಂದ ಕಷ್ಟಕರವಾದ ಅರಣ್ಯವಾಸವೂ ಸುಖ

ಮಯವಾಗಿ ಪರಿಣಮಿಸುವುದೆಂಬ ಭರವಸೆಯು ಅವರಿಗೆ ಸಂಪೂರ್ಣ ವಾಗಿದ್ದಿತು.

ಧರ್ಮಕ್ಕೆ ಜಯಮಕ್ಕೆ
ಧರ್ಮ ಸಂಪದಮಕ್ಕೆ
ಧರ್ಮನಿಷ್ಠರಿಗಕ್ಕೆ ಇಹಪರಗಳು ॥
ಧರ್ಮಮೂಲನು ಕೃಷ್ಣ ।
ನೂರ್ಮೆಯಿಂ ಪೊರೆವುತಿರೆ ।
ಧರ್ಮರಾಜ್ಯಮಿದಕ್ಕೆ ಶುಭವಿಭವದ ॥

ಸಂಪೂರ್ಣ

